# ಧರ್ಮ ಸಂರಕ್ಷಣೆ

ಮಾಸ್ತಿ ವೆಂಕಟೇಶ ಅಯ್ಯಂಗಾರ್

ಮಾಸ್ತಿ ವೆಂಕಟೇಶ ಅಯ್ಯಂಗಾರ್
ಜೀವನ ಕಾರ್ಯಾಲಯ ಟ್ರಸ್ಟ್ (ರಿ.)
ಬೆಂಗಳೂರು – 560 019

# ಧರ್ಮ ಸಂರಕ್ಷಣೆ

ಮಾಸ್ತಿ ವೆಂಕಟೇಶ ಅಯ್ಯಂಗಾರ್

ಮಾಸ್ತಿ ವೆಂಕಟೇಶ ಅಯ್ಯಂಗಾರ್
ಜೀವನ ಕಾರ್ಯಾಲಯ ಟ್ರಸ್ಟ್ (ರಿ.)
ಬೆಂಗಳೂರು – 560 019

**Dharma Sam-akshane** An examination of the present condition of Hinduism, and suggestions for its improvement as a first step in salvaging religion in the life of the world By Masti Venkatesa Iyengar. Pages Crown 8vo 212+viii.

Published by

M V J K Trust (Regd )
Bangalore-19

First Edition 1983
Second Edition 198೭


M V.J.K. Trust
Rs 25-00

ಮುದ್ರಣ
ಶ್ರೀ ರಾಘವೇಂದ್ರ ಪ್ರಿಂಟರ್ಸ್
ಬೆಂಗಳೂರು-18

# ಮುನ್ನುಡಿ

ಕಳೆದ ಆಗಸ್ಟ್ ತಿಂಗಳಲ್ಲಿ ನಾನು ಪ್ರಕಟಿಸಿದ 'ಅಂತರಗಂಗೆ' ಎಂಬ ನನ್ನ ಗ್ರಂಥದ ಕೊನೆಯಲ್ಲಿ, ಹಿಂದೂ ಧರ್ಮದ ಇಂದಿನ ಸ್ಥಿತಿಯಲ್ಲಿ ಕಾಣುವ ಕುಂದುಕೊರತೆಗಳನ್ನು ಗುರುತಿಸಿ ಅದನ್ನು ಪರಿಷ್ಕರಿಸಲು ಕೈಗೊಳ್ಳಬೇಕಾದ ಕಾರ್ಯಕ್ರಮವನ್ನು ರೂಪಿಸುವುದು ಸಹ ಆ ಪ್ರಬಂಧದ ವಿಷಯಕ್ಕೆ ನಿಕಟವಾಗಿ ಸಂಬಂಧಿಸಿದ ವಿಷಯ, ಆದರೆ ಅದು ತಾನೇ ತಕ್ಕಷ್ಟು ವಿಸ್ತಾರವಾದ ಪರಿಶೀಲನಕ್ಕೆ ವಸ್ತು, ಆ ಪ್ರಬಂಧದೊಳಗೆ ಅಡಗುವ ಸಣ್ಣಗಾತ್ರದ್ದಲ್ಲ, ಆದ್ದರಿಂದ ಅದನ್ನು ಪ್ರತ್ಯೇಕವಾಗಿ ನಡೆಸಬೇಕು, ಎಂದು ಅರಿಕೆ ಮಾಡಿದೆನು. ಈ ಪುಸ್ತಕದಲ್ಲಿ ಆ ಪ್ರತ್ಯೇಕ ಪರಿಶೀಲನವನ್ನು ನಡೆಸಿದ್ದೇನೆ ಇದು ನಮ್ಮ ಭಾಷೆಯ ದಿನಪತ್ರಿಕೆ 'ಕನ್ನಡಪ್ರಭ'ದಲ್ಲಿ ಐದು ತಿಂಗಳ ಕಾಲ, ವಾರ ವಾರ, ಇಪ್ಪತ್ತೆರಡು ಕಂತುಗಳಾಗಿ ಪ್ರಕಟವಾಯಿತು ಕಂತುಗಳನ್ನು ಓದಿದ ನನ್ನ ಸೋದರ ಜನ ಹಲವರು ನಾನು ಹೇಳಿರುವ ವಿಷಯಗಳನ್ನು ಜನಕ್ಕೆ ಹೇಳುವ ಅವಶ್ಯಕತೆ ಇತ್ತು ಎಂದೂ ಈ ಲೇಖನಗಳು ಪುಸ್ತಕ ರೂಪದಲ್ಲಿ ಬರುವುದು ಒಳ್ಳೆಯದೆಂದೂ ತಿಳಿಸಿ, ನನಗೆ, ಪತ್ರಿಕೆಗೆ, ಪತ್ರಗಳನ್ನು ಬರೆದರು ಲೇಖನ ಗಳನ್ನೆಲ್ಲ ಸೇರಿಸಿ ಪುಸ್ತಕವಾಗಿ ಪ್ರಕಟಿಸಬೇಕು ಎಂದು ನಾನೇ ಯೋಚಿಸಿದ್ದೆನು. ಹೀಗಾಗಿ ಈಗ ಈ ಪುಸ್ತಕವನ್ನು ನಮ್ಮ ಜನಕ್ಕೆ ಒಪ್ಪಿಸುತ್ತಿದ್ದೇನೆ.

ಅಂತರಗಂಗೆ ಪುಸ್ತಕವನ್ನು ರಚಿಸುವ ತಕ್ಷಣ ಪ್ರೇರಣೆ, ನಮ್ಮ ದೇಶದ ಉನ್ನತ ಲಕ್ಷ್ಯವನ್ನು ಹೊಗಳಿದ ನನ್ನ ಮಾತನ್ನು ಒಪ್ಪದ ನನ್ನ ಕಿರಿಯ ಸೋದರರೊಬ್ಬರು ನನಗ ಬರೆದ ಒಂದು ಪತ್ರದಿಂದ ಬಂದಿತು ಎನ್ನುವುದನ್ನು ನಾನು ಆ ಪುಸ್ತಕದ ಪ್ರಸ್ತಾವನೆಯಲ್ಲಿ ವಿಜ್ಞಾಪಿಸಿದ್ದೇನೆ ನಮ್ಮ ಧರ್ಮ ಸಂಸ್ಕೃತಿಗಳನ್ನು ಆ ಮಿತ್ರರು ಹಳಿದಂತೆ ಹಳಿಯುವುದು ನಮ್ಮ ದೇಶದ ಮಕ್ಕಳಾದವರಲ್ಲಿ ಯುಕ್ತವಲ್ಲ ಎಂದು ತಿಳಿಸಿ ನಾನು ಆ ಮಿತ್ರರಿಗೆ ಬರೆದ ಉತ್ತರವನ್ನೂ ಆ ಪ್ರಸ್ತಾವನೆಯಲ್ಲಿ ಪ್ರಕಟಿಸಿದೇನೆ ಆ ಪತ್ರಗಳನ್ನು ಈ ಪುಸ್ತಕದಲ್ಲಿಯೂ ಕೊಟ್ಟಿದೇನೆ. ನಮ್ಮ ಸಂಪ್ರದಾಯ ಆಚಾರಗಳಲ್ಲಿ ಇರುವ

ಕುಂದುಗಳನ್ನು ಎತ್ತಿ ತೋರಿಸಿರುವ ಈ ಪುಸ್ತಕದ ಮೊದಲ ಕೆಲವು ಲೇಖನಗಳನ್ನು ನೋಡಿ, ಆ ಮಿತ್ರರು ನನಗೆ ಇನ್ನೊಂದು ಪತ್ರವನ್ನು ಬರೆದದ್ದನ್ನೂ ಆ ಪುಸ್ತಕದ ಮುನ್ನುಡಿಯಲ್ಲಿ ತಿಳಿಸಿದೇನೆ

ಈ ಎರಡನೆಯ ಪತ್ರದ ತಲೆಯಲ್ಲಿ ಈ ಮಿತ್ರರ ಹೆಸರಿನ ಮುಂದೆ 'ಯೋಗಶಿರೋಮಣಿ' ಎಂಬ ಪದ ಇದೆ ಮಿತ್ರರ ಹೆಸರನ್ನು ನಾನು ಆಗಲೂ ಪ್ರಕಟಿಸಲಿಲ್ಲ, ಈಗಲೂ ಪ್ರಕಟಿಸುವುದಿಲ್ಲ. ಕಾರಣ ಏನು ಎನ್ನುವುದನ್ನು ಅಂತರಗಂಗೆ ಪುಸ್ತಕದ ಪ್ರಸ್ತಾವನೆಯಲ್ಲಿ ತಿಳಿಸಿದ್ದೇನೆ ಹೆಸರನ್ನು ಪ್ರಕಟಿಸದೆ ಇರುವುದಕ್ಕೆ ಕಾರಣ ನಿರ್ಲಕ್ಷ್ಯ ಅಲ್ಲ, ಇದನ್ನು ಇಲ್ಲಿ ಮತ್ತೆ ಅರಿಕೆ ಮಾಡುತ್ತೇನೆ.

ನಮ್ಮ ಇಂದಿನ ಜೀವನದಲ್ಲಿ ಅನೇಕ ದೋಷಗಳಿವೆ ಎಂಬುದನ್ನು ಈ ಮಿತ್ರರಂತೆ ನಾನು ಬಲ್ಲೆನು. ಈ ದೋಷಗಳಲ್ಲಿ ಹಲವನ್ನು ಸುಮಾರು ಅರವತ್ತು ವರ್ಷಗಳ ಹಿಂದೆ ಬರೆದ ಲೇಖನಗಳಲ್ಲಿ ನಾನು ಪ್ರಸ್ತಾಪಿಸಿದ್ದೇನೆ. ಈ ದೋಷಗಳು ಇವೆ ಎಂದು ಈ ದಿನ ನಾನು ಮತ್ತೆ ಹೇಳಿದರೆ ಈ ಮಿತ್ರರು ನಾನು ಅವರ ಹಳಿವಿನ ಮಾತನ್ನೆಲ್ಲ ಒಪ್ಪುತ್ತೇನೆ ಎಂದು ತಿಳಿಯಬಾರದು ವ್ಯವಹಾರ ಜೀವನದಲ್ಲಿ ದೋಷಗಳಿವೆ ಎಂಬ ಕಾರಣದಿಂದ ದೇವರು ಎಂಬ ಭಾವನೆ ಭ್ರಾಂತಿ, ಇದಾನೆ ಎನ್ನುವುದು ವಂಚನೆ, ಎಂದು ಮುಂತಾಗಿ ಈ ಮಿತ್ರರು ಹೇಳುತ್ತಾರೆ. ಇವರ ಈ ವಾದ ಸಮಂಜಸ ಅಲ್ಲ.

ದೇವರು ಎಂಬ ತತ್ತ್ವ ಉಂಟು ಎಂದವರೆಲ್ಲ ಭ್ರಾಂತಿಗೆ ಈಡಾಗಿದ್ದರು, ವಂಚಕರಾಗಿದ್ದರು, ಎನ್ನುವುದು ತೀರ ತಪ್ಪು. ಪೂರ್ವದ ಋಷಿಗಳ ಮಾತು, ವಾಲ್ಮೀಕಿ ವ್ಯಾಸರ ಮಹಾಗ್ರಂಥಗಳ ವಾಕ್ಯಗಳು, ನಮ್ಮ ದೇಶದಲ್ಲಿ ತಲೆ ಎತ್ತಿದ ಅನೇಕ ಪಂಥಗಳ ಗುರುಗಳ ಮಾತು, ಸ್ವಾಮಿ ವಿವೇಕಾನಂದರು, ಮಹಾತ್ಮಾ ಗಾಂಧಿಯವರು, ಇವರ ಮಾತು, ಇವೆಲ್ಲ ಭ್ರಾಂತಿಯಿಂದ, ವಂಚನೆಯಿಂದ ಮೂಡಿದವು ಎನ್ನುವುದು ಎಲ್ಲೆ ಮೀರಿತ ಧೃಷ್ಟತನದ ಗಳಹು ಈ ಮಿತ್ರರು ಇಂಥ ಮಾತನ್ನು ಆಡಬಾರದೆಂದು ಇವರಲ್ಲಿ ನನ್ನ ಅರಿಕೆ ಸ್ವಾಮಿ ವಿವೇಕಾನಂದರನ್ನು, ಮಹಾತ್ಮಾ ಗಾಂಧಿಯವರನ್ನು, ಭ್ರಾಂತರು ವಂಚಕರು ಎನ್ನುವ ಈ ಮಿತ್ರರು ಯೋಗಶಿರೋಮಣಿ ಆಹುದಾದರೆ ಇವರ ಯೋಗಯಾವುದು, ಎಂಥದು, ಎಂದು ನಮ್ಮಂತಹವರು ಪ್ರಶ್ನಿಸಬೇಕಾಗುತ್ತದ.

ಕೆಟ್ಟಮಾತು ನಾನು ಹೇಳುವುದಲ್ಲ. ಆದರೆ ಇವರ ಮಾತಿನಿಂದ ಬೇಸರಗೊಂಡ ಯಾರೇ ಒಬ್ಬರು ಈ ಯೋಗ ಉನ್ಮಾದಯೋಗ ಎಂದು ಹೇಳಿದರೆ ಆಶ್ಚರ್ಯಪಡಬೇಕಾದದ್ದಿಲ್ಲ ಇವರು ತಮ್ಮ ಎರಡನೆಯ ಪತ್ರದ ಕೊನೆಯಲ್ಲಿ ಇಂಥ ಒಬ್ಬರು ಇವರನ್ನು ಯಮದಂಡನೆಗೆ ಗುರಿಮಾಡಿ ಒಂದು ಪತ್ರ ಬರೆದರು ಎಂದು ತಿಳಿಸಿದ್ದಾರೆ ಅಂಥ ಜನ ಇವರ ಯೋಗವನ್ನು ಕುರಿತ ಕೆಟ್ಟಮಾತನ್ನು ಇವರು ತಮ್ಮ ಮಾತನ್ನು ಆಡುವಂತೆಯೇ ಸುಲಭವಾಗಿ ಆಡುತ್ತಾರೆ.

ಈ ಪುಸ್ತಕದ ಭಾಗಗಳನ್ನು ಬರೆಯುತ್ತ ನಾನು ಪಂಡಿತ ನೆಹರೂ ಅವರ Discovery of India ಗ್ರಂಥವನ್ನು ಮತ್ತೆ ಓದಿದೆನು. ಪಂಡಿತ ನೆಹರೂ ಏನನ್ನೆ ನಂಬಿರಲಿ ನಂಬದೆ ಬಿಟ್ಟಿರಲಿ, ನಮ್ಮ ಸಂಸ್ಕೃತಿಯ ವಿಷಯದಲ್ಲಿ ನಂಬಿಕೆಯನ್ನು ಕಳೆದುಕೊಂಡಿರಲಿಲ್ಲ ದೇವರು ಇಲ್ಲ ಎಂದು ಅವರು ತಿಳಿದಿದ್ದರು ಎಂಬ ಒಂದುಮಾತಿನಿಂದ ಆಧುನಿಕ ಎಂದು ಕರೆದುಕೊಳ್ಳುವ ಮನೋಧರ್ಮದ ನಮ್ಮ ಮಿತ್ರರು, ನೆಹರು ನಮ್ಮ ಸಂಸ್ಕೃತಿ ಸಂಪತ್ತನ್ನೆಲ್ಲ ಹಳಿದಿದ್ದರು ಎಂದು ಗ್ರಹಿಸಬಾರದು. ಪಂಡಿತರು ತಮ್ಮ ಗ್ರಂಥದಲ್ಲಿ ಫ್ರೆಂಚ್ ಪ್ರಾಜ್ಞ ಐತಿಹಾಸಿಕ Michelet ರವರ ನಮ್ಮ ಆದಿಕಾವ್ಯ ರಾಮಾಯಣದ ಪ್ರಶಂಸೆಯ ಈ ಅರ್ಥದ ವಾಕ್ಯಗಳನ್ನು ಉದ್ಧರಿಸಿದ್ದಾರೆ. "ಅತಿಯಾಗಿ ದುಡಿದ ಅಥವಾ ಸಂಕಲ್ಪಿಸಿದ ಮನುಷ್ಯ ಈ ದೊಡ್ಡ ಬಟ್ಟಲಿಂದ ಜೀವ ಯೌವನಗಳ ದೀರ್ಘವಾದ ಒಂದು ಗುಟುಕನ್ನು ಕುಡಿಯಲಿ ಪಶ್ಚಿಮದಲ್ಲಿ ಎಲ್ಲದರ ಗಾತ್ರವೂ ಕಿರಿದು ಗ್ರೀಸ್ ಸಣ್ಣದು, ನನಗೆ ಉಸಿರು ಕಟ್ಟುತ್ತದೆ. ಜೂಡಿಯಾ ಒಣಗಿದ, ನನಗೆ ಉಬ್ಬಸ ಆಗುತ್ತದೆ ನನ್ನ ದೃಷ್ಟಿ ಉನ್ನತವಾದ ಏಷಿಯದ ಕಡೆಗೆ, ಆಳವಾದ ಪೂರ್ವದ ಕಡೆಗೆ, ತುಸು ಹೊತ್ತು ತಿರುಗಲಿ. ಅಲ್ಲಿ ಇದೆ ನನ್ನ ಮಹಾಕಾವ್ಯ. ಅದು ಭಾರತ ಸಾಗರದಂತೆ ವಿಸ್ತಾರವಾಗಿದೆ. ಸೂರ್ಯನು ಅದನ್ನು ಸ್ವರ್ಣ ಲೇಪದಿಂದ ಬೆಳಗಿದ್ದಾನೆ. ಅದು ಸಮರಸದ ದಿವ್ಯರಚನೆ. ಅದರಲ್ಲಿ ಅಪಸ್ವರ ಎನ್ನುವುದಿಲ್ಲ. ಅಕ್ಷುದ್ರವಾದ ಶಾಂತಿ ಒಂದು ಅಲ್ಲಿ ಆಳುತ್ತಿದೆ. ಅಲ್ಲಿ ಇವೆ ಹೊಡೆದಾಟದ ಮಧ್ಯೆ ಅನಂತ ಮಾಧುರ್ಯ, ಅಮಿತ ಸೌಂದರ್ಯ ಅಲ್ಲಿ ಅವು ಎಲ್ಲ ಜೀವಜಾತವನ್ನು ಒಳಗೊಂಡು ಪ್ರೇಮ, ಕೃಪೆ ಕರುಣೆಯ ಆಳವರಿಯದ ಮೇರೆ ಕಾಣದ ಒಂದು ಸಾಗರ ಆಗಿವೆ."

ಪರದೇಶದ ಪ್ರಾಜ್ಞಜನ ಹಲವರು ನಮ್ಮ ಅಧ್ಯಾತ್ಮ ಸಂಪತ್ತನ್ನು

ಕುಂದುಗಳನ್ನು ಎತ್ತಿ ತೋರಿಸಿರುವ ಈ ಪುಸ್ತಕದ ಮೊದಲ ಕೆಲವು ಲೇಖನಗಳನ್ನು ನೋಡಿ, ಆ ಮಿತ್ರರು ನನಗೆ ಇನ್ನೊಂದು ಪತ್ರವನ್ನು ಬರದದ್ದನ್ನೂ ಆ ಪುಸ್ತಕದ ಮುನ್ನುಡಿಯಲ್ಲಿ ತಿಳಿಸಿದೇನೆ

ಈ ಎರಡನೆಯ ಪತ್ರದ ತಲೆಯಲ್ಲಿ ಈ ಮಿತ್ರರ ಹೆಸರಿನ ಮುಂದೆ 'ಯೋಗಶಿರೋಮಣಿ' ಎಂಬ ಪದ ಇದೆ ಮಿತ್ರರ ಹೆಸರನ್ನು ನಾನು ಆಗಲೂ ಪ್ರಕಟಿಸಲಿಲ್ಲ, ಈಗಲೂ ಪ್ರಕಟಿಸುವುದಿಲ್ಲ ಕಾರಣ ಏನು ಎನ್ನುವುದನ್ನು ಅಂತರಂಗಂಗೆ ಪುಸ್ತಕದ ಪ್ರಸ್ತಾವನೆಯಲ್ಲಿ ತಿಳಿಸಿದ್ದೇನೆ. ಹೆಸರನ್ನು ಪ್ರಕಟಿಸದೆ ಇರುವುದಕ್ಕೆ ಕಾರಣ ನಿರ್ಲಕ್ಷ್ಯ ಅಲ್ಲ, ಇದನ್ನು ಇಲ್ಲಿ ಮತ್ತೆ ಅರಿಕೆ ಮಾಡುತ್ತೇನೆ.

ನಮ್ಮ ಇಂದಿನ ಜೀವನದಲ್ಲಿ ಅನೇಕ ದೋಷಗಳಿವೆ ಎಂಬುದನ್ನು ಈ ಮಿತ್ರರಂತೆ ನಾನು ಬಲ್ಲೆನು. ಈ ದೋಷಗಳಲ್ಲಿ ಹಲವನ್ನು ಸುಮಾರು ಅರವತ್ತು ವರ್ಷಗಳ ಹಿಂದೆ ಬರೆದ ಲೇಖನಗಳಲ್ಲಿ ನಾನು ಪ್ರಸ್ತಾಪಿಸಿದ್ದೇನೆ ಈ ದೋಷಗಳು ಇವೆ ಎಂದು ಈ ದಿನ ನಾನು ಮತ್ತೆ ಹೇಳಿದರೆ ಈ ಮಿತ್ರರು ನಾನು ಅವರ ಹಳಿವಿನ ಮಾತನ್ನೆಲ್ಲ ಒಪ್ಪುತ್ತೇನೆ ಎಂದು ತಿಳಿಯಬಾರದು ವ್ಯವಹಾರ ಜೀವನದಲ್ಲಿ ದೋಷಗಳಿವೆ ಎಂಬ ಕಾರಣದಿಂದ ದೇವರು ಎಂಬ ಭಾವನೆ ಭ್ರಾಂತಿ, ಇದಾನೆ ಎನ್ನುವುದು ವಂಚನೆ, ಎಂದು ಮುಂತಾಗಿ ಈ ಮಿತ್ರರು ಹೇಳುತ್ತಾರೆ. ಇವರ ಈ ವಾದ ಸಮಂಜಸ ಅಲ್ಲ.

ದೇವರು ಎಂಬ ತತ್ತ್ವ ಉಂಟು ಎಂದವರೆಲ್ಲ ಭ್ರಾಂತಿಗೆ ಈಡಾಗಿದ್ದರು, ವಂಚಕರಾಗಿದ್ದರು, ಎನ್ನುವುದು ತೀರ ತಪ್ಪು. ಪೂರ್ವದ ಋಷಿಗಳ ಮಾತು, ವಾಲ್ಮೀಕಿ ವ್ಯಾಸರ ಮಹಾಗ್ರಂಥಗಳ ವಾಕ್ಯಗಳು, ನಮ್ಮ ದೇಶದಲ್ಲಿ ತಲೆ ಎತ್ತಿದ ಅನೇಕ ಪಂಥಗಳ ಗುರುಗಳ ಮಾತು, ಸ್ವಾಮಿ ವಿವೇಕಾನಂದರು, ಮಹಾತ್ಮಾ ಗಾಂಧಿಯವರು, ಇವರ ಮಾತು, ಇವೆಲ್ಲ ಭ್ರಾಂತಿಯಿಂದ, ವಂಚನೆಯಿಂದ ಮೂಡಿದವು ಎನ್ನುವುದು ಎಲ್ಲೆ ಮೀರಿದ ಧೃಷ್ಟತನದ ಗಳಹು ಈ ಮಿತ್ರರು ಇಂಥ ಮಾತನ್ನು ಆಡಬಾರದೆಂದು ಇವರಲ್ಲಿ ನನ್ನ ಅರಿಕೆ. ಸ್ವಾಮಿ ವಿವೇಕಾನಂದರನ್ನು, ಮಹಾತ್ಮಾ ಗಾಂಧಿಯವರನ್ನು, ಭ್ರಾಂತರು ವಂಚಕರು ಎನ್ನುವ ಈ ಮಿತ್ರರು ಯೋಗಶಿರೋಮಣಿ ಆಹುದಾದರೆ ಇವರ ಯೋಗಯಾವುದು, ಎಂಥದು, ಎಂದು ನಮ್ಮಂತಹವರು ಪ್ರಶ್ನಿಸಬೇಕಾಗುತ್ತದ

ಕೆಟ್ಟವಮಾತು ನಾನು ಹೇಳುವುದಲ್ಲ. ಆದರೆ ಇವರ ಮಾತಿನಿಂದ ಬೇಸರ ಗೊಂಡ ಯಾರೇ ಒಬ್ಬರು ಈ ಯೋಗ ಉನ್ಮಾದಯೋಗ ಎಂದು ಹೇಳಿದರೆ ಆಶ್ಚರ್ಯಪಡಬೇಕಾದದ್ದಿಲ್ಲ. ಇವರು ತಮ್ಮ ಎರಡನೆಯ ಪತ್ರದ ಕೊನೆಯಲ್ಲಿ ಇಂಥ ಒಬ್ಬರು ಇವರನ್ನು ಯಮದಂಡನೆಗೆ ಗುರಿಮಾಡಿ ಒಂದು ಪತ್ರ ಬರೆದರು ಎಂದು ತಿಳಿಸಿದ್ದಾರೆ. ಅಂಥ ಜನ ಇವರ ಯೋಗವನ್ನು ಕುರಿತ ಕೆಟ್ಟಮಾತನ್ನು ಇವರು ತಮ್ಮ ಮಾತನ್ನು ಆಡುವಂತೆಯೇ ಸುಲಭವಾಗಿ ಆಡುತ್ತಾರೆ.

ಈ ಪುಸ್ತಕದ ಭಾಗಗಳನ್ನು ಬರೆಯುತ್ತ ನಾನು ಪಂಡಿತ ನೆಹರೂ ಅವರ Discovery of India ಗ್ರಂಥವನ್ನು ಮತ್ತೆ ಓದಿದೆನು. ಪಂಡಿತ ನೆಹರೂ ಏನನ್ನೆ ನಂಬಿರಲಿ ನಂಬದ ಬಿಟ್ಟಿರಲಿ, ನಮ್ಮ ಸಂಸ್ಕೃತಿಯ ವಿಷಯದಲ್ಲಿ ನಂಬಿಕೆ ಯನ್ನು ಕಳೆದುಕೊಂಡಿರಲಿಲ್ಲ. ದೇವರು ಇಲ್ಲ ಎಂದು ಅವರು ತಿಳಿದಿದ್ದರು ಎಂಬ ಒಂದುಮಾತಿನಿಂದ ಆಧುನಿಕ ಎಂದು ಕರೆದುಕೊಳ್ಳುವ ಮನೋಧರ್ಮದ ನಮ್ಮ ಮಿತ್ರರು, ನೆಹರು ನಮ್ಮ ಸಂಸ್ಕೃತಿ ಸಂಪತ್ತನ್ನೆಲ್ಲ ಹಳಿದಿದ್ದರು ಎಂದು ಗ್ರಹಿಸಬಾರದು. ಪಂಡಿತರು ತಮ್ಮ ಗ್ರಂಥದಲ್ಲಿ ಫ್ರೆಂಚ್ ಪ್ರಾಜ್ಞ ಐತಿಹಾಸಿಕ Michelet ರವರ ನಮ್ಮ ಆದಿಕಾವ್ಯ ರಾಮಾಯಣದ ಪ್ರಶಂಸೆಯ ಈ ಅರ್ಥದ ವಾಕ್ಯಗಳನ್ನು ಉದ್ಧರಿಸಿದ್ದಾರೆ. "ಅತಿಯಾಗಿ ದುಡಿದ ಅಥವಾ ಸಂಕಲ್ಪಿಸಿದ ಮನುಷ್ಯ ಈ ದೊಡ್ಡ ಬಟ್ಟಲಿಂದ ಜೀವ ಯೌವನಗಳ ದೀರ್ಘವಾದ ಒಂದು ಗುಟುಕನ್ನು ಕುಡಿಯಲಿ. ಪಶ್ಚಿಮದಲ್ಲಿ ಎಲ್ಲದರ ಗಾತ್ರವೂ ಕಿರಿದು. ಗ್ರೀಸ್ ಸಣ್ಣದು, ನನಗೆ ಉಸಿರು ಕಟ್ಟುತ್ತದೆ. ಜೂಡಿಯಾ ಒಣಗಿದೆ, ನನಗೆ ಉಬ್ಬಸ ಆಗುತ್ತದೆ. ನನ್ನ ದೃಷ್ಟಿ ಉನ್ನತವಾದ ಏಷಿಯದ ಕಡೆಗೆ, ಆಳವಾದ ಪೂರ್ವದ ಕಡೆಗೆ, ತುಸು ಹೊತ್ತು ತಿರುಗಲಿ. ಅಲ್ಲಿ ಇದೆ ನನ್ನ ಮಹಾಕಾವ್ಯ. ಅದು ಭಾರತ ಸಾಗರದಂತೆ ವಿಸ್ತಾರವಾಗಿದೆ. ಸೂರ್ಯನು ಅದನ್ನು ಸ್ವರ್ಣ ಲೇಪದಿಂದ ಬೆಳಗಿದ್ದಾನೆ. ಅದು ಸಮರಸದ ದಿವ್ಯರಚನೆ. ಅದರಲ್ಲಿ ಅಪಸ್ವರ ಎನ್ನುವುದಿಲ್ಲ. ಅಕ್ಷುದ್ರವಾದ ಶಾಂತಿ ಒಂದು ಅಲ್ಲಿ ಆಳುತ್ತಿದೆ. ಅಲ್ಲಿ ಇವೆ ಹೊಡೆದಾಟದ ಮಧ್ಯೆ ಅನಂತ ಮಾಧುರ್ಯ, ಅಮಿತ ಸೌಂದರ್ಯ. ಅಲ್ಲಿ ಅವು ಎಲ್ಲ ಜೀವಜಾತವನ್ನು ಒಳಗೊಂಡು ಪ್ರೇಮ, ಕೃಪೆ ಕರುಣೆಯ ಆಳವರಿಯದ ಮೇರೆ ಕಾಣದ ಒಂದು ಸಾಗರ ಆಗಿವೆ."

ಪರದೇಶದ ಪ್ರಾಜ್ಞಜನ ಹಲವರು ನಮ್ಮ ಅಧ್ಯಾತ್ಮ ಸಂಪತ್ತನ್ನು

ಹೊಗಳಿ ಹೇಳಿದ ಇತರ ವಾಕ್ಯ ಕೆಲವನ್ನು ಅಂತರಗಂಗೆ ಪುಸ್ತಕದ ಪ್ರಸ್ತಾವನೆಯಲ್ಲಿ ಅರಿಕೆಮಾಡಿ ತಿಳಿಸಿದೆ ಅವುಗಳ ಜೊತೆಗೆ ನಾನು ಈಚೆಗೆ ಗಮನಿಸಿರುವ ಅಮೆರಿಕನ್ ತತ್ತ್ವಜ್ಞ ಎಮರ್ಸನ್‌ರವರ ಕೆಲವು ವಾಕ್ಯಗಳನ್ನು ಒಪ್ಪಿಸಲು ಬಯಸುತ್ತೇನೆ ಇವು ಭಗವದ್ಗೀತೆಯನ್ನು ಕುರಿತ ವಾಕ್ಯಗಳು.

"I owed—my friends and I owed—a magnificent debt to the Bhagavadgita It was the first of books, it was as if an empire spoke to us, nothing small or unworthy, but large, serene, consistent the voice of an old intelligence which in another age and climate had pondered, and thus disposed of the same questions which exercise us"

(Illustrated Weekly, 1982 August 8–14, ಪುಟ 37ರಲ್ಲಿ ಪ್ರಕಟವಾದ ಒಂದು ಲೇಖನ)

"ನಾನೂ ನನ್ನ ಮಿತ್ರರೂ ಭಗವದ್ಗೀತೆ ಗ್ರಂಥಕ್ಕೆ ಅಧಿಕವೆಂದರ ಅಧಿಕ ಆದ ರೀತಿಯಲ್ಲಿ ಋಣಿಗಳು ಗ್ರಂಥಗಳಲ್ಲಿ ಅದರ ಸ್ಥಾನ ಮೊದಲದು. ಅದರ ನುಡಿ ಚಕ್ರಾಧಿಪತ್ಯವೊಂದು ನಮ್ಮೊಂದಿಗೆ ಮಾತಾಡುತ್ತಿದೆಯೋ ಎಂಬ ಎತ್ತರದ್ದು. ಅದರಲ್ಲಿ ಅಲ್ಪವಾದದ್ದು, ಅಯೋಗ್ಯ ಆದದ್ದು ಒಂದು ಲೇಶ ಇಲ್ಲ, ಎಲ್ಲವೂ ಭೂಮ, ಶಾಂತ, ಸುಸಂಘಟಿತ, ಅದರ ಧ್ವನಿ ಈ ದಿನ ನಮ್ಮನ್ನು ಕಾಡುತ್ತಿರುವ ಇವೇ ಸಮಸ್ಯೆಗಳನ್ನು ಹಿಂದೆ ಒಂದು ಕಾಲದಲ್ಲಿ ಬೇರೆ ದೇಶದಲ್ಲಿ ಹಿಡಿದು ಚಿಂತಿಸಿದ ಪುರಾತನ ಪ್ರಜ್ಞ ಒಂದರ ಧ್ವನಿ."

ಹೊರಗಿನ ಜನದ ಅಭಿಪ್ರಾಯದ ಮಾನದಂಡದಿಂದ ನಮ್ಮ ಸಂಸ್ಕೃತಿಯ ಯೋಗ್ಯತೆಯನ್ನು ಅಳೆಯುವ ನಮ್ಮ ಮಿತ್ರರು ಈ ವಿದೇಶಿ ತತ್ತ್ವಜ್ಞರ ಈ ಪ್ರಶಂಸೆಗೆ ಗಮನ ಕೊಡಬೇಕು.

ಈ ಎಲ್ಲ ಮಾತಿನ ಸಾರ ಇದು ಇಂದಿನ ನಮ್ಮ ರಾಷ್ಟ್ರಜೀವನದಲ್ಲಿ ನೂರು ದೋಷ ಇವೆ. ದೋಷ ಇಲ್ಲದ ದೇಶ ಒಂದೂ ಇಲ್ಲ. 'ನಕಶ್ಚಿನ್ನಾಪರಾಧ್ಯತಿ.' ದೋಷ ಇವೆ ಎಂದು ಒಟ್ಟು ಸಂಸ್ಕೃತಿಯನ್ನೇ ತಿಪ್ಪೆಗೆ ಎಸೆಯುವ ಕ್ರಮ ವಿವೇಕವಲ್ಲ ದೋಷ ಏನು ತಿಳಿದು, ಅದನ್ನು ಸರಿಪಡಿಸುವ ಕ್ರಮ ಯಾವುದು ಯೋಚಿಸಿ, ತಕ್ಕ ಪರಿಷ್ಕರಣ ನಡೆಸಿ, ಬಾಳುವುದು ಒಂದೇ

ಯುಕ್ತವಾದ ಮಾರ್ಗ ಈ ಮಾರ್ಗ ಯಾವುದು ಎಂದು ಈ ಪ್ರಬಂಧದಲ್ಲಿ ನನ್ನಿಂದ ಆದಷ್ಟು ವಿವೇಚನೆಯಿಂದ ವಿಜ್ಞಾಪಿಸಿದ್ದೇನೆ ನಾಡಿನ ಜೀವನವನ್ನು ರೂಪಿಸುತ್ತಿರುವ ಹಿರಿಯಜನ ಈ ವಿಜ್ಞಾಪನೆಗೆ ಗಮನಕೊಡಬೇಕೆಂದು ನನ್ನ ಪ್ರಾರ್ಥನೆ ನಮ್ಮ ಜನತೆಯೂ ಈ ವಿಜ್ಞಾಪನೆಯನ್ನು ಲಾಲಿಸಿ ಮುಂದಿನ ದಾರಿ ಏನು ಎಂಬುದನ್ನು ಯೋಚಿಸುವಂತೆ ಆದರೆ ನನ್ನ ಲೇಖನ ಸಾರ್ಥಕ ಆಯಿತು.

ಪುಸ್ತಕವನ್ನು ಲೇಖನಮಾಲೆಯಾಗಿ ಪ್ರಕಟಿಸಿದ 'ಕನ್ನಡಪ್ರಭ' ಪತ್ರಿಕೆಯ ಪ್ರವರ್ತಕರಿಗೆ ನನ್ನ ವಂದನೆ. ಇತ್ತೀಚಿನ ನನ್ನ ಉಳಿದ ಪುಸ್ತಕಗಳಂತೆ ಈ ಪುಸ್ತಕವನ್ನು ರಚಿಸುವಲ್ಲಿಯೂ ಕೆಲಸದ ಹೊರೆಯನ್ನು ಹೊತ್ತ ನನ್ನ ಹಿರಿಅಳಿಯಂದಿರು ಶ್ರೀ ಶೇಷಾದ್ರಿಯವರು ನನ್ನ ಕಿರಿಯ ಮಗಳು ಸೌ॥ ಅರವಿಂದಮ್ಮ, ಇವರ ಅಕ್ಕರೆಯ ಸೇವೆಯನ್ನು ನಾನು ಇಲ್ಲಿ ನೆನೆಯುತ್ತೇನೆ

ಬೆಂಗಳೂರು
ದುಂದುಭಿ ಸಂ॥ ಫಾಲ್ಗುಣ
ಕೃಷ್ಣ ತ್ರಯೋದಶಿ
ತಾ॥ ೧೨–೩–೧೯೮೩

ಮಾಸ್ತಿ ವೆಂಕಟೇಶ ಅಯ್ಯಂಗಾರ್

## ಟಿಪ್ಪಣಿ

೫೧ನೆಯ ಪುಟದ "ದೇವರನ್ನು ಕುರಿತ ಭಾವಗಳ ಮಧ್ಯೆ ಸ್ಪರ್ಧೆ", ೫೭ನೆಯ ಪುಟದ "ಕ್ಷೇತ್ರಗಳ ಕಥೆಗಳು," ೧೩೧ನೆಯ ಪುಟದ "ಪವಾಡಗಳು, ಸಿದ್ಧಿಗಳು," ಹೊಸ ಪರಿಚ್ಛೇದಗಳ ಶೀರ್ಷಿಕೆಗಳು ಸಂಖ್ಯೆಗಳು ಬಿಟ್ಟು ಹೋಗಿವೆ ಇದಕ್ಕೆ ಕ್ರಮವಾಗಿ ೪–ಎ, ೪–ಬಿ, ೯–ಎ — ಎಂದು ಓದುವವರು ಸೇರಿಸಿಕೊಳ್ಳಬೇಕೆಂದು ಬೇಡಿದೆ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| 36 | 13 | ಬಂದು | ಒಂದು |
| 112 | 3 | ಸವ್ಮ್ರನೆ | ಸುವ್ಮ್ರನೆ |
| 117 | 21 | ಸ್ವಲ್ಬ | ಸ್ವಲ್ಪ |
| 118 | 15 | ಸ್ಬಸ್ಥವಾದರು | ಸ್ಪಸ್ಥವಾದರು |
| 118 | 16 | ಆಚರ್ಾರು | ಆಚಾರ್ಯರು |
| 126 | 13 | ಹೆಣನ್ನು | ಹೆಣ್ಣನ್ನು |
| 127 | 8 | ಆಲೋಲೆ | ಆವೋಲೆ |
| 128 | 8 | ವೃತಾಂತ | ವೃತ್ತಾಂತ |
| 135 | 5 | ಆಶ್ವಯರ್ | ಆಶ್ಚರ್ಯ |
| 148 | 9 | Benediction | Benedicted |
| 148 | 10 | Benedicted | Benediction |

# ಧರ್ಮ ಸಂರಕ್ಷಣೆ

## ೧

### ಧರ್ಮದ ಗ್ಲಾನಿ

ಪ್ರಪಂಚದ ವ್ಯವಹಾರದಲ್ಲಿ ಈಗ ಧರ್ಮ, ದೇವರು, ಎಂಬ ಭಾವನೆಗಳಿಗೆ ಬಹಳವೇನೂ ಎಡೆ ಇಲ್ಲ. ರೋಮನ್ ಕ್ಯಾಥೊಲಿಕ್ ಕ್ರೈಸ್ತ ರಾಷ್ಟ್ರಗಳಲ್ಲಿ, ಭರತವರ್ಷದಲ್ಲಿ, ಇವಕ್ಕೆ ಸ್ವಲ್ಪ ಎಡೆ ಇರುವಂತೆ ಹೊರಕ್ಕೆ ಕಾಣುತ್ತದೆ. ದಿಟದಲ್ಲಿ ಅಲ್ಲಿಯೂ ಇವುಗಳ ಪ್ರಭಾವ ಕಡಮೆಯೇ ಆಗಿದೆ ಈ ಮಧ್ಯೆ ನಮ್ಮ ರಾಷ್ಟ್ರದ ಆಡಳಿತ ತಾನು ಸೆಕ್ಯುಲರ್ ಎಂದು ಹೇಳಿಕೊಳ್ಳುತ್ತ ಇತರ ಮತಗಳ ಗೋಜಿಗೆ ಹೋಗದೆ ಹಿಂದೂ ಮತದ ಬಳಕೆಗಳನ್ನು ಮಾತ್ರ ಸುಧಾರಿಸಲು ತೊಡಗಿ ರಾಷ್ಟ್ರದ ಬಹುಸಂಖ್ಯೆಯ ಜನರಲ್ಲಿ ಶಂಕೆಗಳನ್ನು ಮೂಡಿಸಿದೆ. ಹಿಂದೂ ವ್ಯವಹಾರದಲ್ಲಿರುವ ಒಂದು ದೋಷದ ಕಾರಣದಿಂದಾಗಿ ನಮ್ಮ ಸಮಾಜದ ಒಂದು ಸಮುದಾಯದ ಜನ ಈ ಮತವನ್ನು ಬಿಟ್ಟು ಇತರ ಮತಗಳನ್ನು ಸೇರುತ್ತಿದ್ದಾರೆ. ಇದರಿಂದ ಭಯಪಟ್ಟು ಹಿಂದೂ ಮತದ ಪ್ರಮುಖರು ವ್ಯವಹಾರದಲ್ಲಿ ಮಾರ್ಪಾಟುಗಳನ್ನು ಮಾಡಲು ಯತ್ನಿಸುತ್ತಿದ್ದಾರೆ. ಇದು ಒಳ್ಳೆಯದೇ ಬೇರೆ ಮತಗಳನ್ನು ಆದರದಿಂದ ಕಾಣುವುದು ಹಿಂದೂ ಮತದ ವಿಶೇಷ ಗುಣ ಬೇರೆ ಮತಗಳು ಈ ಔದಾರ್ಯವನ್ನು ಬೆಳೆಸಿಕೊಂಡಿಲ್ಲ. ಧರ್ಮಗಳು ಉಳಿಯಬೇಕೆಂದರೆ ಮತಗಳು ಪರಸ್ಪರ ಆದರದಿಂದ ನಡೆಯಬೇಕು. ಇದನ್ನು ಇತರ ಮತಗಳು ತಿಳಿದುಕೊಳ್ಳಬೇಕಾಗಿದೆ. ಈ ಅರ್ಥದಲ್ಲಿ ಹಿಂದೂ ಮತ ಪರಿಷ್ಕೃತವಾಗಿ ಧರ್ಮ ಸಂರಕ್ಷಣೆಗೆ ಯುಕ್ತ ರೀತಿಯಲ್ಲಿ ಪ್ರಭಾವ ಬೀರುವ ಶಕ್ತಿಯನ್ನು ಗಳಿಸಬೇಕು. ಹೀಗೆ ಮಾಡಲು ಅದರ ಇಂದಿನ ವ್ಯವಹಾರದಲ್ಲಿ ಆಗಬೇಕಾದ ಮಾರ್ಪಾಡುಗಳು ಯಾವುವು ಎಂದು ನಮ್ಮ ಜನ ಈಗ ಯೋಚಿಸಬೇಕಾಗಿದೆ ಈ ಪ್ರಬಂಧದಲ್ಲಿ ಈ ವಿಷಯವನ್ನು ಚರ್ಚಿಸಿದೆ.

# ಧರ್ಮ ಸಂರಕ್ಷಣೆ

## ೧

## ಭರತವರ್ಷದ ಸಂಪ್ರದಾಯ

ಭರತವರ್ಷದ ಇತಿಹಾಸದ ವಸ್ತು ಅದರ ಜನತೆಯ ರಾಜಕೀಯ ಜೀವನಕ್ಕಿಂತ ಹೆಚ್ಚಾಗಿ ಅದರ ಧಾರ್ಮಿಕ ಜೀವನ. ವೇದಗಳ ಕಾಲದಲ್ಲಿ ಆರಂಭ ಆದ ಈ ಜೀವನ ಆಗ ರಾಜಕೀಯ ಆಗಬೇಕಾದ ಕಾರಣ ಇರಲಿಲ್ಲ. ಅದು ಮುಖ್ಯವಾಗಿ ಧರ್ಮವನ್ನು ಕುರಿತಿತ್ತು. ಆ ಧರ್ಮ ಸಹ ತನ್ನನ್ನು ತಾನು ಒಂದು ಹೆಸರಿಂದ ಕರೆದುಕೊಂಡ ಧರ್ಮ ಅಲ್ಲ. ಅದು ಈ ಧರ್ಮ, ಆ ಧರ್ಮ, ಅಲ್ಲ, ಧರ್ಮ ಅಷ್ಟೆ. ಅಂದಿನ ಪ್ರಾಜ್ಞರಿಗೆ ಗೋಚರವಾದ ಧರ್ಮ. ಆಮೇಲಿನ ಕಾಲದಲ್ಲಿ ಜನ ಅದನ್ನು ಸನಾತನ ಧರ್ಮ ಎಂದು ಕರೆದರು. ಹೊರಗಿನ ಜನ ಅದನ್ನು ಸಿಂಧುದೇಶದ ಧರ್ಮ ಎಂಬ ಅರ್ಥದಲ್ಲಿ ಹಿಂದೂ ಧರ್ಮ ಎಂದು ಹೆಸರಿಸಿದರು. ಅಂದಿನ ಆ ಧರ್ಮ ಕಾಲಕ್ರಮದಲ್ಲಿ ಹತ್ತಾರು ರೀತಿ ಮಾರ್ಪಟ್ಟು ಇಂದೂ ನಮ್ಮಲ್ಲಿ ಬಳಕೆಯಲ್ಲಿದೆ. ಎರಡು ಸಾವಿರ ವರ್ಷಗಳಿಗೂ ಹೆಚ್ಚು ಹಿಂದೆ ರೂಪುಗೊಂಡ ಜೈನ, ಬೌದ್ಧ ಮತಗಳು ಈ ಧರ್ಮ ತಳೆದ ಎರಡು ಸುಧಾರಕ ರೂಪಗಳು. ಎಂಟು ನೂರು ವರ್ಷಗಳ ಹಿಂದೆ ಇದರಲ್ಲಿ ವೀರಶೈವ ಎಂಬ ಸುಧಾರಕ ಮತ, ಐದು ನೂರು ವರ್ಷಗಳ ಹಿಂದೆ ಸಿಖ್ ಎಂಬ ಸುಧಾರಕ ಮತ ರೂಪುಗೊಂಡವು. ಎಷ್ಟೇ ಮಾರ್ಪಟ್ಟರೂ ಇದು ಎಳ ಹರಿದಿಲ್ಲ, ಅವಿಚ್ಛಿನ್ನವಾಗಿ ನಡೆದುಬಂದಿದೆ. ಮಧ್ಯೆ ನಮ್ಮ ದೇಶದ ರಕ್ಷಣೆಯನ್ನು ಬಯಸಿ ಪರ್ಷಿಯಾದಿಂದ ಜರಥೂಷ್ಟ್ರ ಗುರುವಿನ ಅನುಯಾಯಿ ಜನ ಇಲ್ಲಿಗೆ ವಲಸೆ ಬಂದರು. ಈ ಭೂಮಿ ಅವರಿಗೆ ನೆಲೆ ನೀಡಿತು. ಜರಥೂಷ್ಟ್ರ ಧರ್ಮ ಈಗ ಉಳಿದಿರುವುದು ಭರತವರ್ಷದಲ್ಲಿಯೇ, ಅದರ ಮೂಲಸ್ಥಾನವಾದ ಪರ್ಷಿಯಾ ದೇಶದಲ್ಲಿ ಅದರ ಹೆಸರೂ ಉಳಿದಿಲ್ಲ. ಅದಕ್ಕೂ ಮೊದಲು ಕ್ರೀಸ್ತ ಗುರುವಿನ ಶಿಷ್ಯ ಒಬ್ಬರು ಕೇರಳಕ್ಕೆ ಬಂದರು, ಕ್ರೈಸ್ತ ಮತವನ್ನು ಪ್ರಚಾರ ಮಾಡಿದರು, ಎಂದು ಪ್ರತೀತಿ ಇದೆ. ಈಗ ಕೇರಳದಲ್ಲಿ ಬಾಳುತ್ತಿರುವ ಸಿರಿಯನ್ ಕ್ರಿಶ್ಚಿಯನ್ ಎಂಬ ಸಮುದಾಯ ಆಗ ಕ್ರೈಸ್ತ ಮತವನ್ನು ಸ್ವೀಕರಿಸಿದ ಜನ ಪೀಳಿಗೆ ಎನ್ನುವುದು ಇಂದಿನ ತಿಳುವಳಿಕೆ. ಇದು ಪ್ರತೀತಿಯಾಗಿರುತ್ತ ಕ್ರೈಸ್ತ ಮತ ವಿಜಯನಗರಚಕ್ರಾಧಿಪತ್ಯದ ವೈಭವದ ಕಾಲದಲ್ಲಿ ಪ್ರತ್ಯಕ್ಷವಾಗಿ ನಮ್ಮಲ್ಲಿಗೆ

ಬಂದಿತು. ಆಗ ಗೋವಾ ಭೂಮಿಯನ್ನು ಚಕ್ರವರ್ತಿಯಿಂದ ತಮ್ಮ ವ್ಯವಹಾರಕ್ಕಾಗಿ ಪಡೆದ ಪೋರ್ಚುಗೀಸ್ ಜನರು ಆ ಪ್ರದೇಶದಲ್ಲಿ ತಮ್ಮ ಮತವನ್ನು ಹರಡಲೂ ಯತ್ನ ನಡೆಸಿದರು. ಅದಕ್ಕೂ ಮುನ್ನ ಇಸ್ಲಾಂ ದಾಳಿಕಾರ ಘಸ್ನಿ ಮಹಮ್ಮದ್‌ನ ದಿನದಲ್ಲಿ ನಮ್ಮ ರಾಷ್ಟ್ರಕ್ಕೆ ಮಹಮ್ಮದ್ ಗುರುವಿನ ಮತ ಬಂದಿತು. ಹೊಸಕಾಲದಲ್ಲಿ ಈ ಎಲ್ಲ ಮತಗಳ ಪ್ರಚಾರ ಕಾರಣದಿಂದ ಧರ್ಮವನ್ನು ಕುರಿತು ಒಂದು ಭಾವನೆ ನಮ್ಮ ಜನತೆಯಲ್ಲಿ ಬೆಳೆದಿದೆ. ತೀರ ಈಚೆಗೆ ನಮ್ಮ ರಾಷ್ಟ್ರಕ್ಕೆ ದೇವರು ಧರ್ಮ ಎಂಬ ಭಾವನೆಗಳನ್ನು ಅಲ್ಲಗಳೆಯುವ ಮಾರ್ಕ್ಸ್‌ವಾದ ಬಂದಿದೆ. ಇದರ ವಾದಿಗಳು ಧರ್ಮ ದೇವರು ಎಂಬ ಪದಗಳನ್ನು ಅಲ್ಲಗಳೆಯುತ್ತಾರೆ, ತಮ್ಮ ಮತ ಒಂದು ಧರ್ಮ ಎಂದು ಹೇಳುವುದಿಲ್ಲ. ಆದರೂ ದಿಟದಲ್ಲಿ ಈ ವಾದವೂ ಒಂದು ಧರ್ಮ. ಧರ್ಮ ಎನ್ನುವುದು ಜನಸಮುದಾಯಗಳ ನಡತೆಯನ್ನು ರೂಪಿಸುವ ಭಾವಗಳ ಸಮುಚ್ಚಯ. ಮಾರ್ಕ್ಸ್‌ವಾದ ಇಂಥ ಒಂದು ಸಮುಚ್ಚಯ ಆದ್ದರಿಂದ ಅದೂ ಒಂದು ಧರ್ಮ. ಹೀಗಾಗಿ ಈಗ ನಮ್ಮ ರಾಷ್ಟ್ರ ಲೋಕದಲ್ಲಿ ಬಳಕೆಯಲ್ಲಿರುವ ಎಲ್ಲ ಮುಖ್ಯ ಮತಗಳ ಸಂಮಿಶ್ರಣ ನಮ್ಮೀಳನದ ಏಕೈಕ ಕ್ಷೇತ್ರ ಆಗಿದೆ.

## ಸಂಧಿಕಾಲ

ಪ್ರಪಂಚದ ಇತಿಹಾಸದಲ್ಲಿ ನಮ್ಮ ಈ ಕಾಲ ಒಂದು ಸಂಧಿಕಾಲ. ಶಕ್ತಿವಂತ ಧೀಮಂತ ಆದ ಎರಡು ರಾಷ್ಟ್ರಗಳು ಇಂದು ಪ್ರಪಂಚದ ಪ್ರಮುಖ ರಾಷ್ಟ್ರಗಳಾಗಿವೆ. ಅಮೇರಿಕದ ಸಂಯುಕ್ತ ಸಂಸ್ಥಾನಗಳು ರಾಷ್ಟ್ರವೂ ವೀರ ಸಮತಾವಾದಿ ಆದ ರಷಿಯಾ ರಾಷ್ಟ್ರವೂ ಹತ್ತಿರ ಹತ್ತಿರ ಸಮಸಮಾನವಾದ ಅತ್ಯಂತ ಪ್ರಬಲ ರಾಷ್ಟ್ರಗಳಾಗಿ ವಿರೋಧಿಗಳಾಗಿ ನಿಂತಿವೆ. ಒಂದೊಂದೂ ಅಣು ಬಾಂಬುಗಳ ಒಂದು ಭಂಡಾರವನ್ನು ಮಾಡಿಕೊಂಡು, ಒಂದು ಕ್ಷಣದಲ್ಲಿ ಲೋಕವನ್ನೆಲ್ಲ ನಾಶ ಮಾಡಬಲ್ಲೆವು ಎಂದು ಹೇಳಬಹುದಾದಷ್ಟು ಶಕ್ತಿವಂತವಾಗಿವೆ ಯಾವ ಒಂದು ರಾಷ್ಟ್ರ ದುಡುಕಿದರೂ ಆಯಿತು. ಆ ಬಳಿಕ ಲೋಕದಲ್ಲಿ ಇಂದಿನ ಜೀವನ ಇಲ್ಲ. ಎರಡೂ ರಾಷ್ಟ್ರ ವಿನಾಶಕ್ಕೆ ಅಂಜಿ ಸದ್ಯ ದುಡುಕದೆ ಇವೆ. ಆದರೆ ಎರಡೂ, ಬೀದಿಯಲ್ಲಿ, ಕಾಡಿನಲ್ಲಿ, ಕೋಪಗೊಂಡು ಎದುರೆದುರಾಗಿರುವ ಎರಡು ನಾಯಿ ಅಥವಾ ಮಂಗ ಎಂಬಂತೆ ಗೊರ್ ಗೊರ್ ಎಂದು

ಶಬ್ದ ಮಾಡುತ್ತ ಪರಸ್ಪರ ಮೂದಲೆಯಲ್ಲಿ ತೊಡಗಿವೆ ಶಕ್ತಿಯಲ್ಲಿ ಈ ರಾಷ್ಟ್ರಗಳಿಗೆ ಸಮ ಅಲ್ಲದ ರಾಷ್ಟ್ರಗಳು ಅನೇಕ, ಒಂದಲ್ಲ ಒಂದು ಪಕ್ಷದಲ್ಲಿ ನಿಂತು, ಈ ನಾಯಕ ರಾಷ್ಟ್ರಗಳ ಮನಸ್ಸನ್ನು ಅನುಸರಿಸುತ್ತ ನಿಂತಿವೆ. ಉಳಿದವು ತಾವು ಈ ಎರಡು ರಾಷ್ಟ್ರಗಳಲ್ಲಿ ಯಾವುದರ ಪಕ್ಷದವರೂ ಅಲ್ಲ, ನಾವು ಪಕ್ಷಗಳ ಹೊರಗಿದ್ದೇವೆ, ಎನ್ನುತ್ತಿವೆ. ಹೀಗೆನ್ನುತ್ತಿರುವ ನಿರ್ಲಿಪ್ತರ ರಾಷ್ಟ್ರಗಳಲ್ಲಿ ಪ್ರಮುಖವಾದ ಒಂದು ರಾಷ್ಟ್ರ ನಮ್ಮ ರಾಷ್ಟ್ರ, ಭರತವರ್ಷ

## ಯಕ್ಷಪ್ರಶ್ನೆಯ ಸ್ಥಿತಿ

ನಮ್ಮ ರಾಷ್ಟ್ರ ಅಮೇರಿಕದಂತೆ, ರಷ್ಯಾದಂತೆ ಬಲಿಷ್ಠ ರಾಜ್ಯ ಅಲ್ಲದಿದ್ದರೂ ರಾಷ್ಟ್ರಗಳ ಸಮುದಾಯದಲ್ಲಿ ಗಣ್ಯವಾದ ಸ್ಥಾನವನ್ನು ಪಡೆದಿದೆ. ಪ್ರಜಾಸಂಖ್ಯೆ ಕೋಟಿ ಕೋಟಿ ಎನ್ನುವುದು ಒಂದು, ರಾಷ್ಟ್ರದ ಇತಿಹಾಸ ಗೌರವನೀಯ ಎನ್ನುವುದು ಒಂದು, ಇದರ ಸಂಸ್ಕೃತಿ ಉನ್ನತವಾದದ್ದು ಎನ್ನುವುದು ಒಂದು, ಇವೆಲ್ಲ ಕಾರಣವಾಗಿ ಪ್ರಪಂಚದ ಎಲ್ಲ ರಾಷ್ಟ್ರಗಳೂ ನಮ್ಮ ರಾಷ್ಟ್ರವನ್ನು ತಕ್ಕಷ್ಟು ಮರ್ಯಾದೆಯಿಂದ ಕಾಣುತ್ತಿವೆ ಪ್ರಜಾಸಂಖ್ಯೆ ಇತಿಹಾಸ ಸಂಸ್ಕೃತಿ ಎಂಬ ಕಾರಣಗಳಿಂದ ಚೀನಾ ಈಗ ನಲವತ್ತು ವರ್ಷಗಳವರೆಗೆ ಈ ರಾಷ್ಟ್ರದಂತೆಯೆ ಗಣ್ಯವಾದ ರಾಷ್ಟ್ರವಾಗಿತ್ತು. ಈಗ ಅದು ಮಾರ್ಕ್ಸ್‌ವಾದವನ್ನು ಅಂಗೀಕರಿಸಿ ಬೇರೆಯಾಗಿ ನಿಂತಿದೆ. ಈ ಸ್ಥಿತಿಯಲ್ಲಿ ಅಮೇರಿಕಾ ರಷ್ಯಾ ರಾಷ್ಟ್ರಗಳ ಮಧ್ಯೆ ಶಾಂತಿಯ ಮಾತನ್ನಾಡಬಹುದಾದ ಒಂದು ಗಣ್ಯ ರಾಷ್ಟ್ರ ಈ ನಮ್ಮ ರಾಷ್ಟ್ರ ಒಂದೇ ಆಗಿದೆ.

ಈ ಕಾಲ ಲೋಕಜೀವನದಲ್ಲಿ ಒಂದು ಸಂಧಿಕಾಲವಾಗಿರುವುದಕ್ಕೆ ಕಾರಣ ಮನುಜಕುಲದ ಎದುರಿಗೆ ಒಂದು ಪ್ರಶ್ನೆ ಬಂದದ್ದು. ಕುಲ ಉಳಿಯಬೇಕು; ಇದಕ್ಕೆ ದಾರಿ ಯಾವುದು? ಜನಾಂಗಗಳನ್ನು ಧರ್ಮ ಹೀಗೆ ಕೇಳುತ್ತಿದೆ. ಉಳಿಯಬೇಕೆಂದರೆ ಅವು ಅದಕ್ಕೆ ಸರಿಯಾದ ಉತ್ತರವನ್ನು ಕೊಡಬೇಕು ಅಂಥ ಉತ್ತರವನ್ನು ಕೊಡಲಿಲ್ಲ, ಲೋಕನಾಶ ತಪ್ಪಿದ್ದಲ್ಲ. ಲೋಕದ ಈ ಸ್ಥಿತಿ ಈಗ ಐವತ್ತು ವರ್ಷದ ಹಿಂದೆ ನನಗೆ ಮಹಾಭಾರತದ ಯಕ್ಷಪ್ರಶ್ನೆಯ ಪ್ರಸಂಗದ ಸ್ಥಿತಿಯಂಥ ಸ್ಥಿತಿ ಎಂದು ಕಂಡಿತು "ಸರೋವರದ ನೀರನ್ನು ಕುಡಿಯಬೇಕೇ ನನ್ನ ಪ್ರಶ್ನೆಗೆ ಸರಿಯಾದ ಉತ್ತರಕೊಡಿ, ಆಮೇಲೆ ಕುಡಿಯಿರಿ,"

ಎಂದು ಧರ್ಮ ಪ್ರಶ್ನೆ ಕೇಳಿತು. ಸಹದೇವ ನಕುಲ ಅರ್ಜುನ ಭೀಮ ಅದನ್ನು ಧಿಕ್ಕರಿಸಿ ನೀರನ್ನು ಕುಡಿಯುವೆವೆಂದರು, ಸತ್ತು ನೆಲದಮೇಲೆ ಮಲಗಿದರು. ಯುಧಿಷ್ಠಿರ ತಾಳ್ಮೆಯಿಂದ ಉತ್ತರಕೊಟ್ಟ; ತಾನೂ ಬದುಕಿ, ತಮ್ಮಂದಿರನ್ನೂ ಬದುಕಿಸಿದ ಭರತವರ್ಷ ಇಂದು ಇವನ ಸ್ಥಾನದಲ್ಲಿದೆ. ಧರ್ಮ ಕೇಳುತ್ತಿರುವ ಪ್ರಶ್ನೆಗಳಿಗೆ ಈ ಅಣ್ಣರಾಷ್ಟ್ರ ಸರಿಯಾದ ಉತ್ತರ ಕೊಡಬೇಕು. ತಾನು ಬದುಕಿ ಪ್ರಪಂಚದ ಸೋದರ ರಾಷ್ಟ್ರಗಳನ್ನು ಉಳಿಸಬೇಕು.

ಈ ಸಾಮ್ಯವನ್ನು ಬಳಸಿ ನಾನು ಅನೇಕ ವೇಳೆ ಸಭೆಗಳೆದುರು ಮಾತ ನಾಡಿದೇನೆ. ಸಮಸ್ಯೆ ಪೂರ್ಣವಾಗುವುದಕ್ಕೆ ಅವಶ್ಯಕವಾದ ಒಂದು ವಿವರ ಭರತವರ್ಷ ಲೋಕದ ಮುಂದೆ ಬಂದಿರುವ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಕೊಡುವುದು. ಭರತವರ್ಷ ಈಗ ಇದನ್ನು ಮಾಡಬಲ್ಲುದೇ ? ಇಲ್ಲ. ಉತ್ತರ ಕೊಡಲು ಅವಶ್ಯಕವಾದ ಅನುಭವ ಅರಿವು ನಮ್ಮ ರಾಷ್ಟ್ರಕ್ಕೆ ಇದೆ, ನಡತೆ ಇಲ್ಲ. ನಮ್ಮ ಇಂದಿನ ಜೀವನ ಹದ ತಪ್ಪಿದೆ, ಕಾಡಿನಲ್ಲಿದೆ. ಈ ದುರವಸ್ಥೆ ಇದ್ದು ಕೊಂಡು ನಾವೂ ಬದುಕಲಾರೆವು, ಯಾರನ್ನೂ ಬದುಕಿಸಲಾರೆವು. ಬದುಕುವ, ಬದುಕಿಸುವ ಧ್ಯೇಯ ಸಾಧಿಸಬೇಕೆಂದರೆ ರಾಷ್ಟ್ರ ನಮ್ಮ ಪೂರ್ವ ಸಂಸ್ಕೃತಿಯನ್ನು ನೆನೆದು ಅದಕ್ಕೆ ತಕ್ಕಂತೆ ಬಾಳಿ, ಹಿರಿಯ ನಡತೆಯ ಮೇಲ್ಪಂಕ್ತಿಯಾಗಬೇಕು ಹೀಗಾಗುವುದು ನಮ್ಮ ಗುರಿ ಆಗಬೇಕು.

ಇದು ನಮ್ಮ ಗುರಿ ಆಗಬೇಕು, ಸರಿ. ಆದರೆ ಇದು ಆಗಬೇಕೆಂದರೆ ನಮ್ಮ ಜನದಲ್ಲಿ ಆತ್ಮವಿಶ್ವಾಸ ಇರಬೇಕು ನಮ್ಮ ಇತಿಹಾಸದ ದುರ್ದೈವ ನಮ್ಮಲ್ಲಿ ಬಹುಜನರ ಮನಸ್ಸಿನಿಂದ ಈ ವಿಶ್ವಾಸವನ್ನು ಕಸಿದುಕೊಂಡಿದೆ. ವಿದೇಶೀ ಪ್ರಭುವಿನ ಅಧೀನದಲ್ಲಿ ನೂರುವರ್ಷ ಬಾಳಿ ನಮ್ಮಲ್ಲಿ ಅನೇಕರು ನಮ್ಮ ರಾಷ್ಟ್ರವನ್ನು ಗಣ್ಯ ರಾಷ್ಟ್ರವಾಗಿ ಮಾಡಿರುವ ನಮ್ಮ ಪಿತ್ರಾರ್ಜಿತ ಆಧ್ಯಾತ್ಮ ಸಂಪತ್ತಿನ ಬೆಲೆ ಎಷ್ಟು ಎನ್ನುವುದನ್ನು ಕಾಣದೆ ಇದೇವೆ. ಆಂಗ್ಲ ಪ್ರಭು ಆಗಿ ನಮ್ಮ ರಾಜಕೀಯ ಸ್ವಾತಂತ್ರ್ಯವನ್ನು ಮಾತ್ರ ಅಳಿಸಲಿಲ್ಲ, ನಮ್ಮ ಸಂಸ್ಕೃತಿ ಸ್ವಾತಂತ್ರ್ಯವನ್ನು ಅಳಿಸಿದ. ರಾಜಕೀಯ ಸ್ವಾತಂತ್ರ್ಯ ಬಂದು ಈಗ ಹತ್ತಿರ ಹತ್ತಿರ ನಲವತ್ತುವರ್ಷ ಆಗಿದೆ, ಆದರೆ ನಮ್ಮ ಸಂಸ್ಕೃತಿ ಸ್ವಾತಂತ್ರ್ಯ ಇನ್ನೂ ಬಂದಿಲ್ಲ ಸತ್ಯವಂತರಾದ ಕೆಲವರು ಆಂಗ್ಲರು ನಮ್ಮ ಅಧ್ಯಾತ್ಮ ಸಂಪತ್ತನ್ನು ಹೊಗಳಿದರಾದರೂ, ಅವರಲ್ಲಿ ಬಹುಜನ ನಮ್ಮನ್ನು ಕೆಲಸಕ್ಕೆ ಬಾರದ ಜನ

ಎಂದರು, ನಮ್ಮ ಮತ ಕೆಲಸಕ್ಕೆ ಬಾರದ್ದು ಎಂದರು, ನಮ್ಮ ಸಮಾಜ ವ್ಯವಸ್ಥೆ ದುಷ್ಟ ಎಂದರು, ನಮ್ಮ ನೀತಿ ಉನ್ನತ ಅಲ್ಲ ಎಂದರು, ಇಷ್ಟ ಬಂದಂತೆ ಮಾತನಾಡಿ ನಮ್ಮನ್ನು ಅಲ್ಲಗಳೆದರು. ಬಲ್ಲವರೆಂಬ ನಮ್ಮ ಜನರಲ್ಲಿ ಬಹುಜನ ಇವರ ಮಾತನ್ನು ಒಪ್ಪಲಿಲ್ಲ. ಆದರೆ ಅಷ್ಟೇ ಬಹುಜನ ಈ ಮಾತೆಲ್ಲ ಸರಿ ಎಂದರು. ಆತ್ಮವಿಶ್ವಾಸವನ್ನು ಕಳೆದುಕೊಂಡರು. ಇದು ನಮ್ಮ ಇಂದಿನ ಸ್ಥಿತಿ.

ಈ ಕಾರಣದಿಂದ ಇದು ನಮ್ಮ ರಾಷ್ಟ್ರ ಜೀವನದಲ್ಲಿಯೂ ಒಂದು ಸಂಧಿಕಾಲ ಆಗಿದೆ.

ಇದು ನಮಗೆಲ್ಲ ತಿಳಿದಿರುವ ಸಂಗತಿ. ಇರುತ್ತ, ಇದು ನನಗೆ ಈಚೆಗೆ ಒಂದು ಸಂದರ್ಭದಲ್ಲಿ ಬಹು ಚೆನ್ನಾಗಿ ಮನವಾಟ್ಟಿತು.

ಮೂರು ವರ್ಷಗಳ ಹಿಂದ ಒಂದು ಕಾರ್ಯದ ಪ್ರಯುಕ್ತ ನಾನು ಕಾರ್ಕಳಕ್ಕೆ ಹೋಗಿದ್ದ ಸಂದರ್ಭದಲ್ಲಿ, ಮಣಿಪಾಲದಿಂದ ಅಲ್ಲಿಗೆ ಬಂದಿದ್ದ ಕೆಲವರು ಮಿತ್ರರು ನಾನು ಅವರ ಊರಿಗೆ ಹೋಗಿ ಒಂದು ಭಾಷಣ ಮಾಡಬೇಕೆಂದು ಕರೆದರು. ಅವರ ಅಪೇಕ್ಷ ಮಾನ್ಯವೆಂದು ನಾನು ಮಣಿಪಾಲಕ್ಕೆ ಹೋದೆನು. ಅಂದು ಯುಗಾದಿ. ಹೊಸ ವರ್ಷದ ಶುಭಾಶಯುವನ್ನು ಕೋರಿ ನಾನು ಸಭೆಯಲ್ಲಿ ಈ ವಿಜ್ಞಾಪನೆಯನ್ನು ಮಾಡಿದೆನು. 'ನಮ್ಮ ಜನತೆ ಒಂದು ಕಾಲದಲ್ಲಿ ದೊಡ್ಡ ಗುಣಗಳನ್ನು ಬೆಳೆಸಿಕೊಂಡು ಸಂಸ್ಕೃತಿಯ ಉಚ್ಚವನ್ನು ಮುಟ್ಟಿತ್ತು. ಈಚೆಗೆ ಅದನ್ನು ಕಳೆದುಕೊಂಡಿದೆ ಆದರೂ ಅದರ ಉನ್ನತ ಸಂಸ್ಕೃತಿ ಇನ್ನೂ ಜೀವಂತ ವಾಗಿದೆ. ಪ್ರಭಾವ ಕಡಿಮೆ ಆಗಿದ್ದರೂ ಅಳಿದಿಲ್ಲ. ಪ್ರಪಂಚದ ಇತರ ದೇಶಗಳ ಸ್ಥಿತಿ ಇದಕ್ಕಿಂತ ಕೇಡಾಗಿದೆ. ಇತರ ರಾಷ್ಟ್ರ ಹಲವು ನಮ್ಮ ರಾಷ್ಟ್ರಕ್ಕಿಂತ ಹೆಚ್ಚು ಶಕ್ತಿ ಸಂಪತ್ತು ಉದ್ಯಮಗಳಿಂದ ಬಾಳುತ್ತಿವೆಯಾದರೂ ಅವುಗಳ ಜೀವನದಲ್ಲಿ ಆತ್ಮದ ಕಲ್ಯಾಣವನ್ನು ಕುರಿತ ವಿಚಾರಕ್ಕೆ ತಕ್ಕ ಎಡೆ ಇಲ್ಲ. ನಮ್ಮ ರಾಷ್ಟ್ರ, ನಮ್ಮ ಇಂದಿನ ದುರವಸ್ಥೆಯಿಂದ ಬಿಡಿಸಿಕೊಂಡು, ಹೊಸ ಕಾಲಕ್ಕೆ ತಕ್ಕಂತೆ ನಮ್ಮ ಪೂರ್ವಾರ್ಜಿತ ಸಂಸ್ಕೃತಿಯನ್ನು ತಿದ್ದಿಕೊಂಡು, ತಾನೂ ಬದುಕಿ, ಯಕ್ಷಪ್ರಶ್ನೆಯ ಧರ್ಮದೈವ ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಟ್ಟು, ತಾನು ಬದುಕಿ, ತನ್ನ ತಮ್ಮಂದಿರನ್ನು ಬದುಕಿಸಿದ ಯುಧಿಷ್ಠಿರನಂತೆ, ಲೋಕದ ರಾಷ್ಟ್ರಗಳ ಅಣ್ಣ ರಾಷ್ಟ್ರವಾಗಿ ನಡೆದುಕೊಳ್ಳಬೇಕು" ಅಂದು ನಾನು ಆಡಿದ

ಮಾತಿನ ಒಂದು ವರದಿಯನ್ನು ನೋಡಿದ ನನ್ನ ಸೋದರರೊಬ್ಬರು ನನಗೆ ಒಂದು ಪತ್ರವನ್ನು ಬರೆದರು. ಅದರ ಒಕ್ಕಣೆ ಹೀಗಿತ್ತು.

(ಅಂಚೆ ವಿಳಾಸ) ೨೦-೩-೮೦

ಪೂಜ್ಯ ಶ್ರೀ ಮಾಸ್ತಿಯವರ ಸನ್ನಿಧಿಯಲ್ಲಿ ಅನಂತ ಸಪ್ರೇಮ ಹಾಗೂ ವಿನಯಪೂರ್ವಕ ಪ್ರಣಾಮಗಳು

ಸನ್ಮಾನ್ಯ ಪೂಜ್ಯರೆ,

ತಮ್ಮ ಹೇಳಿಕೆ ಹಾಗೂ ಭಾಷಣ ಪ್ರಕಟಣೆಗಳನ್ನು ಆಗಾಗ ಪತ್ರಿಕೆಗಳಲ್ಲಿ ಆಸಕ್ತಿಯಿಂದ ಓದುತ್ತಿರುತ್ತೇನೆ. ನೀವೇ ಹೇಳಿದ ಮೇರೆಗೆ (ದಿನಾಂಕ ೬-೭-೭೩, ಬೆಂಗಳೂರು ಟೌನ್‌ಹಾಲ್) ನೀವು ಮುದುಕರಲ್ಲ. ಹುರುಪಿನ ಯುವಕರೇ ಆಗಿರುವಿರಿ. ಇನ್ನೂ ಯುವಕರಾಗಿಯೇ ಇರಬೇಕೆಂಬುದು ನನ್ನ ಆಶಯ. ಆದರೆ ಮತಿಗೆ ಬುದ್ಧಿಗೆ ಹಳೆಯ ಜಾಡಿನ ಮುದಿತನ ಬರಬಾರದು. ಮುದ್ರಿಸಿದ್ದನ್ನೇ ಹಾಡುವ ಗ್ರಾಮಫೋನ್ ರಿಕಾರ್ಡ್ ಆಗಬಾರದೆಂಬುದು ನನ್ನ ಆಶಯ. ವೇದ ಉಪನಿಷತ್ತುಗಳನ್ನು ಬರೆದ ಬುದ್ಧಿವಂತರು ಕಾಣದ-ತಿಳಿಯದ, ಅಸ್ತಿತ್ವದಲ್ಲಿಯೇ ಇಲ್ಲದ, ದೇವರೆಂಬುದರ ಬಾಯಿಗೆ ತುರುಕಿ ಶಿವ ಉವಾಚ, ಬ್ರಹ್ಮ ಉವಾಚ, ವಿಷ್ಣು ಉವಾಚ, ಭಗವಾನು ಉವಾಚ, ಪಾರ್ವತಿ ಉವಾಚ, ಎಂದು ಮುಂತಾಗಿ ಹೇಳಿ ಭಯ ಹುಟ್ಟಿಸಿ ನಂಬಿಸಿ ಜನರನ್ನು ಮೋಸ ಗೊಳಿಸುತ್ತಾ ಬಂದಿದಾರೆ ಎಂಬುದು ತಿಳಿದ ವಿಷಯವೇ ಆಗಿದೆ. ಇದನ್ನು ಡಾ|| ಶಿವರಾಮ ಕಾರಂತರು ತಮ್ಮ 'ಮೂಕಜ್ಜಿಯ ಕನಸಿ'ನಲ್ಲಿ ಚಿತ್ರಿಸಿದ್ದಾರೆ.

ನೀವು ಉಡುಪಿಯಲ್ಲಿ ಮಾತನಾಡುತ್ತಾ, "ಪ್ರಪಂಚಕ್ಕೆ ಶಾಂತಿ ಮಂತ್ರವನ್ನು ಹೇಳುವ ಅರ್ಹತೆ ನಮ್ಮ ದೇಶಕ್ಕಿದೆ ಜೀವನ ಧರ್ಮವನ್ನು ಬೋಧಿಸುವ ದೇಶ ನಮ್ಮದು" ಎಂದು ಹೇಳಿರುವಿರಿ.

ಈ ದೇಶದ ಜನಕ್ಕೆ ಹೇಳುವ ಬೋಧಿಸುವ ಬುದ್ಧಿವಂತಿಕೆ ಇದೆಯೇ ಹೊರತು, ಹೇಳುವ ಚಾತುರ್ಯವಿದೆಯೇ ಹೊರತು, ಪಾಲನೆ ಮಾಡುವ ಬುದ್ಧಿ ಇಲ್ಲ, ಜ್ಞಾನವಿಲ್ಲ. ತದ್ವಿರುದ್ಧ ನಡೆದುಕೊಂಡು ಜನರನ್ನು ಮೋಸಗೊಳಿಸುವ-ವಂಚಿಸುವ ಜನ-ತಿಳಿವಳಿಕಸ್ಥ(?) ಆಚಾರವಾದಿಗಳಿದ್ದಾರೆ.

"ದೇವರು-ಧರ್ಮಕ್ಕೆ ಉಚ್ಚಸ್ಥಾನ ಕೊಟ್ಟ ನಮ್ಮ ದೇಶದಲ್ಲಿ ಸಂವಿಧಾನ ಬರೆಯುವಾಗ ದೇವರ ಪ್ರಸ್ತಾಪ ಮಾಡಲಿಲ್ಲ" ಎಂದು ಸಹ ಉಡುಪಿಯಲ್ಲಿ

ಹೇಳಿದರು. ದೇವರನ್ನು ನಂಬದ, ಜೈನ ಮತಸ್ಥರೆಂದು ಭಾವಿಸುವ ಶ್ರೀ ಹಂಪ ನಾಗರಾಜಯ್ಯನವರೇ ಅಧ್ಯಕ್ಷತೆ ವಹಿಸಿದ್ದರು.

ನಾವು ಏನನ್ನು ಸೃಷ್ಟಿಸಲು ಸಾಧ್ಯವಿಲ್ಲದಿದ್ದರೂ ಲೆಕ್ಕವಿಲ್ಲದಷ್ಟು ದೇವರನ್ನು ಸೃಷ್ಟಿಸಿದ್ದೇವೆ. (ಮನುಷ್ಯ ಒಬ್ಬ ಹುಚ್ಚ, ಒಂದು ಹುಳವನ್ನೂ ಅವನು ಸೃಷ್ಟಿಸಲಾರ. ಆದರೂ ನೂರಾರುಗಟ್ಟಳೆ ದೇವರುಗಳನ್ನು ಸೃಷ್ಟಿಸುತ್ತಾನೆ–ಮಾಂಟೇಯ್ನ್) ಎಂದು ಪಾಶ್ಚಾತ್ಯರೊಬ್ಬರು ಹೇಳಿದ್ದಾರೆ.

ದೇವರು ಮೊದಲು ಹುಟ್ಟಿದನೋ–ಮನುಷ್ಯ ಮೊದಲು ಹುಟ್ಟಿದನೋ ಹೇಳುವವರಾರು. ನಾವು ದೇವರನ್ನು ಸೃಷ್ಟಿಸಿದ್ದೇವೆಯೇ ವಿನಹ ದೇವರು ನಮ್ಮನ್ನು ಸೃಷ್ಟಿಸಿಲ್ಲ. ಸ್ವಲ್ಪ ಬುದ್ಧಿ ಇರುವ ಈ ಮನುಷ್ಯ ಪ್ರಾಣಿ ಮಾತ್ರ ದೇವರ–ಭಯಪಟ್ಟು–ಚಿಂತನೆ ಮಾಡಿದ್ದಾನೆ. ಈ ಪ್ರಪಂಚದಲ್ಲಿ, ಅಸಂಖ್ಯಾತ ಪ್ರಪಂಚಗಳಲ್ಲಿ, ಇರಬಹುದಾದ ಯಾವ ಜೀವಿಗಳೂ ದೇವರ ಚಿಂತನೆ ಮಾಡಿಲ್ಲ ಅವೂ ಸಹ ಮನುಷ್ಯ ಪ್ರಾಣಿಯಂತೆ ಹುಟ್ಟಿವೆ, ಬೆಳೆದಿವೆ, ಸಾಯುತ್ತಿವೆ. ದೇವರ ಚಿಂತನೆ ಮಾಡದಿರುವ ಇತರ ಪ್ರಾಣಿಗಳು ಜೀವಿಸಿಲ್ಲವೆ?

ಭಾರತ ಸಂವಿಧಾನವನ್ನು ಸೃಷ್ಟಿಸಿದ–ಬರೆದ–ವರು ಸದ್ಯ ದೇವರನ್ನು ಸೃಷ್ಟಿಸಿಲ್ಲ. ಬೇರೊಂದು ಧರ್ಮವನ್ನು ಹೇಳಲಿಲ್ಲ. ಮಾನವ ಧರ್ಮ, ಮಾನವ ಮೌಲ್ಯಗಳ ಬಗ್ಗೆ ಮಾತ್ರ ಪ್ರಸ್ತಾಪ ಮಾಡಿದ್ದಾರೆ. ಇಷ್ಟು ಸಾಲದೆ? ಲೆಕ್ಕವಿಲ್ಲದ ದೇವರ ಪಟ್ಟಿಗೆ ಇನ್ನೊಂದು ದೇವರು ಸೇರಬೇಕಾಗಿತ್ತೆ ? ಮನುಷ್ಯ ಪ್ರಾಣಿಯನ್ನೇ ಮನುಷ್ಯನೆಂದು ಪರಿಗಣಿಸದ ಧರ್ಮ–ಜಾತಿ ಇನ್ನೂ ಉಳಿದು ಬರಬೇಕೆ ? ಮನುಷ್ಯನನ್ನೇ ಮನುಷ್ಯನೆಂದು ಪರಿಗಣಿಸದ ಭಾರತ ಸಂಸ್ಕೃತಿ ಅದಾವ ಸಂಸ್ಕೃತಿ ಹೇಳಬಲ್ಲಿರಾ ? ಮಠಾಧಿಪತಿಗಳು, ಪೀಠಾಧಿಪತಿಗಳು, ಸ್ವಾಮಿಗಳು, ಗುರುಗಳು, ಬಾಬಾಗಳು, ಸಾಧುಗಳು, ಸಂನ್ಯಾಸಿಗಳು ಇನ್ನೂ ಎಷ್ಟುಕಾಲ ಈ ದೇಶದ ಜನರನ್ನು ಮೌಢ್ಯದಲ್ಲಿ ಇಡಬೇಕೆಂದು ಮಾಡಿದ್ದಾರೋ ತಿಳಿಯದು.

ಜನ ಮೌಢ್ಯದಲ್ಲಿದ್ದಷ್ಟು ಕಾಲ ಇಂಥ ಮೇಲ್ಕಂಡವರಿಗೆ ಅನುಕೂಲ ಸುಖಭೋಗಗಳು ದೊರೆಯಲೆಂಬುದೇ ಆಶಯವಾಗಿರುವಂತೆ ಕಾಣುತ್ತದೆ.

ತಾವು ಹಿರಿಯರು, ಜ್ಞಾನಿಗಳು, ವಿಚಾರವಂತರು, ಮಾರ್ಗದರ್ಶನ

ಮಾಡುವವರು, ದೇವರ ಅಸ್ತಿತ್ವವನ್ನು ಕಂಡವರು. ದೇವರ ಅಡ್ರೆಸ್ಸನ್ನು ದಯಮಾಡಿ ತಿಳಿಸುವಿರಾ !

ಇತಿ ಅತ್ಯಂತ ವಿನಯಪೂರ್ವಕವಾಗಿ
(ರುಜು) XYZ

ಈ ಪತ್ರ ಹೊರನೋಟಕ್ಕೆ ವಿನಯವನ್ನು ನಟಿಸಿ ಆರಂಭ ಆಗಿ, ಒಡನೆಯೇ ಒಂದು ಅವಿನಯದ ಮಾತನ್ನಾಡಿ, ಕೊನೆಯಲ್ಲಿ "ನೀವು ದೇವರನ್ನು ನೋಡಿರುವವರು, ಅವನ ವಿಳಾಸವನ್ನು ತಿಳಿಸುತ್ತೀರಾ" ಎಂದು ವ್ಯಂಗ್ಯದಲ್ಲಿ ಮುಗಿದಿದೆ. ಸಾಮಾನ್ಯವಾಗಿ ಈ ತೆರನ ಪತ್ರವನ್ನು ಕಂಡಾಗ ಅದನ್ನು ಪಡೆದವರಿಗೆ ಕೋಪ ಬರಬೇಕು ನನಗೆ ಈ ಪತ್ರವನ್ನು ನೋಡಿದಾಗ ಇದನ್ನು ಬರೆದ ಮಿತ್ರರ ಮೇಲೆ ಕೋಪ ಬರಲಿಲ್ಲ, ಇವರ ಮನಸ್ಸಿನ ಸ್ಥಿತಿಯನ್ನು ಕುರಿತು ವ್ಯಥೆ ಆಯಿತು, ಇವರನ್ನು ಕುರಿತು ಕನಿಕರ ಮೂಡಿತು ನನ್ನ ಕಿರಿಯ ಸೋದರ ಇವರು ನಮ್ಮ ಮಾತೃಭೂಮಿಯ ವಿಷಯ ಇಂಥ ತಪ್ಪು ಭಾವನೆಗಳನ್ನು ಬೆಳೆಸಿಕೊಂಡಿದ್ದಾರಲ್ಲ ಎಂದು ವ್ಯಥೆ, ಇದರಿಂದ ಇವರು ದುಃಖಪಡುತ್ತಿದ್ದಾರಲ್ಲ ಎಂದು ಕನಿಕರ. ಇವರಿಗೆ ನಾನು ಈ ಉತ್ತರವನ್ನು ಬರೆದೆನು

೨೪–೩–೮೦

ಮಾನ್ಯ ಮಹನೀಯರು XYZರವರಿಗೆ ನಮಸ್ಕಾರ

೨೦–೩–೮೦ರ ತಮ್ಮ ಪತ್ರ ಸಕಾಲದಲ್ಲಿ ಮುಟ್ಟಿತು. ಯಾವುದೋ ಕೆಲಸದ ಮಧ್ಯೆ ಇದ್ದೆ. ಒಡನೆ ಉತ್ತರ ಬರೆಯಲಾಗಲಿಲ್ಲ. ದಯವಿಟ್ಟು ಮನ್ನಿಸಿರಿ.

ತಾವು ತಮ್ಮ ಪತ್ರವನ್ನು "ಪೂಜ್ಯ ಶ್ರೀ ಮಾಸ್ತಿಯವರ ಸನ್ನಿಧಿಯಲ್ಲಿ" ಎಂಬ, "ವಿನಯಪೂರ್ವಕ" ಎಂಬ ಪದಗಳಿಂದ ಆರಂಭಿಸಿದ್ದೀರಿ ಆಮೇಲಿನ ನಾಲ್ಕನೆಯ ಪಂಕ್ತಿಯಲ್ಲಿ ನನ್ನ ಬುದ್ಧಿ ಮುದಿಯಾಗಿದೆ ಎಂದು ಸೂಚಿಸಿದ್ದೀರಿ. ನಿಮ್ಮ "ಪೂಜ್ಯ", "ವಿನಯ" ಪದಗಳಿಗೆ ಅರ್ಥವಿದೆಯೇ ? ನಿಮಗೆ ನಾನು ಪೂಜ್ಯನಲ್ಲ. ನನ್ನದು ಸನ್ನಿಧಿ ಅಲ್ಲ, ಆದ್ದರಿಂದ ನಿಮ್ಮ ಮಾತಿನಲ್ಲಿ ವಿನಯ ಇಲ್ಲ. ನನ್ನನ್ನು ಪೂಜಿಸಿ ಎಂದು ನಾನು ನಿಮಗೆ ಹೇಳುತ್ತಿಲ್ಲ. ನಿಮ್ಮ ವಾಕ್ಯಗಳು ಒಂದರೊಡನೊಂದು ಹೊಂದಿ ಇರಲಿ ಎಂದಷ್ಟೇ ಸೂಚಿಸುತ್ತಿದ್ದೇನೆ.

ಬಳಿಕ ನೀವು "ಅಸ್ತಿತ್ವವೇ ಇಲ್ಲದ ದೇವರು" ಎಂದು ಬರೆದಿದ್ದೀರಿ. "ದೇವರು" ಎಂದು ನೀವು ಹೇಳುವ ದೇವರು, "ದೇವರು" ಎಂದು ನಾನು ಹೇಳುವ ದೇವರು ಒಂದೇ ವಸ್ತು ಅಲ್ಲ ಪದ ಒಂದೇ ಆದದ್ದರಿಂದ ಅರ್ಥ ಒಂದೇ ಎಂದು ತಿಳಿದಿರುವುದು ದೇವರನ್ನು ಕುರಿತು ಇಂಥ ಚರ್ಚೆಗಳನ್ನೆಲ್ಲ ದಾರಿ ತಪ್ಪಿಸಿರುವ ಭ್ರಾಂತಿ ನಾನು ದೇವರು ಎನ್ನುವುದು ನಮ್ಮ ಪೂರ್ವಿಕರು ಹೇಳಿದ ದೇವರು. ಉಡುಪಿಯಲ್ಲಿ ನಾನು ಆಡಿದ ಮಾತಿನಲ್ಲಿ ನಾನು ಇದನ್ನೆ ಮೊದಲ ಸಂಗತಿಯಾಗಿ ಹೇಳಿದೆನು ಪತ್ರಿಕೆಯಲ್ಲಿ ವರದಿ ಆಯಿತೊ ಇಲ್ಲವೋ ನನಗೆ ತಿಳಿಯದು.

ನಮ್ಮ ಹಿರಿಯರ ನಂಬಿಕೆ "ಸರ್ವಂ ಖಲ್ವಿದಂ ಬ್ರಹ್ಮ". ಇರುವುದು ದೇವರೆ. ನಾನು ನೀವು ಉಳಿದವರೆಲ್ಲ ದೇವರಲ್ಲೆ ಇದೇವೆ ಸೃಷ್ಟಿಯ ಒಂದೊಂದು ಕಣದಲ್ಲೂ ದೇವರು ಇದಾನೆ.

ನಮ್ಮ ದೇಶ ಬೆಳೆಸಿಕೊಂಡು ಬಂದ ಸಂಸ್ಕೃತಿ ಲೋಕವನ್ನು ರಕ್ಷಿಸಬಲ್ಲ ಸಂಸ್ಕೃತಿ ಎಂಬುದು ನನ್ನ ನಂಬಿಕೆ. ಈ ನಂಬಿಕೆ ತಪ್ಪು ಎಂದು ನಿಮ್ಮ ತಿಳಿವಳಿಕೆ. ಇದರಿಂದ ಆದದ್ದೇನು ?

ನನ್ನ ವಿಷಯಕ್ಕೆ ನಿಮ್ಮ ವಿಷಯಕ್ಕೆ "ಹೇಳುವ ಬುದ್ಧಿವಂತಿಕೆ ಇದೆ. ಮಾಡುವ ಬುದ್ಧಿ ಇಲ್ಲ" ಎನ್ನುವ ಮಾತು ಸಲ್ಲಬಹುದು ನಮ್ಮಂತೆ ಇನ್ನು ಲಕ್ಷ ಜನರ ವಿಷಯಕ್ಕೆ ಸಲ್ಲಬಹುದು. ಕೋಟಿಯಲ್ಲಿ ಒಬ್ಬರ ವಿಷಯಕ್ಕೆ ಈ ಮಾತು ಇಲ್ಲದೆ ಇರಬಹುದು ಇಂಥ ಒಬ್ಬ ಮನುಷ್ಯರು ಮಹಾತ್ಮಾ ಗಾಂಧಿ.

ನೀವು ಮಹಾತ್ಮಾ ಗಾಂಧಿಯವರನ್ನೂ ಅಲ್ಲಗಳೆಯುತ್ತೀರಾ ಹೇಗೆ ?

ನೀವೂ ನಿಮ್ಮಂತೆ ಯೋಚಿಸುವ ಮಿತ್ರರೂ ಅಲ್ಲಗಳೆದರೂ ಗಾಂಧೀಜಿ ಯಂಥ ಜನ ಲೋಕದ ಎಲ್ಲ ದೇಶಗಳ ಜಾಣ ಜನರ ಮನಸ್ಸಿಗೆ ಸಮ್ಮತರೆಂದು ಕಂಡಿದ್ದಾರೆ, ಕಾಣುತ್ತಾರೆ. ಇಂಥ ಜನರ ಯತ್ನದಿಂದ ಲೋಕ ಬದುಕಬೇಕು. ಬದುಕುತ್ತದೆ ಎಂದು ನಾವು ನಿರೀಕ್ಷಿಸಬಹುದಾಗಿದೆ

ದೇವರ ಹೆಸರಿನಲ್ಲಿ ಮೋಸಮಾಡಿ ಬಾಳುವ ಜನ ಇದ್ದಾರೆ, ದಿಟ. ಆದರೆ ಅದು ದೇವರು ಎಂಬ ತತ್ವವನ್ನು ಅಳಿಸಿ ಹಾಕುವುದಿಲ್ಲ.

ಸಂವಿಧಾನದಲ್ಲಿ ದೇವರಿಗೆ ವಂದನೆ ಸಲ್ಲಿಸಬೇಕೆಂಬ ಸಲಹೆಯನ್ನು ನಮ್ಮ ನಾಯಕರುಗಳು ಒಪ್ಪಲಿಲ್ಲ. ಇದು ಇವರ ತಿಳುವಳಿಕೆಯಂತೆ ಸರಿಯಾಗಿದ್ದಿರ

ಬಹುದು. ಆದರೆ ನಮ್ಮ ಜನಾಂಗದ ಪ್ರತಿನಿಧಿಗಳ ನಿಲುವು ಎನ್ನಲಾಗದು. ಇದನ್ನು ನಾನು ಅನೇಕ ವೇಳೆ ಹೇಳಿದೇನೆ.

ನಮ್ಮದು ಒಂದು "ಡೆಮಾಕ್ರಸಿ". ಅದರ ಮಾತು ನಡತೆಯಲ್ಲಿ ನಾಯಕ ಒಬ್ಬನ ಮನಸ್ಸು ಮುಂದಾಗಿ ಲಕ್ಷಲಕ್ಷ ಜನದ ಮನಸ್ಸು ಹಿಂದಾಗ ಬಾರದು. ಈ ಲಕ್ಷಲಕ್ಷ ಜನದ ಮನಸ್ಸು ತಪ್ಪು ಮಾಡುತ್ತಿರಬಹುದು. ತಪ್ಪಾಗಿದ್ದಲ್ಲಿ ಆ ಜನಕ್ಕೆ ತಿಳಿವಳಿಕೆ ಕೊಟ್ಟು ಅವರ ಮನಸ್ಸನ್ನು ತಿದ್ದುವುದು ನಾಯಕನ ಹೊಣೆ. ಹಾಗೆ ತಿದ್ದದೆ ತನ್ನ ಮನಸ್ಸಿನಂತೆ ನಡೆಯುವುದು ಸರ್ವಾಧಿಕಾರಿತನ, ಡೆಮಾಕ್ರಸಿಗೆ ಹೊಂದುವುದಿಲ್ಲ.

"ಲಕ್ಷದಷ್ಟು ದೇವರನ್ನು ಸೃಷ್ಟಿಸಿದೇವೆ' ಎಂದ ಪಾಶ್ಚಾತ್ಯರೊಬ್ಬರ ಮಾತು ನಿಮಗೆ ಸಧ್ಯವಾಗಿ ಕಾಣುತ್ತಿದೆ "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂಬ ವೇದದ ವಾಕ್ಯ, "ದೇವರೊಬ್ಬ, ನಾಮ ಹಲವು" ಎಂಬ ಬಸವಣ್ಣನವರ ವಾಕ್ಯ, ನಿಮ್ಮ ಕಿವಿಗೆ ಬಿದ್ದಿಲ್ಲವೆ? ಬಿದ್ದಿರಬೇಕಲ್ಲ! ಆ ದೂರದ ಮಾತನ್ನು ಕೇಳುವ ಕಿವಿಯು ಸೂಕ್ಷ್ಮ, ಈ ಹತ್ತಿರದ ಮಾತನ್ನು ಕೇಳಿಸಿ ಕೊಳ್ಳದೆ? "ದೇವರು" ಶಬ್ದಕ್ಕೆ ಈ ಮುನ್ನ ಹೇಳಿರುವ ಅರ್ಥವನ್ನು ಇಟ್ಟು ಕೊಂಡರೆ ಮನುಷ್ಯ ದೇವರನ್ನು ಮಾಡಿದ ಎನ್ನುವುದು ವಿಸಂಗತ ಆಗುತ್ತದೆ ಮನುಷ್ಯ ಮಾಡುವುದೆಲ್ಲ ದೇವರು ಅವನಿಂದ ಮಾಡಿಸುತ್ತಿರುವ ವ್ಯಾಪಾರ

ಮೃಗಗಳು ಇಂಥ ಯೋಚನೆ ಮಾಡುತ್ತಿಲ್ಲ. ಆದ್ದರಿಂದ ಮನುಷ್ಯನು ಮಾಡುವ ಅಗತ್ಯವಿಲ್ಲ, ಎನ್ನುವುದು ಮನುಷ್ಯನ ಮಾತಾಗುವುದಿಲ್ಲ, ಮೃಗದ ಮಾತಾಗುತ್ತದೆ. ಮೃಗವಾಗಿಯೂ, ಮೃಗ ಅಷ್ಟೇ ಆಗದೆ ಬಾಳನ್ನು ಬೆಳೆಸಿ ಕೊಂಡಿರುವುದೇ ಮನುಷ್ಯ ಜಾತಿಯ ಮನುಷ್ಯತ್ವದ ತಿರುಳು.

ಧರ್ಮ, ಮಾನವ ಧರ್ಮ, ಬೇರೊಂದು ಧರ್ಮ, ಹಲವು ಇಲ್ಲ. ಧರ್ಮ ಒಂದೇ. ಅದನ್ನು ಕಂಡುಕೊಳ್ಳಲು ಮನುಷ್ಯ ಜಾತಿ ಪ್ರಯತ್ನ ಮಾಡುತ್ತಿದೆ. ಆ ಪ್ರಯತ್ನ ಇನ್ನೂ ಮುಗಿದಿಲ್ಲ. ಇನ್ನೂ ನಡೆಯುತ್ತಿದೆ ನೀವು, "ಪ್ರಯತ್ನ ಮುಗಿದಿದೆ. ನೀವು ಆಡುತ್ತಿರುವುದು ಕೊನೆಯ ನಿರ್ಣಯದ ಮಾತು," ಎಂದು ತಿಳಿದಿದೀರಿ. ಬಹುಜನ ನಿಮ್ಮಷ್ಟೇ ಜಾಣರಾದವರು ಇದನ್ನು ಒಪ್ಪಲಾರರು ಪ್ರಯತ್ನದಲ್ಲಿ ನಿಮ್ಮದೂ ಒಂದು ಭಾಗ.

ಭಾರತ ಸಂಸ್ಕೃತಿ ಎಂದು ನಾನು ವರ್ಣಿಸುವ ಸಂಸ್ಕೃತಿ ರಾಮಕೃಷ್ಣ

ಪರಮಹಂಸರನ್ನು, ಮಹಾತ್ಮ ಗಾಂಧಿಯವರನ್ನು, ಪಡೆದ ಸಂಸ್ಕೃತಿ. ಮನುಷ್ಯನನ್ನು ಮನುಷ್ಯ ಎನ್ನದ ಅಸಂಸ್ಕೃತಿ ಒಂದು ನಮ್ಮ ಜನದಲ್ಲಿ ಬಳಕೆಯಲ್ಲಿರಬಹುದು ಅದೇ ಭಾರತ ಸಂಸ್ಕೃತಿ ಎನ್ನುವುದು ಭಾರತ ಸಂಸ್ಕೃತಿಯ ವಿಷಯಕ್ಕೆ ಅಪಚಾರ

ಸಾಧುಗಳು ಬಾಬಾಗಳು ನಮ್ಮ ಸಂಸ್ಕೃತಿಯ ಪ್ರತಿನಿಧಿಗಳಲ್ಲ. ಎಲ್ಲ ದೇಶಗಳಲ್ಲಿ, ಎಲ್ಲ ಧರ್ಮಗಳಲ್ಲಿ ಇಂಥ ಜನ ಇದ್ದಾರೆ ಅಷ್ಟರಿಂದ ಸಂಸ್ಕೃತಿಯೂ ಧರ್ಮವೂ ಸುಳ್ಳಾಗುವುದಿಲ್ಲ

ಜನರ ಮೌಢ್ಯ ನಿತ್ಯವಾಗಿರಲಿ, ಸುಳ್ಳರು ಅದನ್ನು ಬಳಸಿ ಸುಖವಾಗಿರಲಿ, ಎಂದು ನಾನೂ ಎಂದೂ ಹೇಳಲಿಲ್ಲ.

"ತಾವು ಹಿರಿಯರು, ಜ್ಞಾನಿಗಳು, ವಿಚಾರವಂತರು, ಮಾರ್ಗದರ್ಶನ ಮಾಡುವವರು, ದೇವರ ಅಸ್ತಿತ್ವವನ್ನು ಕಂಡವರು, ದೇವರ ಅಡ್ರಸ್ಸನ್ನು ದಯಮಾಡಿ ತಿಳಿಸುವಿರಾ?" ಇದು ನಿಮ್ಮ ವಿನಯಪೂರ್ವಕವಾದ ಪತ್ರದ ಕಡೆಯ ವಾಕ್ಯ

ಅವಶ್ಯಕವಾಗಿ ತಿಳಿಸುತ್ತೇನೆ. ಆ ವಿಳಾಸ, ದೇವರು, ಶ್ರೀXYZರವರ ಹೃದಯ C/o (ಈ ಮಿತ್ರರ ವಿಳಾಸ).

ನಮಸ್ಕಾರ

ವಿ.ಸೂ. . ಪಾಶ್ಚಾತ್ಯರ ಮಾರ್ಗದರ್ಶನವನ್ನು ಸ್ವೀಕರಿಸುವ ತಾವು ಶ್ರೀ ಫೆನರ್ ಬ್ರಾಕ್‌ವೇ ದೆಹಲಿಯಲ್ಲಿ ರಾಜಾಜಿಯವರನ್ನು ಕುರಿತ ಭಾಷಣದಲ್ಲಿ ಮೊನ್ನೆ "ಭರತವರ್ಷ"ವನ್ನು ಕುರಿತು ಆಡಿದ ಮಾತನ್ನು ಗಮನಿಸಬೇಕು.

ಮಾ.

ಮಿತ್ರರ ಪತ್ರಕ್ಕೆ ಬರೆದ ಉತ್ತರದಲ್ಲಿ ನಾನು ಅವರ ಒಂದೊಂದು ಮಾತಿಗೂ ಪ್ರತಿಯಾಗಿ ಸಮಾಧಾನ ಹೇಳಬೇಕೆಂದು ಯತ್ನಿಸಲಿಲ್ಲ. ಒಟ್ಟು ಅವರ ನಿಲುವನ್ನು ಕುರಿತು ನನಗೆ ಏನು ತೋರುತ್ತದೆ ಎಂಬುದನ್ನು ಹೇಳುವುದು ಅಷ್ಟೇ ಆಗ ಪ್ರಕೃತ ಆಗಿತ್ತು. ಹೀಗಿದ್ದೂ ಹಲವು ವಿಷಯದಲ್ಲಿ ಅವರ ತಿಳುವಳಿಕೆ ನನ್ನ ತಿಳುವಳಿಕೆ ಒಂದೇ ಎನ್ನುವುದನ್ನು ಉತ್ತರದಲ್ಲಿ ಕಾಣಬಹುದು. ನಮ್ಮಲ್ಲಿ ಬಹುಜನಕ್ಕೆ ಹೇಳುವ ಬುದ್ಧಿವಂತಿಕೆ ಇದೆ, ಮಾಡುವ ಬುದ್ಧಿ ಇಲ್ಲ;

ದೇವರ ಹೆಸರನ್ನು ಬಳಸಿ ಮೋಸ ಮಾಡುವ ಜನ ನಮ್ಮಲ್ಲಿ ಉಂಟು, ಏಕಂ ಸತ್ ವಿಪ್ರಾ ಬಹುಧಾ ವದಂತಿ ಎಂಬ ಮಾತನ್ನು ಮರೆತು ಹಿಂದೂ ಧರ್ಮದಲ್ಲಿ ನೂರಾರು ಪಂಥದ ದೇವರುಗಳನ್ನು ಸೃಷ್ಟಿಮಾಡಿದ್ದೇವೆ. ಇದೆಲ್ಲ ದಿಟ ಭಾರತ ಸಂವಿಧಾನ ದೇವರು ಇದಾನೆ ಎನ್ನದಿದ್ದರೂ ಜನಾಂಗಕ್ಕೆ ಆ ತತ್ವಕ್ಕೆ ಸಮನಾದ ಒಂದು ಗುರಿಯನ್ನು ಒದಗಿಸಿದೆ ಅದು ಮಾನವ ಧರ್ಮವನ್ನು ಮಾತ್ರ ಹೇಳುತ್ತದೆ, ದಿಟ ಇದಕ್ಕೆ ಕಾರಣ, ಇರುವುದು ಒಂದು ಧರ್ಮ, ಮಾನವ ಧರ್ಮ, ಬೇರೆ ಒಂದು ಧರ್ಮ ಇಲ್ಲ. ಹಿಂದೂ ಧರ್ಮದಲ್ಲಿ ಒಂದು ದೊಡ್ಡ ಪಂಗಡವನ್ನು ಅಸ್ಪೃಶ್ಯರೆಂದು ಬಹುಕೆಟ್ಟ ರೀತಿಯಲ್ಲಿ ನಡೆಸಿಕೊಂಡಿರುವುದು ದಿಟ. ಇದು ಧರ್ಮದಲ್ಲಿ ಒಂದು ಕುಂದು. ಜಾತಿಯೆಂಬ ಭಾವನೆಯು ಒಂದು ಅತಿರೇಕ. ಮಠಾಧಿಪತಿಗಳು, ಪೀಠಾಧಿಪತಿಗಳು, ಸ್ವಾಮಿಗಳು, ಗುರುಗಳು ಎಲ್ಲರೂ ತಮ್ಮ ಸ್ಥಾನಕ್ಕೆ ತಕ್ಕಂತೆ ನಡೆಯುತ್ತಿಲ್ಲ ಬಾಬಾಗಳು, ಸಾಧುಗಳು, ಸಂನ್ಯಾಸಿಗಳು ಜನರ ಮೌಢ್ಯವನ್ನು ಪೋಷಿಸಿ ಪ್ರಯೋಜನ ಪಡೆಯುತ್ತಿದ್ದಾರೆ. ಅದಿಷ್ಟೂ ಒಪ್ಪಿಗೆಯ ಮಾತು. ಒಪ್ಪದ ಮಾತು ಇವು ವೇದ ಉಪನಿಷತ್ತುಗಳನ್ನು ಬರೆದ ಬುದ್ಧಿವಂತರು ಅಸ್ತಿತ್ವ ಇಲ್ಲದ ದೈವದ ಬಾಯಿಗೆ ಏತೇತರಲ್ಲೋ ಮಾತುಗಳನ್ನು ತುರುಕಿಸಿ ಭಯ ಹುಟ್ಟಿಸಿ ನಂಬಿಸಿ ಜನರನ್ನು ಮೋಸಗೊಳಿಸುತ್ತಾ ಬಂದಿದ್ದಾರೆ ಎನ್ನುವುದು, ಮನುಷ್ಯ ದೇವರನ್ನು ಸೃಷ್ಟಿಸಿದ್ದಾನೆ ಎನ್ನುವುದು, ಇತರ ಪ್ರಾಣಿಗಳು ದೇವರ ಮಾತನ್ನು ಆಡುತ್ತಿಲ್ಲ, ಜೀವಿಸಿವೆ, ಮನುಷ್ಯನಿಗೆ ಮಾತ್ರ ದೇವರು ಏಕೆ ಬೇಕು ಎನ್ನುವುದು, ನಮ್ಮ ಆಚಾರದಲ್ಲಿ ವ್ಯವಹಾರದಲ್ಲಿ ತಾವು ಕಂಡಿರುವ ಕುಂದುಗಳು ನಮ್ಮ ಧರ್ಮದ ಕುಂದು ಎಂದಿರುವುದು, ಇವು ಇವೆ ಎಂಬುದನ್ನು ಈ ಮುನ್ನ ಬಲ್ಲ ಜನ ಕಂಡಿದ್ದರು ಎನ್ನುವುದನ್ನು ಕಾಣದೆ ಇರುವುದು, ದೇವರನ್ನು ಕಾಣುವುದು ಎಂಬಲ್ಲಿ "ಕಾಣು" ಪದಕ್ಕೆ ತಪ್ಪು ಅರ್ಥವನ್ನು ಕೊಡುವುದು, ಮೇಲಾಗಿ, ಒಂದು ಗಂಭೀರ ವಿಷಯವನ್ನು ಚರ್ಚಿಸುವಲ್ಲಿ ವ್ಯಂಗ್ಯವಾಗಿ ನುಡಿದಿರುವುದು, ಭರತವರ್ಷ ತನ್ನ ಹೊಣೆಯನ್ನು ನಿರ್ವಹಿಸಬೇಕೆಂದರೆ ಇಂದಿನ ದುರವಸ್ಥೆಯಿಂದ ಬಿಡಿಸಿಕೊಂಡು ಹಿಂದಿನಿಂದ ಬಂದಿರುವ ಸಂಸ್ಕೃತಿಯನ್ನು ತಿದ್ದಿಕೊಳ್ಳಬೇಕು ಎಂದು ನಾನು ಹೇಳಿರುವುದನ್ನು ಗಮನಿಸದಿರುವುದು

ಈ ಸಣ್ಣ ಮಿತ್ರರು ಇಂದಿನ ನಮ್ಮ ವಿಚಾರವಂತರ ಒಂದು ಸಮುದಾಯದ ಒಬ್ಬ ಪ್ರತಿನಿಧಿ. ನಮ್ಮ ಸಂಸ್ಕೃತಿಯನ್ನು ಹೊಗಳುವ ಜನರು ಹೇಗೋ ಹಾಗೆ ಇವರೂ ದೇಶದ ಪ್ರೇಮಿಗಳೇ. ದೇಶಪ್ರೇಮಿಗಳಾದದ್ದರಿಂದಲೇ ನಮ್ಮ ಇಂದಿನ ದುರವಸ್ಥೆಯನ್ನು ನೋಡಿ ಇವರ ಮನಸ್ಸು ರೋಸಿದೆ, ಇದರಿಂದ ದೇಶವನ್ನು ಕುರಿತು ಕೆಟ್ಟಮಾತನ್ನಾಡಿಸುತ್ತದೆ ಈ ಮನೋಧರ್ಮ ನಮಗೆ ನಮ್ಮ ಆಂಗ್ಲ ವಿದ್ಯೆಯಿಂದ ಬಂದಿತು ಎಂದದ್ದಾಗಿದೆ. ಆದರೆ ಹಿಂದೆ ಸಹ ನಮ್ಮ ಜೀವನದಲ್ಲಿ ಇಂಥ ಪ್ರಜ್ಞೆ ಬಂದದ್ದುಂಟು ಈಗ ಆಂಗ್ಲ ವಿದ್ಯೆಯಿಂದ ಮೂಡಿದ ವಿಚಾರ ಕ್ರಮ, ದಿಟವಾಗಿ ಕುಂದುಗಳಾದ ವಿವರಗಳಲ್ಲಿ ಬೇಸರ ವನ್ನು ಮೂಡಿಸಿದಂತೆ ನಮ್ಮನು ಅವಿಶ್ವಾಸದ ದಾರಿಗೂ ನೆಳೆಯಿತು ಅನ್ನ ದಲ್ಲಿ ಕಲ್ಲು ಸಿಕ್ಕಿತು ಎಂದು ಅನ್ನವನ್ನೆಲ್ಲ ಎಸೆಯುವಂತೆ, ಕುಂದು ಕಂಡದ್ದ ರಿಂದ ನಮ್ಮ ಸಂಸ್ಕೃತಿಯನ್ನೇ ತೊರೆಯುವ ಎನ್ನುವಂತೆ ಮಾಡಿತು. ಇಂಥ ವೇಳೆ ನಾವು ಸ್ವಲ್ಪ ತಾಳ್ಮೆಯನ್ನು ಬಳಸಬೇಕು. ನೆಗಡಿ ಹಿಡಿಯಿತು ಎಂದು ಮೂಗನ್ನು ಕೊಯ್ಯುವರುಂಟೆ? ಇನ್ನಷ್ಟು ವಿಚಾರಮಾಡಿ ಸಂಸ್ಕೃತಿಯಲ್ಲಿ ಒಳ್ಳೆಯದು ಏನಿದೆ ಅದನ್ನು ಉಳಿಸಿಕೊಳ್ಳಬೇಕು ಅವಶ್ಯಕ ಕಂಡಲ್ಲಿ ಅದನ್ನು ತಿದ್ದಿಕೊಳ್ಳಬೇಕು.

ಉದ್ಧಾರವಾಗಬೇಕಾದರೆ ನಮಗೆ ಇದಲ್ಲದೆ ಬೇರೆ ಗತಿಯಿಲ್ಲ. ಹತ್ತಿರ ಹತ್ತಿರ ಆರವತ್ತು ವರ್ಷಗಳ ಹಿಂದೆ ನಾನೇ ಒಂದು ಸಂದರ್ಭದಲ್ಲಿ ನಮ್ಮ ಜನರಲ್ಲಿ ಈ ಅರಿಕೆಯನ್ನು ಮಾಡಿದೆನು ಮನೆಯಲ್ಲಿ ಮೃಷ್ಟಾನ್ನ ಸಿದ್ಧವಾಗಿದೆ ಇದನ್ನು ಕಾಣದೆ ನಾವು ಭಿಕ್ಷಾಪಾತ್ರೆಯನ್ನು ಹಿಡಿದು ಬೀದಿ ಬೀದಿ ಅಲೆಯು ತ್ತಿದ್ದೇವೆ. ಅನ್ನ ಬೇಕಾದ ಹಾಗಿದೆ. ತಿನ್ನುವ ಪುಣ್ಯವಿಲ್ಲ. ಪಾಶ್ಚಾತ್ಯ ವಿದ್ಯೆಯನ್ನು ಕಲಿತ ಈ ನಮ್ಮ ಮಿತ್ರರಂಥವರು ಮಾಂಟೇಯ್ನನ್ನು ಬಲ್ಲರು, ವಾಲ್ಟೇರನ್ನು ಕಾಣರು. ಸಾಕ್ರೆಟಿಸ್, ಎಪಿಕ್ಟಿಟಸ್, ಸ್ಪಿನೋಜ, ಸೆಂಟ್ ಫ್ರಾನ್ಸಿಸ್, ಇಂಥವರ ಗ್ರಂಥಗಳನ್ನು ಓದಿ ತಿಳಿದುಕೊಳ್ಳುವವರ ಸಂಖ್ಯೆ ಕಡಿಮೆ. ಹಾಗೆ ನೋಡುವವರಿಗೆ ಅಲ್ಲಿ ಸಿಕ್ಕುವ ವಿಷಯವೂ ನಮ್ಮ ಸಂಸ್ಕೃತಿ ಯಲ್ಲಿರುವುದೇ, ಬೇರೆಯಲ್ಲ. ಎಷ್ಟು ಯುಗ ತಪಸ್ಸುಮಾಡಿ ಭರತವರ್ಷ ಈ ತತ್ವವನ್ನು ತಿಳಿಯಿತೋ ಇದನ್ನು ಇನ್ನೂ ಅಶ್ರದ್ಧೆಯಿಂದ ನೋಡೋಣವೇ ? ಇದಕ್ಕೆ ಬ್ರಾಹ್ಮಣರಿಲ್ಲ, ಬ್ರಾಹ್ಮಣೇತರರಿಲ್ಲ, ಹಿಂದೂಗಳಿಲ್ಲ, ಮುಸಲ್ಮಾನರಿಲ್ಲ.

ಈ ಧರ್ಮ ವಿಶ್ವಧರ್ಮ, ಸನಾತನ ಧರ್ಮ. ಇದರ ಪ್ರಭು ಅಚ್ಯುತನು. ಈ ಧರ್ಮವನ್ನೂ ಇದರ ಪ್ರಭುವನ್ನೂ ದೇಶದೇಶದ ಜನರು ಬೇರೆಬೇರೆಯ ಹೆಸರಿನಿಂದ ಕರೆಯಬಹುದು. ಆದರೆ ಇದು ಮಾನವ ವರ್ಗದ ಧರ್ಮ, ಧರ್ಮ ವಿವೇಚನೆಯೆಲ್ಲದರ ಸಾರತತ್ವವಾಗಿದೆ. ಇದನ್ನು ನಮ್ಮ ಹಿರಿಯರು ಹಿಂದೆ ಪುರಾಣ ಇತಿಹಾಸ ಹರಿಕಥಾ ಪ್ರಸಂಗ ಮುಂತಾದ ರೂಪಗಳಲ್ಲಿ ಜನಸಾಮಾನ್ಯರಲ್ಲಿ ಪ್ರಚಾರ ಮಾಡಿದರು ಅದರ ಫಲ ಎಷ್ಟೇ ಜೀರ್ಣವಾಗಿಯಾದರೂ ಈಗಲೂ ನಮ್ಮ ಜನರ ಬದುಕಿನಲ್ಲಿ ಕಾಣುತ್ತಿದೆ ನಾವು ಅದನ್ನು ಜನರಲ್ಲಿ ಮತ್ತೆ ತರಬೇಕು. ಜನಾಂಗದ ಜೀವನದ ಎಲ್ಲಾ ಕಾರ್ಪಣ್ಯಕ್ಕೂ ಎಲ್ಲಾ ದೌರ್ಬಲ್ಯಕ್ಕೂ ಇಲ್ಲಿ ಉಪಶಮನವಿದೆ, ಎಲ್ಲ ಅಭ್ಯುದಯಕ್ಕೂ ಶ್ರೇಯಸ್ಸಾಧನೆಗೂ ಇಲ್ಲಿ ಮೂಲಮಂತ್ರವಿದೆ ನಾವು ಇದನ್ನು ವರಿಸಬೇಕು, ಜಾತಿ ಮತ ಭೇದಗಳ ವಿರಸತೆಯನ್ನು ಬಿಟ್ಟು ಸಾರ್ವಜನಿಕವಾದ ಸುಖದ ಮುಖ್ಯಸೂತ್ರವನ್ನು ಹಿಡಿದು ನಡೆಯಬೇಕು.

ಇದೇ ದಿನಗಳಲ್ಲಿ ಇನ್ನೊಂದು ಸಂದರ್ಭದಲ್ಲಿ ನಾನು ಧರ್ಮಗಳನ್ನು ಕುರಿತು ಈ ಮಾತುಗಳನ್ನೂ ಅರಿಕೆ ಮಾಡಿದೆನು.

ಒಂದೊಂದು ಮತದ ಜನರೂ ಇತರ ಎಲ್ಲ ಮತಗಳ ಗುರುಗಳ ವಿಷಯದಲ್ಲಿ, ಅವರ ಉಪದೇಶದ ವಿಷಯದಲ್ಲಿ, ಅವರ ಅನುಯಾಯಿಗಳ ವಿಷಯದಲ್ಲಿ, ಸಮಾಧಾನ ಬುದ್ಧಿಯಿಂದ ನಡೆದುಕೊಳ್ಳುವುದು ಬಹಳ ಅವಶ್ಯಕ. ಹೀಗೆ ನಡೆದುಕೊಳ್ಳದ್ದರಿಂದ ಮಾನವನ ಚರಿತ್ರೆಯಲ್ಲಿ ಈ ಮೊದಲು ಅನೇಕ ಅನರ್ಥಗಳು ಸಂಭವಿಸಿದ್ದುಂಟು, ಈಗಲೂ ಸಂಭವಿಸುತ್ತಿವೆ ಇನ್ನು ಮೇಲಾದರೂ ಮಾನವ ವರ್ಗ ಒಂದು ಮುಖವಾಗಿ ಮುಂದುವರಿಯಬೇಕಾದರೆ ಇಂಥ ಸಮಾಧಾನ ಬಹಳ ಅಗತ್ಯ. ಆದರೆ ಈಗ ನಾವೆಲ್ಲ ಸಾಮಾನ್ಯವಾಗಿ ನಾವು ಯಾವ ಮತದಲ್ಲಿ ಹುಟ್ಟಿದೇವೋ ಆ ಮತ ಇತರ ಎಲ್ಲ ಮತಗಳಿಂದ ಶ್ರೇಷ್ಠವೆಂಬಂತೆ ನಡೆಯುತ್ತೇವೆ ನಮ್ಮದೆನ್ನುವ ಆ ಮತ ಇತರ ಎಲ್ಲ ಮತಗಳಿಗಿಂತ ಒಳ್ಳೆಯದೆನ್ನುವುದಕ್ಕೆ ನಿಜವಾದ ಕಾರಣಗಳಿರಬಹುದು, ಅದನ್ನು ತಿಳಿದಿರುವುದಿಲ್ಲ. ಇತರ ಮತ ಹೇಳುವುದೇನು ಎಂದು ನಮಗೆ ಬೇಕಿಲ್ಲ, ಆದರೆ ನಮ್ಮ ಮತ ದೊಡ್ಡದಿರಬೇಕು ಎಂದು ನಮ್ಮ ಭಾವನೆ. ಅದರಲ್ಲಿ ನಾವು ಹುಟ್ಟಿದ್ದರಿಂದ ಅದು ದೊಡ್ಡದು ಎಂಬುದೇ ಪ್ರಾಯಶಃ ನಮ್ಮ

ಅಂತರ್ಯುದ್ಧದ ನಂಬಿಕೆ ಎಂಬಂತೆ ಕಾಣುತ್ತದೆ. ಹೀಗೆ ನಾವೆಲ್ಲ ನಮ್ಮ ನಮ್ಮ ಮತಗಳಿಗೆ ನಮ್ಮ ಅಭಿಮಾನದ ಗೊಂಗಡಿಯೊಂದನ್ನು ಹಾಕಿ ಸತ್ಯದ ದೇವರಿಗೆ ಕತ್ತಲ ಹಣತೆಯನ್ನು ಹಚ್ಚಿಟ್ಟು ಪೂಜೆ ಮಾಡುತ್ತೇವೆ. ನಾವು ಕಂಡೆವೆಂಬ ದೇವರನ್ನು ನಮ್ಮ ದೇವರು ಮಾತ್ರ ಎಂದು ಭಾವಿಸಿ ನಮ್ಮ ಬೊಮ್ಮ ಉಳಿದ ಜನರಿಗೆ ಇಲ್ಲ ಗುಮ್ಮನಾಗುವಂತೆ ನಡೆಯುತ್ತೇವೆ. ಅನುಯಾಯಿಗಳೇ ಹೀಗಾದ ಮೇಲೆ ಆಯಾ ಮತದ ಪ್ರಚಾರಕರ ಮಾತನ್ನು ಹೇಳಬೇಕಾದದ್ದೇ ಇಲ್ಲ. ತನ್ನ ಮಗುವಿನ ತಂದೆ ತನ್ನ ಸವತಿಯ ಮಗುವಿಗೂ ತಂದೆ ಎಂದು ನೆನೆಯದೆ ತಂದೆಯ ತೊಡೆಯಮೇಲೆ ಕುಳಿತುಕೊಳ್ಳಕೂಡದೆಂದು ಧ್ರುವನನ್ನು ಅಟ್ಟಿದ ಸುರುಚಿ ಯಂತೆ ಇವರು ತಮ್ಮವರಲ್ಲವೆಂದವರನ್ನು ಲೋಕೇಶ್ವರನ ಸಮಕ್ಷಮಕ್ಕೆ ಬಿಡುವುದಿಲ್ಲ ಎನ್ನುತ್ತಾರೆ

## ಸನಾತನ ಧರ್ಮ

ನಮ್ಮ ನಮ್ಮ ಮತಗಳನ್ನು ನಾವು ಮತದ ದೃಷ್ಟಿಯಿಂದ ನೋಡಿದರೆ ವಿವಾದ ತಪ್ಪಿದ್ದಲ್ಲ. ಅದರಲ್ಲಿಯೂ ಮಮತೆಯಿಂದ ನೋಡಿದೆವಾದರೆ ಯುದ್ಧವೇ ಸಿದ್ಧ ನಮ್ಮ ಮತ ಹಿರಿಯದು ಎನ್ನಬೇಕು ಎನ್ನುವವರು ನಮ್ಮ ಮತದ ಉತ್ತಮ ಭಾಗವನ್ನೂ ಇತರ ಮತದ ನಿಕೃಷ್ಟ ಭಾಗಗಳನ್ನೂ ತೆಗೆದು ಕೊಳ್ಳುತ್ತೇವೆ. ಅವರೂ ಹಾಗೆಯೇ ಅವರ ಅತ್ಯುತ್ತಮ ತತ್ವಗಳನ್ನೂ ನಮ್ಮಲ್ಲಿ ಪ್ರಚಾರಕ್ಕೆ ಬಂದಿರುವ ತಪ್ಪುಗಳನ್ನೂ, ತಮ್ಮ ಉಪದೇಶದ ನೀತಿ ಯನ್ನೂ ನಮ್ಮ ಆಚಾರದ ಕೀಳ್ಮೆಯನ್ನೂ ಎತ್ತಿ ತೋರಿಸುತ್ತಾರೆ. ಇದು ವ್ಯಷ್ಟಿಯ ದೃಷ್ಟಿ. ತಂಡದ ದೃಷ್ಟಿ ಖಂಡ ದೃಷ್ಟಿ. ಮಾನವ ವರ್ಗವೆಲ್ಲದರ ದೃಷ್ಟಿ ಈ ಖಂಡದೃಷ್ಟಿಯಾಗಲಾರದು. ಮತವೆಂಬ ಹೆಸರು ಒಪ್ಪುವ ಎಲ್ಲ ಮತದಲ್ಲಿಯೂ ಉತ್ತಮವಾದ ನೀತಿಬೋಧೆ ಇದ್ದೇ ಇದೆ. ಅದನ್ನು ಅನುಸರಿಸುವ ಜನರಲ್ಲಿ ಉತ್ತಮ ಜೀವನವೂ ಇದೆ ನಿಕೃಷ್ಟ ಆಚಾರವೂ ಇದೆ. ಒಟ್ಟಿನ ದೃಷ್ಟಿಯಿಂದ ನೋಡುವವನಿಗೆ ಆಯಾ ಮತದ ಉನ್ನತ ಭಾಗವೇ ಮುಖ್ಯವೆಂದು ಕಾಣುವುದು ; ಎಲ್ಲ ಮತಗಳೂ ಮನುಷ್ಯನನ್ನು ಉದ್ಧರಿಸುವ ಹಿರಿಯ ಕೆಲಸದಲ್ಲಿ ತೊಡಗಿರುವುವೆಂದು ತೋರುವುದು ಕಾಣುವುದು.

ಸನಾತನ ಧರ್ಮ ಮಾನವ ಧರ್ಮವಾಗಿಯೇ ಆರಂಭವಾಯಿತು. ಇದು

ಎಲ್ಲ ದೇವರಿಗೆ ಮಾಡುವ ನಮಸ್ಕಾರಗಳೂ ಕೇಶವನನ್ನು ಸೇರುತ್ತವೆ ಎಂದು ಹೇಳುತ್ತದೆ, ಭಗವಂತನನ್ನು ಹಲವು ಮತಗಳು ಹಲವು ಹೆಸರಿನಿಂದ ಕರೆಯುವ ತ್ರೈಲೋಕ್ಯನಾಥನು ಎಂದು ವರ್ಣಿಸುತ್ತದೆ. ಕೇಶವನೇನು, ಶಿವನೇನು ಎಂದೂ, ಇಬ್ಬರಲ್ಲಿ ಭೇದವಿಲ್ಲವೆಂದೂ ಬೋಧಿಸುತ್ತದೆ. ಹೀಗೆ ವಿಶ್ವಧರ್ಮ ವಾಗಬೇಕೆಂದು ಹೊರಟ ಸನಾತನ ಧರ್ಮಲತೆ ಮಧ್ಯೆ ಎಲ್ಲೋ ಮುರುಟಿ ಕೊಂಡಿತು ನಿಜ ಈಗ ಅದು, ಇತರ ಮತಗಳ ಮಾತು ಹಾಗಿರಲಿ, ತನ್ನೊಳಗೇ ತಾನೇ ಜಗಳವನ್ನು ಮಾಡಿಕೊಂಡಿದೆ ಶಿವನೇನು, ವಿಷ್ಣುವೇನು ಎನ್ನುವುದನ್ನು ಮರೆತು ನಾವು ಈಚೆಗೆ ಸರ್ವಾಧಿಕಾರದ ಸಲುವಾಗಿ ಗುದ್ದಾಡು ವುದಕ್ಕೆ ಶಿವನನ್ನೂ ವಿಷ್ಣುವನ್ನೂ ಕುಸ್ತಿಯ ಕಣಕ್ಕೆ ಬಿಟ್ಟಿದ್ದೇವೆ. ಇವನ ಮುಂದೆ ಅವನನ್ನು ಕೈಮುಗಿಸಿ ನಿಲ್ಲಿಸುವುದೂ, ಅವನ ಕಾಲಿಗೆ ಇವನಿಂದ ನಮಸ್ಕಾರ ಮಾಡಿಸುವುದೂ ನಮ್ಮ ಜನಕ್ಕೆ ಈಗ ಮಕ್ಕಳ ಆಟದಂತೆ ಸುಲಭ ವಾಗಿದೆ ಆದರ ಇದು ಸನಾತನ ಧರ್ಮಕ್ಕೆ ಈಚೆಗೆ ಒಂದ ಒಂದು ಅವಸ್ಥೆ ಮಾತ್ರ. ಇದು ಸದಾಕಾಲವೂ ಇರಲಾರದು ನಮ್ಮ ಧರ್ಮವನ್ನು ನಾವು ಹೇಗೆ ಸಣ್ಣದು ಮಾಡಿದರೂ ಅದು ಹಿಮಾಲಯದಂತೆ ಶುಭ್ರವಾಗಿ ಅಚಲವಾಗಿ ನಿಂತಿದೆ. ಅದಕ್ಕೆ ಬುದ್ಧಧರ್ಮ ಬೇರೆಯಲ್ಲ; ಕ್ರಿಸ್ತಧರ್ಮ ದೂರವಲ್ಲ, ಮಹಮ್ಮದನ ಧರ್ಮ ಹಗೆಯಲ್ಲ ಮರಳಿ ಬುದ್ಧಿ ಬಂದಾಗ್ಯೆ ನಾವು ಅದರ ಹಿರಿಯ ಭಾವಗಳನ್ನು ಅನುಷ್ಠಾನ ಮಾಡುವೆವು ಆಗ್ಯೆ ಅದರ ಆಚಾರದಲ್ಲಿ ಬುದ್ಧಧರ್ಮದಲ್ಲಿ ಆಚಾರದಲ್ಲಿರುವ ಭಾವವೈಶಾಲ್ಯವನ್ನೂ ಕ್ರಿಸ್ತಧರ್ಮದ ಆಚಾರದಲ್ಲಿರುವ ದೀನವಾತ್ಸಲ್ಯವನ್ನೂ, ಮಹಮ್ಮದನ ಧರ್ಮದ ಆಚಾರ ದಲ್ಲಿರುವ ಸಮದರ್ಶಿತೆಯನ್ನೂ ಸೇರಿಸಿಕೊಳ್ಳುವೆವು. ಆಗ ಸನಾತನ ಧರ್ಮವು ಹಿಂದೆ ಉದ್ದೇಶಿಸಿದಂತೆ ವಿಶ್ವಧರ್ಮವಾಗುವುದು. ಆ ಧರ್ಮದಲ್ಲಿ ಆಗ್ಯೆ ಹಿಂದೂಗಳು, ಕ್ರಿಸ್ತರು, ಮಹಮ್ಮದೀಯರು, ಬೌದ್ಧರು, ಇತರ ಎಲ್ಲ ಮತಗಳ ಜನರು ತಮ್ಮ ತಮ್ಮ ಮತವನ್ನು ಕಾಣುವರು.

ಮೂವತ್ತು ವರ್ಷಗಳ ಬಳಿಕ ಇನ್ನೊಂದು ಸಂದರ್ಭದಲ್ಲಿ ನಾನು ಧರ್ಮಗಳು ಪರಸ್ಪರ ಸಮಾಧಾನವಾಗಿ ನಡೆಯಬೇಕು ಎಂಬಲ್ಲಿ ಈ ಮುಂದಿನ ಮಾತನ್ನು ಅರಿಕೆ ಮಾಡಿದೆನು.

ಗಮನಿಸಿ ನೋಡಿದರೆ ನಮ್ಮ ಸಂಸ್ಕೃತಿಯನ್ನು ಕುರಿತ ಒಂದು ವಿಷಯ

ನಮಗೆ ಮನಸತಟ್ಟುತ್ತದೆ ಸಾವಿರಾರು ವರ್ಷ ಎಳೆಹರಿಯದೆ ನಡೆದುಬಂದಿರುವ ಈ ಸಂಸ್ಕೃತಿ ಅದರ ಈ ದೀರ್ಘ ಇತಿಹಾಸದ ಒಂದಲ್ಲ ಒಂದು ಸಮಯದಲ್ಲಿ ಜನತೆಯ ಕ್ಷೇಮವನ್ನು ಸಾಧಿಸಲು ಅದು ಎಷ್ಟೆಷ್ಟೋ ಉಪಾಯಗಳನ್ನು ಹೂಡಿ ಕೆಲವಲ್ಲಿ ಸೋತು ಕೆಲವಲ್ಲಿ ಗೆದ್ದು ಅನ್ಯಾದೃಶ ಅನುಭವವನ್ನು ಪಡೆದಿದೆ ಹೀಗಾಗಿ ನಾವು ಯಾವುದನ್ನು ಇಂದು ಹೊಸತು ಎನ್ನುತ್ತೇವೋ ಅದು ದಿಟವಲ್ಲಿ ಅಷ್ಟು ಹೊಸತೂ ಅಲ್ಲ, ಅಷ್ಟು ಬೇರೆಯೂ ಅಲ್ಲ ಆಗುತ್ತದೆ ನಮ್ಮ ಹರಿಜನೋದ್ಧರಣದ ಸಮಸ್ಯೆಯನ್ನು ತೆಗೆದುಕೊಳ್ಳೋಣ ಎಷ್ಟು ಬಿಚ್ಚಿದರೂ ಗಂಟಾಗಿ ನಿಂತ ಈ ತೊಡಕಿನಿಂದ ಬೇಸರಗೊಂಡು ತುಂಬ ಜಾಣರಾದ ನಮ್ಮ ಹರಿಜನ ನಾಯಕರೊಬ್ಬರು ಹಿಂದೂ ಧರ್ಮವನ್ನು ತ್ಯಜಿಸಿ ಬೌದ್ಧ ಧರ್ಮವನ್ನು ಸ್ವೀಕರಿಸಿದರು. ಆದರೆ ನಮ್ಮಲ್ಲಿ ಹರಿಜನರನ್ನು ಇತರ ಜನರು ಕಾಣುವ ರೀತಿ ಹಿಂದೂ ಧರ್ಮದ ಒಂದು ಅಂಗ ಎಂದು ನಾವಾಗಲಿ ಈ ನಾಯಕರಾಗಲಿ ತಿಳಿಯುವುದು ಸರಿಯೆ? "ಚಂಡಾಲೋಽಸ್ತು ನತು ದ್ವಿಜೋಽಸ್ತು ಗುರುರಿತಿ ಏಷಾ ಮನೀಷಾ ಮಮ" ಎಂದು ಶಂಕರಾಚಾರ್ಯರು ಹೇಳಿದರಲ್ಲ? ನಂದನಾರ್ ಅಂತ್ಯಜನಾದರೂ ಭಕ್ತಶಿರೋಮಣಿಯಾಗಿ ನಟರಾಜನ ಸನ್ನಿಧಿಯಲ್ಲಿ ಸ್ಥಾನ ಪಡೆದವನೇ. ಅಂತ್ಯಜ ತಿರುಪಾಣಿಯನ್ನು ಭಕ್ತಗೋಷ್ಠಿಯ ಮೊದಲಿಗ ಬ್ರಾಹ್ಮಣ ಲೋಕಸಾರಂಗ ತನ್ನ ಹೆಗಲಮೇಲೆ ಕೂರಿಸಿಕೊಂಡು ರಂಗನಾಥನ ಸನ್ನಿಧಿಗೆ ಒಯ್ದನಲ್ಲವೆ? ರಾಮಾನುಜಾಚಾರ್ಯರು ಎಂಟುನೂರು ವರ್ಷದ ಹಿಂದೆ ಹರಿಜನರಿಗೆ ಕೆಲವು ದೇವಾಲಯಗಳಲ್ಲಿ ಪ್ರವೇಶ ಕೊಡಲಿಲ್ಲವೆ? ಬಸವಣ್ಣನವರು ಶಿವಶರಣರಾದ ಹರಿಜನರನ್ನು ತನ್ನ ತಂದೆಯೆಂದು, ಹಿರಿಯನೆಂದು ಪೂಜಿಸಲಿಲ್ಲವೆ? ಮನೆತನದ ಈ ಹಿರಿಯರ ನಡತೆ ಲೆಕ್ಕಕ್ಕಿಲ್ಲ ಇಷ್ಟು ಮುಖ್ಯರಲ್ಲದ, ತಿಳಿವು ಸಾಲದ, ಇಂದಿನ ಸಾಮಾನ್ಯ ಜನದ ನಡತೆಯೇ ಲೆಕ್ಕಕ್ಕೆ ಬರಬೇಕೆ? ಸಾಮಾನ್ಯ ಜನತೆಯ ತಪ್ಪನ್ನು ಎತ್ತಿ ಹಿಡಿದು ನಿಮಗೆ ಬುದ್ಧಿ ಇಲ್ಲ ಎಂದು ಹೇಳುವುದು ಆ ತಪ್ಪುಗಳನ್ನು ತಿದ್ದುವುದಕ್ಕೆ ತಕ್ಕ ಮಾರ್ಗವಲ್ಲ. ದೋಷದ ವಿಷಯದಲ್ಲಿ ಸಹನೆ ಸಲ್ಲ. ಆದರ ಅದನ್ನು ತಿದ್ದುವುದರಲ್ಲಿ ತಾಳ್ಮೆ ಕೆಡಬಾರದು. ನಮ್ಮ ಜನದ ಜೀವನವನ್ನು ಪರಿಷ್ಕರಿಸಬಯಸುವ ನಾವು ನಮ್ಮ ಪೈತಾಮಹ ಸಂಸ್ಕೃತಿಯ ಸಲಕ್ಷಣಗಳನ್ನು ತಿಳಿದುಕೊಂಡು ಅವುಗಳನ್ನು ಸನ್ನೆಯಾಗಿ ಉಪಯೋಗಿಸಬೇಕು.

ನಮ್ಮ ಸಂಸ್ಕೃತಿಯು ಇಂದಿನ ಸ್ಥಿತಿಯಲ್ಲಿ ಕುಂದುಗಳು ಇವೆ ಎಂಬ ವಿಷಯದಲ್ಲಿ ಅಭಿಪ್ರಾಯ ಭೇದ ಇಲ್ಲ. ಭೇದ ಇರುವುದು ಈಗ ನಾವು ಹೇಗೆ ನಡೆಯಬೇಕು ಎಂಬ ವಿಷಯದಲ್ಲಿ ಕುಂದುಗಳ ಕಾರಣದಿಂದ ಈ ಮಿತ್ರರು ಧರ್ಮವನ್ನು ಅಲ್ಲಗಳೆಯುತ್ತಾರೆ ನನ್ನ ಮತ್ತು ನನ್ನಂಥವರ ವಿಜ್ಞಾಪನೆ, ಆಚಾರದಲ್ಲಿ ತಪ್ಪಿದ್ದೇವೆ ಎಂಬ ಕಾರಣದಿಂದ ಅದರ ತಳಹದಿಯಾದ ಧರ್ಮವನ್ನು ತೊರೆಯುವುದು ಜಾಣಲ್ಲ ಎನ್ನುವುದು ಸಾವಿರಾರು ವರ್ಷದ ಜೀವನದಲ್ಲಿ ಆಚಾರದಲ್ಲಿ ಸಾವಿರ ತಪ್ಪುಗಳು ಮೊಳೆತವು, ಮೆರೆದವು, ಬೆಳೆದವು, ಉಳಿದವು ಅಳಿದವು ನಮ್ಮ ಧರ್ಮ ಸನಾತನ ಧರ್ಮ. ಅದು ಸದಾ ಬೆಳೆಯುತ್ತಿರುವ ಧರ್ಮ. ಈಗಲೂ ಬೆಳೆಯುತ್ತಿದೆ, ಮುಂದೂ ಬೆಳೆಯಬಲ್ಲದು. ಅದನ್ನು ಬೆಳೆಸುವ ಹೊಣೆ ಅದರ ವಲಯದಲ್ಲಿ ಜನ್ಮ ತಳೆದಿರುವ ಜನರದು. ನನ್ನ ಮಿತ್ರರು, ನಾನು, ಎಲ್ಲ ಇಂಥ ಜನ ಈ ಹೊಣೆಯನ್ನು ನಾವು ಒಪ್ಪಿಕೊಳ್ಳಬೇಕು ಇದನ್ನು ನಿರ್ವಹಿಸಲು ಯತ್ನಮಾಡಬೇಕು ಸನಾತನ ಧರ್ಮದ ಹೆಸರನ್ನು ಹೇಳುವ ಮನುಷ್ಯ ದಿಟದಲ್ಲಿ ವಿಚಾರವಂತನಾದರೆ ತನ್ನ ವಿಚಾರವನ್ನು ಆ ಧರ್ಮದಲ್ಲಿ ಸ್ಥಾಪಿಸಲು ಯತ್ನಮಾಡಬೇಕು. ಆಚಾರದಲ್ಲಿ ಬಂದಿರುವ ದೋಷಗಳನ್ನು ಬೇಸಾಯಗಾರ ಕಳೆಯನ್ನು ಕೀಳುವಂತೆ ಕಿತ್ತು ಎಸೆದು ಪೈರಾದ ಬೆಳೆಯನ್ನು ಬೆಳೆಯುವಂತೆ ಯೋಗ್ಯ ಆಚಾರವನ್ನು ಬೆಳೆಸಬೇಕು

ತಪ್ಪು ಎಂದು ಕಂಡದ್ದನ್ನು ಸರಿಪಡಿಸದೆ ತಪ್ಪಾಯಿತು ಎಂದು ಹೇಳಿ ತೃಪ್ತನಾಗಿ ಸುಮ್ಮನೆ ಕುಳಿತಿರುವ ವಿಚಾರವಂತ ಜನ ತನ್ನ ಧರ್ಮವನ್ನು ಮರೆತಿದ್ದಾನೆ ಇದನ್ನು ನಾನು, ಕೋಣೆಯಲ್ಲಿ ಕಸ ಹೆಚ್ಚಿತು ಎಂದು ದೂರುತ್ತಾ ಮೂಲೆಯಲ್ಲಿ ನಿಲ್ಲುವ ಪರಕೆಯ ವರ್ತನೆಯೆಂದು ವರ್ಣಿಸಿದ್ದುಂಟು. ತಮ್ಮನ್ನು ಹೆತ್ತ ಧರ್ಮವನ್ನು ಇನ್ನೂ ಹಿಡಿದು ನಡೆಯುತ್ತಿರುವ ಈ ಮಿತ್ರರಂಥ ನಮ್ಮ ಸೋದರರಲ್ಲಿ ನಮ್ಮ ಆಚಾರ ವ್ಯವಹಾರಗಳಲ್ಲಿ ತಪ್ಪುಗಳನ್ನು ತಿದ್ದಿಕೊಳ್ಳುವ ಯತ್ನ ಒಂದೇ ಸರಿಯಾದ ವರ್ತನೆ.

ಮತ್ತೆ ಇಲ್ಲಿ ನಾನು ಈ ಮುನ್ನ ನಮ್ಮ ಧರ್ಮವನ್ನು ಕುರಿತು ಮಾಡಿದ ವಿಜ್ಞಾಪನೆಯನ್ನು ಅರಿಕೆ ಮಾಡಬಯಸುತ್ತೇನೆ. ಸನಾತನ ಧರ್ಮದ ಬೆಳವಣಿಗೆಯಲ್ಲಿ ಒಬ್ಬ ದೇವರ ಹತ್ತು ಹೆಸರು ಹತ್ತು ದೇವರಾಗಿ, ಒಬ್ಬೊಬ್ಬ ದೇವರ ಅನುಯಾಯಿಗಳೂ ತಮ್ಮ ದೇವರು ಹಿರಿಯರೆನ್ನುವುದಕ್ಕೆ ಇಲ್ಲದ ಕಥೆಗಳನ್ನು,

ಹೊರಗಿನ ದೇವರು ಕಡಿಮೆ ಎನ್ನುವುದಕ್ಕೆ ಸಲ್ಲದ ಕಥೆಗಳನ್ನು ಕಟ್ಟಿ, ತಮ್ಮ ಈ ಹೋರಾಟಿಯ ವ್ಯಾಪಾರದಿಂದ ನಮ್ಮ ಧರ್ಮದ ಜೀವಂತ ಸೂತ್ರಗಳನ್ನು ಅಶ್ರದ್ಧೆಯ ಹೊದರಿನಲ್ಲಿ ಮುಚ್ಚಿ ಮರೆಮಾಡಿರುವುದು ಕಾಣುತ್ತದೆ ಇದರಿಂದ ಈ ಹಿಂದೆ ಸಮಾಜದಲ್ಲಿ ತಕ್ಕಷ್ಟು ಕೇಡಾಗಿದೆ, ಈಗಲೂ ಆಗುತ್ತಿದೆ ಸನಾತನ ಧರ್ಮ ನಮ್ಮ ಜೀವನದಲ್ಲಿ ವಾಸ್ತವವಾಗಿ ಉಳಿಯಬೇಕೆಂದರೆ ನಮ್ಮ ಜನತೆಯು ಮನಸ್ಸು ಇಂಥ ಹೊದರುಗಳಿಂದ ಬಿಡಿಸಿಕೊಳ್ಳಬೇಕು, ಧರ್ಮದ ಜೀವಂತ ಸೂತ್ರಗಳನ್ನು ಗಟ್ಟಿಯಾಗಿ ಹಿಡಿಯಬೇಕು

೩

## ಧರ್ಮದ ಮೂಲ

ಸ್ವಾತಂತ್ರ್ಯವನ್ನು ಅನುಗ್ರಹಿಸಿದ ಬಗ್ಗೆ ರಾಷ್ಟ್ರದ ಸಂವಿಧಾನದಲ್ಲಿ ದೇವರಿಗೆ ವಂದನೆ ಸಲ್ಲಿಸದೆ ಬಿಟ್ಟಿದ್ದು ಯುಕ್ತವಾಗಲಿಲ್ಲ ಎನ್ನುವುದಕ್ಕೆ ಕಾರಣ ದೇವರಲ್ಲಿ ನಂಬಿಕೆ ಇರುವ ಜನಾಂಗದ ಪ್ರತಿನಿಧಿಗಳು ಜನತೆಯ ಇಚ್ಛೆಯನ್ನು ಕಡೆಗಣಿಸಿ ತಮ್ಮಲ್ಲಿ ಬಹು ಪ್ರಾಜ್ಞರೆಂಬ ಜನರ ಇಚ್ಛೆಯನ್ನು ಮಾನ್ಯ ಮಾಡಿದ್ದು ಎಂದು ಈ ಮುನ್ನ ಹೇಳಿದ್ದಾಗಿದೆ ಇದು ಪ್ರಜಾಪ್ರಭುತ್ವದ ಕ್ರಮ ಅಲ್ಲ. ಇದು ನಮ್ಮ ಜನಾಂಗದ ಭಾವನೆಯೇ ? ವಂದನೆಯ ವಾಕ್ಯ ಚರ್ಚೆಗೆ ಬಂದಾಗ ಪಂಡಿತ ನೆಹರೂ ಅದು ಅನವಶ್ಯಕ ಎಂದರು ಅವರ ಭಾವವನ್ನು ಒಪ್ಪಿಯೋ ಒಪ್ಪದೆಯೋ ಸಭೆಯ ಪ್ರಮುಖರು ಈ ವಾಕ್ಯವನ್ನು ಬಿಡಬಹುದು ಎಂದರು. ಉಳಿದ ಸಭಿಕರು ಅಡ್ಡಿ ಹೇಳಲಿಲ್ಲ ಸಭೆ ವಾಕ್ಯವನ್ನು ಬಿಟ್ಟು ಮುಂದುವರಿಯಿತು

ನಮ್ಮ ಜನರ ಜೀವನದಲ್ಲಿ ದೇವರು ಎಂಬ ಭಾವನೆ ಈಗಲೂ ಕೇಂದ್ರ ವಾಗಿದೆ. ಆ ಜೀವನವನ್ನು ಮೇಲಮೇಲಿಂದ ನೋಡುವವರಿಗೆ ಕೂಡ ಇದು ಸ್ಪಷ್ಟವಾಗುತ್ತದೆ ತಿರುಪತಿಗೆ ಬದರಿಗೆ ಹೋಗುವ ಯಾತ್ರಿಕರ ಸಂಖ್ಯೆ, ಪರ್ವದ ದಿನಗಳಲ್ಲಿ ಗಂಗೆಯಲ್ಲಿ ಕಾವೇರಿಯಲ್ಲಿ ಸ್ನಾನಕ್ಕೆ ಹೋಗುವವರ ಸಂಖ್ಯೆ, ಬೆಂಗಳೂರಿನಂಥ ನಗರದಲ್ಲಿ ವಿನಾಯಕನ ಚೌತಿ, ರಾಮನವಮಿಯಲ್ಲಿ ನಡೆಯುವ

ಉತ್ಸವಗಳು ಈ ವಿವರಗಳು ಈ ಮಾತಿಗೆ ತಕ್ಕಷ್ಟು ಪ್ರಮಾಣವನ್ನು ಒದಗಿಸುತ್ತವೆ ಇದರ ಜೊತೆಗೆ ಸಂವಿಧಾನದ ಕರ್ತರು ಇನ್ನೊಂದು ಸಂಗತಿಯನ್ನು ಮನಸ್ಸಿಗೆ ತೆಗೆದುಕೊಳ್ಳಬೇಕಾಗಿತ್ತು ಎಂದೂ ವಿಜ್ಞಾಪಿಸಬೇಕು. ರಾಷ್ಟ್ರಕ್ಕೆ ಸ್ವಾತಂತ್ರ್ಯವನ್ನು ಗಳಿಸಿ ತಂದ ನಾಯಕರಲ್ಲಿ ಮೊದಲಿಗರು ಗಾಂಧೀಜಿ. ದೇವರಿಗೆ ವಂದನೆ ಸಲ್ಲಿಸುವ ವಾಕ್ಯ ಇರಬೇಕೇ ಎಂದು ಕೇಳಿದ್ದರೆ ಅವರು ಏನು ಹೇಳುತ್ತಿದ್ದರು? ಸ್ವಾತಂತ್ರ್ಯ ಸಂಗ್ರಾಮದ ಉದ್ದಕ್ಕೂ ದೇವರನ್ನು ನಂಬಿ ನೇವೆಯನ್ನು ನಡೆಸಿದ ನಾಯಕ, ದಿನವೂ ಸಂಜೆ ಪ್ರಾರ್ಥನೆಯಲ್ಲಿ ದೇವರನ್ನು ನೆನೆದು ಬಾಳಿದ ನಾಯಕ, ಬುದ್ಧಿ ಸಾಲದ ಸೋದರ ಒಬ್ಬ ಗುಂಡಿಕ್ಕಿ ಆ ಗುಂಡಿನಿಂದ ತಾನು ಸಾಯುವ ಕ್ಷಣದಲ್ಲಿ 'ಹೇ ರಾಮ್' ಎಂದು ದೇವರನ್ನು ನೆನೆದು ದೇವರನ್ನು ತೊರೆದ ನಾಯಕ, ದೇವರಿಗ ವಂದನೆ ಏಕೆ ಎನ್ನುತ್ತಿದ್ದರೇ? ಇಲ್ಲ ಎಂದು ತೋರುತ್ತದೆ ಜಯ ಬಂದದ್ದು ದೇವರ ಕೃಪೆಯಿಂದ ಎಂದೇ ಗಾಂಧೀಜಿ ಹೇಳುತ್ತಿದ್ದರು. ಇದು ಅವರಿಗೆ ಹುಟ್ಟುತ್ತ ಬಂದಿದ್ದ ನಂಬಿಕೆ; ಬೆಳೆಯುತ್ತ ಬೆಳೆದಿದ್ದ ನಂಬಿಕೆ, ಸಾಯುತ್ತ ಶಾಂತಿ ಕೊಟ್ಟ ನಂಬಿಕೆ ಇದು ನಮ್ಮ ಧರ್ಮದ ಒಂದು ಮೂಲಭೂತವಾದ ನಂಬಿಕೆ. ಇದಕ್ಕೆ ಉಪನಿಷತ್ತು ಪ್ರಮಾಣ

ಬ್ರಹ್ಮ ಒಮ್ಮೆ ದೇವತೆಗಳಿಗೆ ಜಯವನ್ನು ಗಳಿಸಿಕೊಟ್ಟಿತು. ದೇವತೆಗಳು ತಾವೇ ಗೆದ್ದೆವು ಎಂದು ತಿಳಿದುಕೊಂಡರು ಬ್ರಹ್ಮ ಇದನ್ನು ತಿಳಿದು ಅವರೆದುರಿಗೆ ನಿಂತಿತು ದೇವತೆಗಳು ಈ ಮಹಾಸತ್ವವನ್ನು ಗುರುತಿಸಲಿಲ್ಲ ಅವರು ಅಗ್ನಿಗೆ "ಜಾತವೇದಸ್ ಇದು ಯಾರು ? ಕಂಡುಹಿಡಿ" ಎಂದರು. ಅಗ್ನಿ ಅದರ ಬಳಿ ಸಾರಿದನು. ಅದು "ನೀನು ಯಾರು ? ಎಂದು ಕೇಳಿತು ಅಗ್ನಿ "ನಾನು ಅಗ್ನಿ" ಎಂದನು. "ನಿನ್ನಲ್ಲಿ ಯಾವ ಶಕ್ತಿ ಇದೆ?" "ನಾನು ಯಾವುದನ್ನು ಬೇಕಾದರೂ ಸುಡಬಲ್ಲೆನು." ಆ ಸತ್ವ ಅಗ್ನಿಯ ಎದುರಿಗೆ ಒಂದು ಹುಲ್ಲುಕಡ್ಡಿಯನ್ನು ಇಟ್ಟು ಇದನ್ನು ಸುಡು ಎಂದಿತು. ಅಗ್ನಿ ಅದರ ಮೇಲೆ ಬಿದ್ದನು. ಅದನ್ನು ಸುಡಲಾಗಲಿಲ್ಲ. ಸೋತು ಹಿಂತಿರುಗಿ ಅವನು ದೇವತೆಗಳಿಗೆ "ಆ ಮಹಾಸತ್ವ ಯಾರು ಎಂದು ಕಂಡುಹಿಡಿಯಲಾಗಲಿಲ್ಲ" ಎಂದನು. ವಾಯು ಅದರ ಬಳಿಗೆ ಹೋದನು "ನೀನು ಯಾರು ?" "ನಾನು ವಾಯು" "ನಿನ್ನ ಶಕ್ತಿ ಏನು ?" ನಾನು ಯಾವುದನ್ನು ಬೇಕಾದರೂ ಹಾರಿಸಬಲ್ಲೆ". ಮಹಾಸತ್ವ

ಅವನೆದುರಿಗೆ ಅದೇ ಹುಲ್ಲುಕಡ್ಡಿಯನ್ನು ಇಕ್ಕಿತು ಇದನ್ನು ಹಾರಿಸು ಎಂದಿತು ವಾಯು ಆ ಕಡ್ಡಿಯ ಮೇಲೆ ಎರಗಿದನು ಆದರೆ ಅದನ್ನು ಹಾರಿಸಲಾರದೇ ಹೋದನು ಅವನೂ ಹಿಂದಿರುಗಿ ಅದೇ ಮಾತನ್ನು ಹೇಳಿದನು.

ದೇವತೆಗಳು ಆಗ ಇಂದ್ರನಿಗೆ "ಒಡೆಯ, ಈ ಮಹಾಸತ್ವ ಯಾರು ? ನೀನೇ ಹೋಗಿ ಕಂಡುಹಿಡಿ" ಎಂದರು ಅವನು ಒಪ್ಪಿ ಅದರ ಬಳಿಗೆ ನಡೆದನು. ಅದು ಅವನ ಕಣ್ಣಿಗೆ ಕಾಣದೆ ಮರೆಯಾಯಿತು. ಅದು ಇದ್ದ ಸ್ಥಳದಲ್ಲಿ ಹಿಮವತ್ಕುಮಾರಿ ಅತ್ಯಂತ ಸುಂದರಿ ಮಹಿಳೆ ಕಂಡಳು ಅವನು ಆ ಸತ್ವ ಯಾರು ಎಂದು ಆಕೆಯನ್ನು ಕೇಳಿದನು ಆಕೆ "ಅದು ಬ್ರಹ್ಮ" ಎಂದು ಹೇಳಿದಳು "ಅವನಿಂದಲೇ ನೀವು ಜಯವನ್ನು ಪಡೆದಿರಿ" ಎಂದು ತಿಳಿಸಿದಳು

ಜ್ಞಾನದ ಅಭಿಮಾನಿ ದೇವತೆ ಉಮಾದೇವಿ ದೇವತೆಗಳಿಗೆ "ನಿಮಗೆ ಜಯ ದೊರೆತದ್ದು ಬ್ರಹ್ಮದ ಅನುಗ್ರಹದಿಂದ" ಎಂದು ಹೇಳಿದ ಮೇಲೆ ದೇವತೆಗಳು ತಮ್ಮ ಗೆಲುವು ತಮ್ಮ ಶಕ್ತಿಯಿಂದ ದೊರೆತದ್ದಲ್ಲ, ಎಂದು ತಿಳಿದರು. ಜಯ ಸಹಜವಾಗಿ ಆತ್ಮವಿಶ್ವಾಸವನ್ನು ಬೆಳೆಸುತ್ತದೆ ಇಂಥ ವೇಳೆಯಲ್ಲಿ ಅದು ಯಾರದೋ ಅನುಗ್ರಹದಿಂದ ದೊರೆಯಿತು ಎನ್ನುವುದನ್ನು ತಾವೇ ಕಾಣುವುದು ದೇವತೆಗಳಿಗೆ ಸಾಧ್ಯವಾಗಲಿಲ್ಲ ಎನ್ನುವ ಉಪನಿಷತ್ತಿನಲ್ಲಿಯ ಕಥೆ ಮನುಷ್ಯರ ಪಾಡು ಏನು ಎಂಬುದನ್ನು ಸ್ಪಷ್ಟವಾಗಿ ಹೇಳುತ್ತದ ಜಯ ದೊರೆತ ಹೊತ್ತಿನಲ್ಲಿ ನಾವು ಅದರ ಗುಂಗಿನಲ್ಲಿ ಸಿಕ್ಕಿ ನಾವೇ ಗೆದ್ದೆವು ಎಂದು ತಿಳಿದುಕೊಳ್ಳುವುದು ಸಹಜ, ಅನಿವಾರ್ಯ

ಇಂದ್ರ ಅಗ್ನಿ ವಾಯು ಇವರು ಬ್ರಹ್ಮದಿಂದ ಬೇರೆ ಎಂಬ ಭಾವದ ಈ ಕಥೆ ಕೇನೋಪನಿಷತ್ತಿನಲ್ಲಿ ಬರುತ್ತದೆ. ಉಪನಿಷತ್ತುಗಳು ವೇದದ ಶಿರಸ್ಸು ಎಂದರೆ ಕೊನೆಯ ಭಾಗ, ಇವು ದೈವವನ್ನು ಕುರಿತ ವಿಚಾರಗಳ ಪರಿಣತ ಸ್ಥಿತಿಯನ್ನು ಬಿಂಬಿಸುವ ಕೃತಿಗಳು. ಆರಂಭದಲ್ಲಿ ವೇದಗಳು ಇಂದ್ರ ಅಗ್ನಿ ವಾಯುಗಳನ್ನು ಇಂಥ ಇತರ ದೇವತೆಗಳನ್ನೂ ಬೇರೆಬೇರೆಯಾಗಿ ಒಂದೊಂದೂ ಪ್ರಮುಖ ದೈವ ಎಂಬಂತೆ ಹೊಗಳಿದವು ಹೀಗೆ ಹೊಗಳಿಕೆ ಪಡೆದ ಇತರ ದೈವಗಳು ವರುಣ ಆದಿತ್ಯರು ಪೂಷನ್ ಉಷಸ್ ರುದ್ರ ಸೋಮ ದ್ಯಾವಾ ಪೃಥಿವೀ ಇತ್ಯಾದಿ.

ದೇವತೆಗಳನ್ನು ಕುರಿತ ಈ ಭಾವಗಳು ಈ ಮಾತುಗಳನ್ನಾಡಿದವರ

ಮನಸ್ಸುಗಳಲ್ಲಿ ಸಹಜವಾಗಿ ಉದಿಸಿದ ಭಾವಗಳು. ಮತಗಳ ಆಚಾರಗಳಲ್ಲಿ ಈಗ ನಾವು ಕಾಣುವ ದುಷ್ಟ ಭಾಗಗಳು ಮತಗಳ ಬೆಳವಣಿಗೆಯಲ್ಲಿ ಅವಕ್ಕೆ ಸೇರಿ ಬಂದ ಭಾಗಗಳು. ಇವನ್ನು ಬೆಳೆಸಿದ ಜನ ವಂಚಕರು, ಮೋಸಗಾರರು, ಇವರು ಮತಗಳನ್ನು ಹುಟ್ಟುಹಾಕಿದವರಲ್ಲ, ಸತ್ಯವಂತರಾದ ಪೂರ್ವಿಕರು ರೂಪಿಸಿದ ಧರ್ಮವನ್ನು ದುರುಪಯೋಗ ಮಾಡಿದವರು. ಆ ಪೂರ್ವಿಕರು ರೂಪಿಸಿದ ಧರ್ಮ ಶುದ್ಧ ಚೇತನರಾದ ಜಾಣ ಜನರ ಸಹಜ ಪ್ರವೃತ್ತಿಗಳಿಂದ ಉದಿಸುವ ಧರ್ಮ. ಮನುಷ್ಯ ಸೃಷ್ಟಿಯನ್ನು ಮೊದಲು ನೋಡಿದಾಗ ಇದರ ವಿಸ್ತಾರ ವೈವಿಧ್ಯ ವೈಚಿತ್ರ್ಯ ಸೌಂದರ್ಯವನ್ನು ಕಂಡು ಆಶ್ಚರ್ಯಪಡುತ್ತಾನೆ. ಅದರ ವ್ಯಾಪಾರಗಳಲ್ಲಿ ಕಾಣುವ ಪ್ರಚಂಡ ಶಕ್ತಿ, ಸಂಯಮ, ಕ್ರಮ ಇವನ್ನು ಕುರಿತು ವಿಸ್ಮಯಪಡುತ್ತಾನೆ ಅದರ ಸೌಂದರ್ಯಕ್ಕೆ ಮನಸೋಲುತ್ತಾನೆ. ಅದರ ವೈಚಿತ್ರ್ಯದಿಂದ ಮರುಳಾಗುತ್ತಾನೆ ಈ ಭಾವಗಳನ್ನು ಅನುಭವಿಸಿದ ಋಷಿಗಳು ಇದನ್ನು ಪ್ರಕಟಿಸಿದ ಕೃತಿಗಳು ಋಗ್ವೇದದ ಸಂಹಿತೆಯ ಭಾಗ. ಈ ಭಾಗದಲ್ಲಿ ನಾವು ಈ ಎಲ್ಲ ದೇವತೆಗಳ ಸ್ತೋತ್ರರೂಪದ ಋಕ್ಕುಗಳನ್ನು ಕಾಣುತ್ತೇವೆ. ಋಕ್ಕುಗಳ ಸ್ವರೂಪ ತಿಳಿಯುವಂತೆ ಇಂದ್ರ ಅಗ್ನಿ ವಾಯುಗಳನ್ನು ಕುರಿತ ಕೆಲವು ಮಂತ್ರಗಳ ಅರ್ಥವನ್ನು ನೋಡಬಹುದು

ಇಂದ್ರನನ್ನು ಕುರಿತ ಸ್ತೋತ್ರದ ಎರಡು ಋಕ್ಕುಗಳ ಅರ್ಥ.

ಯಾವ ದೇವನು ಹುಟ್ಟಿನಿಂದ ಮನೋವಂತರ ಮೊದಲಿಗನಾಗಿ ಇತರ ದೇವತೆಗಳನ್ನು ತನ್ನ ಕಾರ್ಯಗಳ ಮೂಲಕ ಅಧೀನರಾಗಿ ಮಾಡಿದನು, ಯಾರ ಬಲದ ದೆಸೆಯಿಂದ ದ್ಯಾವಾಪೃಧಿವಿಗಳು ಭಯಪಟ್ಟು ನಡುಗಿದುವು, ಮಹಾ ಪರಾಕ್ರಮಶಾಲಿಯಾದ ಆತ, ಓ ಅಸುರರೇ, ಇಂದ್ರ.

ಅಸ್ಥಿರವಾದ ಪೃಧಿವಿಯನ್ನು ದೃಢಮಾಡಿ ನಿಲ್ಲಿಸಿದನು ಯಾರು, ಚಪಲ ವಾದ ಪರ್ವತಗಳನ್ನು ಯಾರು ಅವುಗಳ ಸ್ಥಾನದಲ್ಲಿ ಸ್ಥಾಪಿಸುವನು, ಯಾವಾತನು ಉರುತಮವಾದ ಅಂತರಿಕ್ಷವನ್ನು ವಿಸ್ತರಿಸಿ ಹರಡಿ ನಭವನ್ನು ಸ್ತಂಭಿಸಿದನು, ಅವನು, ಓ ಅಸುರರೇ, ಇಂದ್ರ.

ಅಗ್ನಿಯನ್ನು ಕುರಿತ ಒಂದು ಮಂತ್ರದ ಅರ್ಥ.

ಇವನ ಹೊಗರು ಅಜರ, ಇವನ ರಶ್ಮಿಗಳು ಸುಂದರ. ಸುಮುಖನಾದ

ಇವನ ದೀಪ್ತಿಗಳು ಬೇಗುತ್ತವೆ ಶಕ್ತವಾದ ಅಗ್ನಿಯ ಪ್ರವಾಹಗಳು ಅತಂದ್ರಿತವಾಗಿ ಅಜರವಾಗಿ ಇರುಳನ್ನು ನಡುಗಿಸುವಂತೆ ತೋರುತ್ತವೆ.

ಇದು (ವಾಯು) ಮರುತ್ತುಗಳನ್ನು ಕುರಿತ ಮೂರು ಮಂತ್ರಗಳ ಅರ್ಥ :

ಶಕ್ತಿವಂತರಾದ ನೀವು ರಥವನ್ನು ಸಿದ್ಧಪಡಿಸಿದರೆಂದರೆ ಸಾಕು, ಪರ್ವತಗಳು (ನಿಮಗೆ ದಾರಿ ಕೊಟ್ಟು) ತಮ್ಮ ಸ್ಥಾನವನ್ನು ಬಿಡುತ್ತವೆ

ನೀವು ಹೊರಟಿರೆಂದರೆ ಗಿರಿಗಳು ನದಿಗಳು ತಾವು ಉಳಿಯುವ ಆಶೆಯಿಂದ ನಿಮ್ಮ ಶಕ್ತಿಯ ಎದುರಲ್ಲಿ ತಗ್ಗುತ್ತವೆ

ಪೀಡಿತವಾಗಿ ಬಾಧೆಪಟ್ಟು ಗಿರಿಗಿರಿಗಳೇ ಕುಗ್ಗುತ್ತವೆ ಪರ್ವತಗಳು ಕೂಡಾ ಅಡಗುತ್ತವೆ

ತಾವು ಹೀಗೆ ಬೇರೆ ಬೇರೆ ದೇವರು ಎಂಬಂತೆ ಹಲವು ಹೆಸರುಗಳಿಂದ ಕರೆದು ಪೂಜಿಸಿದ ಸತ್ವ ಒಂದೇ ಎಂಬ ಭಾವ ಬೆಳೆದು ಒಂದು ಘಟ್ಟದಲ್ಲಿ ಋಷಿಗಳು, ಈ ಹೆಸರುಗಳೆಲ್ಲ ಒಂದೇ ಒಂದಾದ ದೈವದ ಹೆಸರುಗಳು, ಬಲ್ಲವರು ಆ ಒಂದೇ ದಿವ್ಯ ಸತ್ವವನ್ನು ಈ ಹೆಸರುಗಳಿಂದ ಕರೆಯುತ್ತಾರೆ, ಎಂದು ಸಾರಿದರು "ಏಕಂ ಸತ್ ವಿಪ್ರಾಃ ಬಹುಧಾ ವದಂತಿ"

ಈ ಒಂದು ಸತ್ಯವನ್ನು ಕುರಿತು ಕೆಲವು ಸೂಕ್ತಗಳು ರೂಪುಗೊಂಡವು. ಸೃಷ್ಟಿಯ ಆರಂಭ ಹೇಗೆ ಎನ್ನುವುದನ್ನು ಕುರಿತ ಸೂಕ್ತ ಈ ಋುಕ್ಕಿನಿಂದ ಮುಗಿಯುತ್ತದೆ.

ಇಯಂ ವಿಸೃಷ್ಟಿಃ ಯತ ಆ ಬಭೂವ
ಯದಿ ವಾ ದಧೇ ಯದಿ ವಾ ನ
ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್
ಸೋ ಅಂಗ ವೇದ ಯದಿ ವಾ ನ ವೇದ

ಈ ವಿವಿಧ ಸೃಷ್ಟಿ ಎಲ್ಲಿಂದ ಉಂಟಾಯಿತು ? ಇದು ಮಾಡಿ ಆಯಿತೆ ? ಇದನ್ನು ಮಾಡಲೇ ಇಲ್ಲವೇ ? ಸರ್ವೋನ್ನತ ವ್ಯೋಮದಲ್ಲಿ ಇದರ ಅಧ್ಯಕ್ಷನಾಗಿ ಇರುವವನು ಯಾರು ಅವನು ಇದನ್ನು ಕಂಡಿರಬಹುದು. ಇಲ್ಲ ಕಾಣದೆಯೂ ಇರಬಹುದು.

ಈ ಮಂತ್ರದಲ್ಲಿ ಕಾಣುವ ಸರ್ವೋನ್ನತ ವ್ಯೋಮ, ಅದರಲ್ಲಿರುವ ಅತ್ಯಧಿಕ ಆದ ಸತ್ವ ಒಂದೇ. ಆಮೇಲೆ, "ನಾವು ಹವಿಸ್ಸನ್ನು ಒಪ್ಪಿಸುವುದು ಎಂಥ ದೈವಕ್ಕೆ" ಎಂಬ ಅರ್ಥದ ಕಸ್ಮೈ ದೇವಾಯ ಹವಿಷಾ ವಿಧೇಮ ಸೂಕ್ತ ಬಂದಿತು

ಹಿರಣ್ಯ ಗರ್ಭಃ ಸಮವರ್ತತಾಗ್ರೇ
ಭೂತಸ್ಯ ಜಾತಃ ಪತಿರೇಕ ಆಸೀತ್
ಸ ದಾಧಾರ ಪೃಥಿವೀಂ ದ್ಯಾಮುತೇಮಾಂ
ಕಸ್ಮೈ ದೇವಾಯ ಹವಿಷಾ ವಿಧೇಮ

ಯ ಆತ್ಮದಾ ಬಲದಾ ಯಸ್ಯ ವಿಶ್ವ
ಉಪಾಸತೇ ಪ್ರಶಿಷಂ ಯಸ್ಯ ದೇವಾ
ಯಸ್ಯ ಛಾಯಾಮೃತಂ ಯಸ್ಯ ಮೃತ್ಯುಃ
ಕಸ್ಮೈ ದೇವಾಯ ಹವಿಷಾ ವಿಧೇಮ

ಯಃ ಪ್ರಾಣತೋ ನಿಮಿಷತೋ ಮಹಿತ್ವೈಕ
ಇದ್ರಾಜಾ ಜಗತೋ ಬಭೂವ
ಯ ಈಶೇ ಅಸ್ಯ ದ್ವಿಪದ ಶ್ಚತುಷ್ಪದಃ
ಕಸ್ಮೈ ದೇವಾಯ ಹವಿಷಾ ವಿಧೇಮ

ಯಶ್ಚಿದಾಪೋ ಮಹಿನಾ ಪರ್ಯಪಶ್ಯದ್ದಕ್ಷಂ
ಯಧಾನಾ ಜನಯಂತೀ ರ್ಯಜ್ಞಂ
ಯೋ ದೇವೇಷ್ವಧಿದೇವ ಏಕ ಆಸೀತ್
ಕಸ್ಮೈ ದೇವಾಯ ಹವಿಷಾ ವಿಧೇಮ

ಆರಂಭದಲ್ಲಿ ಹಿರಣ್ಯಗರ್ಭನು ಜನಿಸಿದನು ಜನಿಸಿದವನು ಎಲ್ಲರ ಏಕಪ್ರಭು ಆವನು ಪೃಥ್ವಿಯನ್ನೂ ಅಂತರಿಕ್ಷವನ್ನೂ ಧರಿಸಿದನು

ಅವನು ಆತ್ಮದಾತಾ, ಬಲದಾತಾ ಅವನ ಆಜ್ಞೆಯನ್ನು ವಿಶ್ವ ನಡೆಸುತ್ತದೆ, ದೇವತೆಗಳೂ ನಡೆಸುತ್ತಾರ ಅಮರತ್ವ ಅವನ ನೆರಳು, ಮೃತ್ಯು ಸಹ ಅವನ ನೆರಳೇ.

ಉಸಿರಾಡುವ ಎವೆ ಇಕ್ಕುವ ಜಗತ್ತಿಗೆ ಅವನು ತನ್ನ ಮಹಿಮೆಯ ಕಾರಣ ಏಕಪ್ರಭು ಆಗಿದ್ದಾನೆ. ಅವನು ದ್ವಿಪದ ಚತುಷ್ಪದ ಜೀವರಾಶಿಯನ್ನು ಆಳುತ್ತಾನೆ.

ಅವನು ತನ್ನ ಮಹಿಮಾವಂತ ದೃಷ್ಟಿಯಿಂದ ಜಲರಾಶಿಯನ್ನು ನೋಡಿದನು. ಶಕ್ತಿಯನ್ನು ನೀಡಿದನು; ಶಕ್ತಿಯನ್ನು ಏರ್ಪಡಿಸಿದನು ದೇವತೆಗಳ ಅಧಿದೇವತೆ ಆದನು.

ಹೀಗೆಂದ ಸೂಕ್ತಗಳು ಕೊನೆಯ ಘಟ್ಟದಲ್ಲಿ ಅಧಿದೇವತೆ ಒಂದನ್ನು ವರ್ಣಿಸಿದವು ಆ ವರ್ಣನೆ ಪುರುಷಸೂಕ್ತ ಎಂಬ ಪ್ರಸಿದ್ಧವಾದ ರಚನೆಯಲ್ಲಿ ಮತ್ತಷ್ಟು ತುಂಬಿಕೊಂಡಿತು

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷ ಸಹಸ್ರಪಾತ್
ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದಶಾಂಗುಲಂ
ಪುರುಷ ಏವೇದಗ್ಂ ಸರ್ವಂ ಯದ್ ಭೂತಂ ಯಚ್ಚಭವ್ಯಂ
ಉತಾಮೃತತ್ವಸ್ಯೇಶಾನಃ ಯದನ್ನೇ ನಾತಿರೋಹತಿ
ಏತಾವಾನಸ್ಯ ಮಹಿಮಾ ಅಧೋ ಜ್ಯಾಯಾಗ್ಂಶ್ಚ ಪೂರುಷಃ
ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂದಿವಿ
ತ್ರಿಪಾದೂರ್ಧ್ವ ಮುದೈತ್ಪುರುಷಃ ಪಾದೋಽಸ್ಯೇಹಾಭವಾತ್ಪುನಃ
ತತೋ ವಿಶ್ವಂವ್ಯಕ್ರಾಮತ್ ಸಾಶನಾನಶನ ಅಭಿ
ತಸ್ಮಾದ್ವಿರಾಡಜಾಯತ ವಿರಾಜೋ ಅಧಿ ಪೂರುಷಃ
ಯತ್ಪುರುಷೇಣ ಹವಿಷಾ ದೇವಾ ಯಜ್ಞ ಮತನ್ವತ

* * *

ತಸ್ಮಾದ್ಯಜ್ಞಾತ್ಸರ್ವಹುತಃ ಋಚಸ್ಸಾಮಾನಿಜಜ್ಞಿರೇ
ಛಂದಾಗ್ಂಸಿಜಜ್ಞಿರೇ ತಸ್ಮಾತ್ ಯಜುಸ್ತಸ್ಮಾದಜಾಯ ತ
ಮುಖಂ ಕಿಮಸ್ಯಕೌಬಾಹೂ ಕಾ ವೂರೂ ಪಾದಾವುಚ್ಯೇತೇ
ಬ್ರಾಹ್ಮಣೋಽಸ್ಯ ಮುಖಮಾಸೀತ್ ಬಾಹೂ ರಾಜನ್ಯಃಕೃತಃ
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಗ್ಂ ಶೂದ್ರೋ ಅಜಾಯತ

ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ
ನಾಮಾನಿಕೃತ್ವಾऽಭಿವದನ್ ಯದಾಸ್ತೇ

* * *

ತಮೇವಂ ವಿದ್ವಾನಮೃತ ಇಹಭವತಿ
ನಾನ್ಯಃ ಪಂಥಾ ಅಯನಾಯ ವಿದ್ಯತೇ

ಪರಮ ಪುರುಷನು ಸಾವಿರ ತಲೆ, ಸಾವಿರ ಕಣ್ಣು, ಸಾವಿರ ಪಾದ ಉಳ್ಳವನು ಅವನು ಭೂಮಿಯನ್ನು ಎಲ್ಲ ಕಡೆಯಿಂದ ಆವರಿಸಿ ಆಚೆ ಹತ್ತು ಅಂಗುಲ ವ್ಯಾಪಿಸಿದಾನೆ

ಇದು ಸರ್ವವೂ, ಹಿಂದೆ ಆದದ್ದು ಮುಂದೆ ಆಗುವುದು ಸೇರಿ, ಪರಮ ಪುರುಷನೇ ಇಷ್ಟೇ ಅಲ್ಲ ಅವನು ಅನ್ನದ ಮೇರೆಯನ್ನು ಮೀರಿದ ಅಮೃತತ್ವದ ಪ್ರಭು

ಅವನ ಮಹಿಮೆ ಇಂಥದು ಆದರ ಕಾರಣದಿಂದ ಅವನು ಪುರುಷರಲ್ಲಿ ಶ್ರೇಷ್ಠನು ಅವನಲ್ಲಿ ನಾಲ್ಕರಲ್ಲಿ ಒಂದು ಭಾಗ ಎಲ್ಲ ಸೃಷ್ಟಿ, ಮೂರು ಭಾಗ ಪರಮ ಪಥದಲ್ಲಿ ಅಮರವಾಗಿದೆ.

ಮೂರು ಭಾಗ ಊರ್ಧ್ವದಲ್ಲೇ ಇದ್ದು ಒಂದು ಭಾಗ ಇಲ್ಲಿ ಆವಿರ್ಭವಿಸಿತು. ಬಳಿಕ ಸಾಶನ ಅನಶನ ವಸ್ತುರೂಪವಾಗಿ ಎಲ್ಲ ಕಡೆಯನ್ನೂ ಆಕ್ರಮಿಸಿತು. ಆದರಿಂದ ವಿರಾಟ್ ಹುಟ್ಟಿತು ಪುರುಷನು ಅದಕ್ಕೆ ಹೆಚ್ಚಿನವನು. ಆ ಪುರುಷನನ್ನು ಹವಿಸ್ಸಾಗಿಮಾಡಿ ದೇವತೆಗಳು ಯಜ್ಞವನ್ನು ನಡೆಸಿದರು. ಸರ್ವಹುತ ಆದ ಆ ಯಜ್ಞದಿಂದಲೆ ಋಕ್ ಸಾಮಗಳು ಜನಿಸಿದವು. ಅದರಿಂದ ಛಂದಸ್ಸುಗಳು, ಆದರಿಂದ ಯಜುಸ್ಸು, ಜನಿಸಿದವು

ಪುರುಷನನ್ನು ಪಶುವಾಗಿ ಮಾಡಿದವೇಳೆ ಎಷ್ಟು ವಿಧವಾಗಿ ಕಲ್ಪಿಸಿದರು? ಅವನ ಮುಖ ಯಾವುದು ? ತೋಳು ಯಾವುವು, ತೊಡೆ ಯಾವುವು, ಪಾದ ಯಾವುವು, ಎಂದು ಹೇಳಿದೆ ?

ಬ್ರಾಹ್ಮಣ ಅವನ ಮುಖ, ರಾಜನ್ಯ ತೋಳುಗಳು, ಯಾವುದು ವೈಶ್ಯ ಅದು ಅವನ ತೊಡೆಗಳು. ಪಾದಗಳಿಂದ ಶೂದ್ರನು ಜನಿಸಿದನು.

ಸಮಸ್ತ ರೂಪಗಳನ್ನೂ ನೋಡಿ ಆ ದೃಢಚಿತ್ತನು ಹೆಸರುಗಳನ್ನು ಮಾಡಿ ನುಡಿದು ನಿಂತಿದಾನೆ.

ಅವನನ್ನು ಹೀಗೆಂದು ತಿಳಿದು ಮನುಷ್ಯನು ಇಹದಲ್ಲಿಯೇ ಅಮೃತನಾಗುತ್ತಾನೆ ಇದಲ್ಲದೆ ಮುಂದೆ ಹೋಗಲು ಬೇರೆಯ ದಾರಿ ಒಂದಿಲ್ಲ.

ಉಪನಿಷತ್ತುಗಳು ಪರಾತ್ಪರ ತತ್ತ್ವವನ್ನು ಕುರಿತ ಈ ಭಾವವನ್ನು ಮತ್ತಷ್ಟು ಮುಂದಕ್ಕೆ ಒಯ್ದುವು

ಬ್ರಹ್ಮ ಎನ್ನುವುದು ಏನು ?

ಯಾವುದು ಅದು, ಮನಸ್ಸನ್ನು ಹೊರಕ್ಕೆ ಅಟ್ಟಿ ಅಲ್ಲಿ ಕಾಣುವ ವಸ್ತುಗಳ ಮೇಲೆ ಬೀಳಿಸುವುದು, ಯಾವುದು ಪ್ರಾಣವನ್ನು ಅದರ ಕಾರ್ಯದಲ್ಲಿ ತೊಡಗಿಸುತ್ತದೆ, ಯಾವುದು ಕಲಿಸಿದ್ದರಿಂದ ಮಾನವರು ಈ ಮಾತುಗಳನ್ನು ಆಡುತ್ತಾರೆ, ಯಾವ ತೇಜೋರೂಪ ಕಿವಿಗಳನ್ನು ನಿರ್ದೇಶಿಸುತ್ತದೆ, ಕಿವಿಯ ಕಿವಿ, ಮನಸ್ಸಿನ ಮನಸ್ಸು, ಮಾತಿನಲ್ಲಿ ಮಾತು, ಪ್ರಾಣದಲ್ಲಿ ಪ್ರಾಣ, ಕಣ್ಣಿನ ಕಣ್ಣು, ಯಾವುದನ್ನು ಬೇರೆಮಾಡಿ ಜ್ಞಾಣರು ಈ ಲೋಕವನ್ನುಳಿದು ಅಮೃತರಾಗುತ್ತಾರೆ, ಅದು ಬ್ರಹ್ಮ

ಅದು ಇರುವಲ್ಲಿಗೆ ಕಣ್ಣು ಮಾತು ಮನಸ್ಸು ಹೋಗಲಾರವು ; ನಾವು ಅದನ್ನು ಬಲ್ಲವರಲ್ಲ ಅದನ್ನು ತಿಳಿಸುವುದು ಹೇಗೆ ಎನ್ನುವುದನ್ನು ಸಹ ನಾವು ಕಾಣೆವು.

ಬ್ರಹ್ಮ ಮಾತಿನಿಂದ ಉದಿಸಿದ್ದಲ್ಲ, ಮಾತು ಅದರಿಂದ ಉದಿಸುತ್ತದೆ ಅದು ಬ್ರಹ್ಮ ಇನ್ನು ಯಾವುದೂ ಅಲ್ಲ ಇದನ್ನು ತಿಳಿ ನೀನು ಈಗ ಉಪಾಸಿಸುತ್ತಿರುವುದು ಯಾವುದು ಇದು ಬ್ರಹ್ಮ ಅಲ್ಲ

ಮಿಂಚಿನಲ್ಲಿ ಮಿಂಚುವುದು ಬ್ರಹ್ಮ; ಕಣ್ಣಿನಲ್ಲಿ ಎವೆ ಇಕ್ಕುವುದು ಬ್ರಹ್ಮ. ಅದು ನಮ್ಮ ಅಂತರ್ಯದಲ್ಲಿ ಇದೆ. ಅದು ಇರುವುದರಿಂದ ನಮ್ಮ ಮನಸ್ಸು ಹೊರಗಿನ ಜಗತ್ತನ್ನು ಕಾಣುತ್ತದೆ. ತನ್ನಲ್ಲಿ ತಾನು ನೆನೆಯುತ್ತದೆ ಸಂಕಲ್ಪಿಸುತ್ತದೆ.

ಅದು ಕದಲುತ್ತದೆ. ಅಷ್ಟೇ ದಿಟವಾಗಿ ಕದಲದೆ ನಿಂತಿರುತ್ತದೆ. ಅದು ದೂರ ಅಷ್ಟೇ ದಿಟವಾಗಿ ಹತ್ತಿರ. ಅದು ಇದೆಲ್ಲದರ ಒಳಗಡೆ ಇದೆ. ಹಾಗೆಯೇ ಇದೆಲ್ಲದರ ಹೊರಗೂ ಇದೆ.

ಪ್ರಭು ವಿಶ್ವದ ಈಶ್ವರ ಅಕ್ಷರ, ವ್ಯಕ್ತ ಅವ್ಯಕ್ತ, ಎಲ್ಲವನ್ನೂ ನೋಡಿಕೊಳ್ಳುತ್ತಿದ್ದಾನೆ.

ಎಳ್ಳಿನ ಕಾಳಿನಲ್ಲಿ ಎಣ್ಣೆ, ಮೊಸರಿನಲ್ಲಿ ಬೆಣ್ಣೆ, ಚಿಲುಮೆಯಲ್ಲಿ ನೀರು, ಮರದಲ್ಲಿ ಕಿಚ್ಚು ಇರುವಂತೆ ಜೀವಾತ್ಮನಲ್ಲಿ ಪರಮಾತ್ಮ ಇದ್ದಾನೆ

ಅಗ್ನಿಯಲ್ಲಿ ನೀರಿನಲ್ಲಿ ಯಾವ ದೈವ ಇದೆ, ಯಾವುದು ವಿಶ್ವಭುವನವನ್ನು ಪ್ರವೇಶಿಸಿ ಇದೆ, ಗಿಡಗಳಲ್ಲಿ ಮರಗಳಲ್ಲಿ ಸಹ ಯಾವುದಿದೆ, ಆ ದೇವತೆಗೆ ಮತ್ತೆ ಮತ್ತೆ ನಮನ.

ಅವನ ರೂಪ ನಮ್ಮ ದೃಷ್ಟಿಯ ವಳಿತದಲ್ಲಿ ಇಲ್ಲ ಯಾರೂ ಅವನನ್ನು ಕಣ್ಣಿಂದ ನೋಡಲಾರರು. ಹೃದಯದಲ್ಲಿ ಇರುವ ಅವನನ್ನು ತೆರೆದ ಮನಸ್ಸಿನಿಂದ ಯಾರು ತಿಳಿಯುತ್ತಾರೆ ಅವರು ತಿಳಿವಿನಿಂದ ಅಮರರಾಗುತ್ತಾರೆ.

ಓ ಪರತತ್ತ್ವವೇ ನಮ್ಮನ್ನು ಇಲ್ಲಮೆಯಿಂದ ಇರುವಿಕೆಗೆ ನಡೆಸು, ಕತ್ತಲಿಂದ ಬೆಳಕಿಗೆ ನಡೆಸು, ಮೃತ್ಯುಸ್ಥಾನದಿಂದ ಅಮೃತತತ್ತ್ವಕ್ಕೆ ನಡೆಸು

## ಧರ್ಮದ ಬೆಳವಣಿಗೆ

ಇದೆಲ್ಲ ಆರಂಭದ ಸ್ಥಿತಿಯ ಯೋಚನೆ ಸೂಕ್ಷ್ಮಬುದ್ಧಿಯ ಜನ ಮಾತ್ರ ಗ್ರಹಿಸಬಹುದಾದ ವಿಚಾರ. ಬರಬರುತ್ತ ದೈವವನ್ನು ಬುದ್ಧಿಗೆ ಮಾತ್ರ ಅಲ್ಲ, ಕಣ್ಣಿಗೂ ಕಾಣುವಂತೆ ಮಾಡಿಕೊಳ್ಳಬೇಕು ಎಂದು ಅದನ್ನು ನಂಬಿದ ಜನರಿಗೆ ಅಪೇಕ್ಷೆ ಆಯಿತು ಇದಕ್ಕಾಗಿ ನಮ್ಮ ಪೂರ್ವಿಕರು ದೇವರಿಗೆ ಒಂದು ಮೂರ್ತಿಯನ್ನು ಕಲ್ಪಿಸಿದರು. "ನತೇ ರೂಪಂ, ನಚ ಆಕಾರೋ ನ ಆಯುಧಾನಿ ನಚಾಸ್ಪದಂ ತಥಾಪಿ ಪುರುಷಾಕಾರಃ ಭಕ್ತಾನಾಂ ತ್ವಂ ಪ್ರಕಾಶಸೇ" ಎಂಬುದು ಪಾಂಚರಾತ್ರಾಗಮದ ಒಂದು ಶ್ಲೋಕ "ಆಯುಧ ಆಕಾರ ರೂಪ ನೆಲೆ ಯಾವುದೂ ಇಲ್ಲದ ದೈವ ತನ್ನನ್ನು ನಂಬಿದ ಭಕ್ತರಿಗಾಗಿ ವ್ಯಕ್ತಿಯ ಆಕಾರವನ್ನು ಧರಿಸುತ್ತದೆ" ಈ ವೇಳೆಗೆ ರಾಮಾಯಣ ಭಾರತ ಕಾವ್ಯಗಳು ಸೃಷ್ಟಿಯಾಗಿದ್ದವು. ದೇವರು ಲೋಕರಕ್ಷಣಕ್ಕಾಗಿ ಭೂಮಿಯಲ್ಲಿ ಅವತರಿಸುತ್ತಾನೆ ಎಂಬ ಭಾವ ಮೂಡಿತ್ತು ರಾಮ ಕೃಷ್ಣ ದೇವರ ಅವತಾರಗಳಾದರು. ಬೇರೆ ಪ್ರಾಜ್ಞರು ಮತ್ತಷ್ಟು ಅವತಾರಗಳ ಕಲ್ಪನೆಗೆ ರೂಪು ಕೊಟ್ಟರು, ಅದನ್ನು ಕುರಿತು ಕಥೆಗಳನ್ನು ರಚಿಸಿದರು. ಹೀಗೆ ಮಾಡುವಲ್ಲಿ ದೈವ ಎಂಬ ಭಾವವನ್ನು ಮನುಷ್ಯ ಅಲ್ಲದೆ ಮನುಷ್ಯಸಮನಾದ ಇತರ ಜೀವ ಎಂಬಂತೆ

ಚಿತ್ರಿಸಿದರು. ಕಥೆಗಾಗಿ ದೈವ ಒಂದು ದೇಹವನ್ನು ತಳೆಯಬೇಕು. ಪುರಾಣ ಗಳು ವಿಷ್ಣು ಹತ್ತು ಅವತಾರಗಳನ್ನು ಎತ್ತಿದನು ಎಂದು ಹೇಳಿದವು. ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಬಲರಾಮ (ಕೃಷ್ಣ), ಬುದ್ಧ, ಕಲ್ಕಿ. ಕಲ್ಕಿ ಅವತಾರ ಇನ್ನುಮೇಲೆ ಬರತಕ್ಕದ್ದು. ಉಳಿದ ಒಂಬತ್ತು ಮುಗಿದಿವೆ

ಈ ದೇಹಗಳೆಲ್ಲ ಮನುಷ್ಯ ದೇಹಗಳಲ್ಲ ಎನ್ನುವುದು ಸ್ಪಷ್ಟ. ಮತ್ಸ್ಯ, ಕೂರ್ಮ, ವರಾಹ, ಮೀನು, ಆಮೆ, ಹಂದಿ ಆದರೂ ದೈವದ ಸ್ವರೂಪಗಳು ದೈವ ಮನುಷ್ಯಶರೀರದಲ್ಲಿದ್ದು ಲೋಕವನ್ನು ಉದ್ಧರಿಸಿದಂತೆ ಈ ಸ್ವರೂಪ ಗಳಿಂದಲೂ ಲೋಕವನ್ನು ಉದ್ಧರಿಸಿತು ಮನುಷ್ಯ ಅಲ್ಲದ ಈ ಪ್ರಾಣಿಗಳ ರೂಪದಲ್ಲಿ ದೈವ ಅವತಾರ ಮಾಡಿತು ಎಂಬ ಈ ಭಾವನೆ ಅತ್ಯಂತ ಉದಾತ್ತ ವಾದದ್ದು. ಹಿಂದೂ ಧರ್ಮದ ಒಂದು ವಿಶಿಷ್ಟ ಲಕ್ಷಣ ಇದು ಈ ಅವತಾರ ಗಳನ್ನು ಕುರಿತು ಜಯದೇವಕವಿ ಈ ಶ್ಲೋಕವನ್ನು ರಚಿಸಿದನು.

ವೇದಾನುದ್ಧರತೇ ಗಿರಿಂ ನಿವಹತೇ ಭೂಗೋಲಮುದ್ಬಿಭ್ರತೇ
ದೈತ್ಯಂ ದಾರಯತೇ ಬಲಿಂ ಛಲಯತೇ ಕ್ಷತ್ರಕ್ಷಯಂ ಕುರ್ವತೇ
ಪೌಲಸ್ತ್ಯಂ ಜಯತೇ ಹಲಂ ಕಲಯತೇ ಕಾರುಣ್ಯಮಾತನ್ವತೇ
ಮ್ಲೇಚ್ಛಾನ್ಮೂರ್ಛಯತೇ ದಶಾಕೃತಿಕೃತೇ ಕೃಷ್ಣಾಯ ತಸ್ಮೈ ನಮಃ

ಮತ್ಸ್ಯನಾಗಿ ಅವತಾರಮಾಡಿ ಕೃಷ್ಣ ವೇದಗಳನ್ನು ಉಳಿಸಿದನು. ಆಮೆಯಾಗಿ ಗಿರಿ ನೀರಿನಲ್ಲಿ ಮುಳುಗಿ ಹೋಗದಂತೆ ಅದನ್ನು ಹೊತ್ತನು. ಹಿರಣ್ಯಾಕ್ಷನನ್ನು ಕೊಂದು ಭೂದೇವಿಯನ್ನು ಎತ್ತಿ ರಕ್ಷಿಸಿದನು ನರಸಿಂಹ ಅವತಾರವಾಗಿ ಹಿರಣ್ಯಕಶ್ಯಪನನ್ನು ಕೊಂದನು ವಾಮನನಂತೆ ಹೋಗಿ ಬಲಿಯನ್ನು ವಂಚಿಸಿದನು. ಜಮದಗ್ನಿ ಪುತ್ರ ರಾಮನಾಗಿ ಕ್ಷತ್ರಿಯ ವಂಶ ಗಳನ್ನು ನಾಶಮಾಡಿದನು. ದಶರಥ ಪುತ್ರ ರಾಮನಾಗಿ ರಾವಣನನ್ನು ಕೊಂದನು. ಬಲರಾಮನಾಗಿ ನೇಗಿಲನ್ನು ಹೊತ್ತನು. ಬುದ್ಧನಾಗಿ ಕರುಣೆ ಯನ್ನು ಸ್ಥಾಪಿಸಿದನು ಕಲ್ಕಿಯಾಗಿ ಯುಗದ ಅಂತರದಲ್ಲಿ ಮ್ಲೇಚ್ಛರನ್ನು ಮೂರ್ಛೆಗೊಳಿಸುತ್ತಾನೆ. ಆ ಕೃಷ್ಣನಿಗೆ ನಮಸ್ಕಾರ.

ಮೊದಲ ಮೂರು ಅವತಾರಗಳ ಹಿಂದಿನ ಭಾವ ಏನು, ಇದು ಈಗ ಸ್ಪಷ್ಟ ಅಲ್ಲ. ನರಸಿಂಹಾವತಾರದ ಕಥೆಯನ್ನು ಎಲ್ಲರೂ ಬಲ್ಲೆವು. ಹಿರಣ್ಯಕಶಿಪು

ತಾನೇ ಲೋಕನಾಯಕ ಎಂದು ತಿಳಿದು, ಮಗ ಪ್ರಹ್ಲಾದ ಹರಿ ಲೋಕರಕ್ಷಕ ಸತ್ವ ಎಂದ ಮಾತನ್ನು ಒಪ್ಪದೆ, ಅವನನ್ನು ಹಿಂಸಿಸಿದನು. ಹಾಗೂ ಮಗ ತನ್ನ ಹಠವನ್ನು ಬಿಡದೆ ಇರಲು, ನಿನ್ನ ಹರಿ ಎಲ್ಲಿದ್ದಾನೆ, ಎಂದು ಕೇಳಿದನು. ಮಗ ಅವನು ಎಲ್ಲೆಲ್ಲೂ ಇದ್ದಾನೆ ಎಂದು ಹೇಳಲು, ಎದುರಿಗಿದ್ದ ಒಂದು ಕಂಬವನ್ನು ತೋರಿಸಿ ಇದರಲ್ಲಿದ್ದಾನೆಯೇ ಎಂದು ಪ್ರಶ್ನಿಸಿದನು ಇದ್ದಾನೆ ಎಂಬ ಉತ್ತರವನ್ನು ಕೇಳಿ, ಕಂಬವನ್ನು ಒಡೆದನು. ಅದರಿಂದ ಅರ್ಧ ಮನುಷ್ಯ, ಅರ್ಧ ಸಿಂಹ ಆದ ಒಂದು ದೇಹ ಹೊರಕ್ಕೆ ಬಂದಿತು ತಂದೆಯನ್ನು ಕೊಂದು ಮಗನನ್ನು ಉಳಿಸಿತು.

ವಾಮನನ ಕಥೆ ಇದು ಹಿರಣ್ಯಕಶಿಪುವಿನ ಮಗ ಭಕ್ತ ಪ್ರಹ್ಲಾದನ ಮೊಮ್ಮಗ ಬಲಿ ದೇವತೆಗಳಿಗೆ ಕಂಟಕನಾಗಿ ನಿಂತಾಗ ವಿಷ್ಣು ಸಣ್ಣ ಆಕಾರದ ಒಬ್ಬ ವಟುವಾಗಿ ಬಂದು ತನ್ನ ಮೂರು ಹೆಜ್ಜೆಗೆ ಸ್ಥಳ ಬೇಕು ಎಂದು ಬೇಡಿದನು. ಬಲಿ ಅದನ್ನು ತೆಗೆದುಕೋ ಎಂದು ಹೇಳಿದ ಮೇಲೆ ಬಾಲಕ ಸಣ್ಣ ಆಕಾರವನ್ನು ಅಂತರಿಕ್ಷ ಮುಟ್ಟುವಂತೆ ದೊಡ್ಡದಾಗಿ ಬೆಳೆಸಿ, ಭೂಮಿಯನ್ನೆಲ್ಲ ಅಳೆದು ಒಂದೆ ಹೆಜ್ಜೆ ಆಯಿತು ಎಂದು, ಆಕಾಶವನ್ನೆಲ್ಲ ಅಳೆದು ಇನ್ನೊಂದು ಹೆಜ್ಜೆ ಆಯಿತು ಎಂದು, ಮೂರನೆಯ ಹೆಜ್ಜೆಗೆ ಸ್ಥಳ ಕೊಡು ಎಂದು ಕೇಳಿದನು ಬಲಿ, "ಅದನ್ನು ನನ್ನ ತಲೆಯಮೇಲಿಡು" ಎಂದು ಹೇಳಲು, ಅವನ ತಲೆಯನ್ನು ಮೆಟ್ಟಿ, ಅವನನ್ನು ಪಾತಾಳಕ್ಕೆ ಅವುಕಿ, ದೇವತೆಗಳನ್ನು ರಕ್ಷಿಸಿದನು.

ಈ ಎರಡು ಕಥೆ ವಾಸ್ತವವಾದ ವ್ಯವಹಾರಗಳ ಕಥೆ ಅಲ್ಲ ಎನ್ನುವುದು ಸ್ಪಷ್ಟ. ಇವಕ್ಕೆ ಸಂಕೇತಾರ್ಥ ಇರಬೇಕು ಕ್ಷತ್ರಿಯರನ್ನು ಕೊಂದ ಪರಶುರಾಮನ ಕಥೆ ಸಹಜ ಆಗಿರುವುದು ಸಾಧ್ಯ. ಶ್ರೀರಾಮ ರಾವಣನನ್ನು ಕೊಂದ ಕಥೆಯೂ ಸಹಜ ಬಲರಾಮ, ಕೃಷ್ಣರ ಕಥೆ ಮೂಲದಲ್ಲಿ ಸಹಜ. ಇರುತ್ತ, ಈ ಎರಡು ಕಥೆಗಳ ಮೂರ್ತಿಗಳನ್ನು ಪ್ರಭಾವಶಾಲಿಯಾಗಿ ಮಾಡಲು ಪೌರಾಣಿಕರು ಅದ್ಭುತಗಳನ್ನು ಆರೋಪಿಸಿ ಶ್ರೀರಾಮ, ಶ್ರೀಕೃಷ್ಣ ಇವರನ್ನು ಮಹಿಮಾವಂತರಾಗಿ ಮಾರ್ಪಡಿಸಿದ್ದು ಕಾಣುತ್ತದೆ. ಶ್ಲೋಕದ ಬೌದ್ಧಾವತಾರದ ಕಲ್ಪನೆ ಜಿನಮತವನ್ನು ಕುರಿತದ್ದು ಎಂದು ಕಾಣುತ್ತದೆ. ಕಲ್ಕಿ ಅವತಾರ ಪೌರಾಣಿಕರ ಅಪೇಕ್ಷೆಯ ಅವತಾರ.

ವಿಷ್ಣುವಿನ ಈ ಅವತಾರಗಳಲ್ಲದೆ, ಪುರಾಣಗಳು ಇತರ ದೇವತೆಗಳನ್ನು ಕುರಿತು ಕಥೆಗಳನ್ನು ನಿರ್ಮಿಸಿದವು. ಪುರಾಣಗಳೇ ಹದಿನೆಂಟು ಇವೆ ಜೊತೆಗೆ ಹದಿನೆಂಟು ಉಪಪುರಾಣಗಳು ಉಂಟು. ಇವುಗಳಲ್ಲಿ ಈಗಲೂ ಪ್ರಚಾರದಲ್ಲಿರುವುವು ಎರಡು, ವಿಷ್ಣುಪುರಾಣ, ಭಾಗವತ. ವಿಷ್ಣುಪುರಾಣ ಭಾರತದ ಕೃಷ್ಣನನ್ನು ಅವತಾರ ಪುರುಷನನ್ನಾಗಿ ಭಾವಿಸಿ, ಅವನ ಮಹಿಮೆಯನ್ನು ಪ್ರಕಟಿಸುವ ಅನೇಕ ಅದ್ಭುತಗಳನ್ನು ವರ್ಣಿಸುತ್ತದೆ ಭಾಗವತ ಪುರಾಣ ಈ ಮನೋಧರ್ಮವನ್ನು ಮುಂದರಿಸಿ ಕೃಷ್ಣನನ್ನು ಮತ್ತಷ್ಟು ಹೆಚ್ಚಿನ ದೈವೀ ಪುರುಷ ಎಂದು ಚಿತ್ರಿಸುತ್ತದೆ

ಪುರಾಣಗಳ ಕಾಲದಲ್ಲಿ ದೈವವನ್ನು ಕುರಿತ ಭಕ್ತಿ ಮನುಷ್ಯನ ಉದ್ಧಾರಕ್ಕೆ ಮುಖ್ಯ ಮಾರ್ಗ ಎಂಬ ನಂಬಿಕೆ ಬೆಳೆದು ಶ್ರೀಕೃಷ್ಣ ಮುಖ್ಯ ಮೂರ್ತಿಯಾದ ಹಲವು ಪಂಥಗಳು ರೂಪುಗೊಂಡವು. ಈ ಪಂಥಗಳಲ್ಲಿ ಕೃಷ್ಣನ ಮೂರ್ತಿ ಮತ್ತಷ್ಟು ಮಾರ್ಪಟ್ಟಿದೆ ಭಕ್ತಿಪಂಥ ಮತ್ತಷ್ಟು ಬೆಳೆದಂತೆ ಈ ಮಾರ್ಪಟ್ಟ ಮೂರ್ತಿ ಮತ್ತಷ್ಟು ಮಾರ್ಪಟ್ಟಿತು

ಪ್ರಾಯಶಃ ಈ ಘಟ್ಟದಲ್ಲಿ ಧರ್ಮದ ಪ್ರಮುಖ ಪ್ರವರ್ತಕರೊಬ್ಬರು ದೈವವನ್ನು ಕುರಿತ ಈ ಹಲವು ಭಾವಗಳನ್ನು ಸಮನ್ವಯಗೊಳಿಸಿ ಗೀತೆಯಲ್ಲಿ ಅದರ ನಿಷ್ಕೃಷ್ಟ ರೂಪವನ್ನು ಸೇರಿಸಿದರು ಆ ರೂಪದ ಮುಖ್ಯ ಕಲ್ಪನೆ ಈ ಶ್ಲೋಕಗಳಲ್ಲಿ ಕಾಣುತ್ತದೆ.

ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂವಿಂದತಿ ಮಾನವಃ
ಅಹಮಾತ್ಮಾಗುಡಾಕೇಶ ಸರ್ವಭೂತಾಶಯಸ್ಥಿತಃ
ಅಹಮಾದಿಶ್ಚಮಧ್ಯಂ ಚ ಭೂತಾನಾಮಂತ ಏವಚ
ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ
ಮತ್ತಃ ಪರತರಃ ನಾನ್ಯತ್ಕಿಂಚಿದಸ್ತಿ ಧನಂಜಯ
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ
ಯೇ ಯಥಾ ಮಾಂ ಪ್ರಪದ್ಯಂತೇ ತಾನ್‌ಸ್ತಥೈವ ಭಜಾಮ್ಯಹಂ

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ
ಅಹಂತ್ವಾ ಸರ್ವಪಾಪೇಭ್ಯಃ ಮೋಕ್ಷಯಿಷ್ಯಾಮಿ ಮಾಶುಚಃ

ಜೀವಜಾತದ ಮೂಲ ಯಾವುದು, ಯಾವುದು ಈ ಸೃಷ್ಟಿಯನ್ನು ವ್ಯಾಪಿಸಿದೆ, ತನ್ನ ಕರ್ಮವನ್ನು ಮಾಡಿ ಅದನ್ನು ಪೂಜಿಸುವ ಮನುಷ್ಯ ಸಿದ್ಧಿಯನ್ನು ಪಡೆಯುತ್ತಾನೆ.

ಅರ್ಜುನ, ಸರ್ವಭೂತಗಳ ಹೃದಯದಲ್ಲಿರುವ ಆತ್ಮ ನಾನು. ಎಲ್ಲ ಜೀವಗಳ ಮೊದಲು, ಮಧ್ಯೆ, ಕೊನೆ, ಇದೆಲ್ಲ ನಾನೇ.

ಈಶ್ವರ ಸರ್ವಭೂತಗಳ ಹೃದ್ದೇಶದಲ್ಲಿ ನೆಲೆಸಿದ್ದಾನೆ, ಅರ್ಜುನ. ಯಂತ್ರ ಗಳಲ್ಲಿರುವ ಅವನ್ನೆಲ್ಲ ಅವನು ತನ್ನ ಮಾಯೆಯ ಮೂಲಕ ಸುತ್ತಿಸುತ್ತಾನೆ.

ನಾನಲ್ಲದೆ ಬೇರೆ ಒಂದು ನನಗಿಂತ ಹಿರಿಯದೆನ್ನುವುದು ಯಾವುದೂ ಇಲ್ಲ. ಒಂದು ದಾರದಲ್ಲಿ ಪೋಣಿಸಿರುವ ಮಣಿಗಳಂತೆ ಸೃಷ್ಟಿ ಎಲ್ಲ ನನ್ನಲ್ಲಿ ಪೋಣಿಸಿ ನಿಂತಿದೆ

ಯಾರು ನನ್ನನ್ನು ಯಾವ ರೀತಿ ಸಮೀಪಿಸುತ್ತಾರೆ ಅದೇ ರೀತಿಯಿಂದ ನಾನು ಅವರನ್ನು ನೋಡಿಕೊಳ್ಳುತ್ತೇನೆ

ಬೇರೆ ಎಲ್ಲ ಕ್ರಮವನ್ನೂ ಬಿಟ್ಟು ನನ್ನನ್ನು ಮರೆಹೊಗು. ನಾನು ನಿನ್ನನ್ನು ಎಲ್ಲ ಕಷ್ಟದಿಂದಲೂ ಪಾರುಮಾಡುತ್ತೇನೆ ಚಿಂತೆ ಬೇಡ.

ಪುರಾಣಗಳ ಬೆಳವಣಿಗೆಯ ಒಂದು ಘಟ್ಟದಲ್ಲಿ ಸನಾತನ ಧರ್ಮದ ದೇವ ಸಮುದಾಯಕ್ಕೆ ನಮ್ಮ ಜನರೊಂದಿಗೆ ಸಂಪರ್ಕ ಬೆಳಸಿದ ಇತರ ದೈವಗಳೂ ಬಂದು ಸೇರಿದವು. ಇಂಥ ಒಂದು ದೈವ ಗಣಪತಿ.

ದೈವದ ಮಹಿಮೆಯನ್ನು ಪ್ರಕಟಿಸುವ ಮುಖ್ಯ ಉದ್ದೇಶದಿಂದ ಪ್ರವೃತ್ತ ವಾದ ಕಾರಣ, ಪುರಾಣಗಳು, ತಾವು ಹೇಳುತ್ತಿರುವ ಕಥೆ ನಡೆದದ್ದಾಗಿರ ಬಹುದು ಎಂದು ಕಾಣಲಿ ಎಂಬ ನಿರ್ಬಂಧವನ್ನು ಬಿಟ್ಟವು. ದೈವದ ಮಹಿಮೆಗೆ ಮಿತಿ ಏನು ? ದೈವ ಸರ್ವಶಕ್ತ. ಅದು ಏನನ್ನು ಬೇಕಾದರೂ ಮಾಡಬಲ್ಲದು. ಈ ಭಾವನೆಯಿಂದ ರಚಿತವಾದ ಕಥಾನಕಗಳು ರಾಮಾಯಣ ಭಾರತಗಳಲ್ಲಿ ವಿಪುಲವಾಗಿ ಸೇರಿಕೊಂಡವು. ಇತರ ಪುರಾಣಗಳಲ್ಲಿ ಆ ಕ್ಷಣದಲ್ಲಿ ಕಥೆಯ ಮುಖ್ಯ ಮೂರ್ತಿಯಾಗಿದ್ದ ದೈವ ಇತರ ದೈವಗಳಿಗಿಂತ ಹೆಚ್ಚು ಎನ್ನುವುದನ್ನು

ಸ್ಥಾಪಿಸುವುದಕ್ಕಾಗಿ, ಸಾಧ್ಯ. ಸಂಭಾವ್ಯ, ಸಾಧು, ಎನ್ನಲೂ ಬಾರದ ಸಂಗತಿಗಳನ್ನು ಧಾರಾಳವಾಗಿ ಹೇಳಿಬಿಟ್ಟವು. ಈ ಕಥೆಗಳನ್ನು ಹೇಳುವ ಸಂಭ್ರಮದಲ್ಲಿ ವೇದಗಳ ಪರಿಣತ ಅವಸ್ಥೆಯಲ್ಲಿ 'ಏಕಂ ಸತ್' ಎಂದು ಹೇಳಿಸಿಕೊಂಡು ಉಪನಿಷತ್ತುಗಳಲ್ಲಿ ಏಕಮಾತ್ರವಾದ ಬ್ರಹ್ಮ ಎಂದು ವರ್ಣನೆ ಪಡೆದ ಪರಾತ್ಪರ ತತ್ವ ಪರಸ್ಪರ ಕದನಮಾಡುವ ನೂರು ದೇವರಾಗಿ ಹೋಯಿತು

ಹೀಗೆ ಗೊಂದಲದಲ್ಲಿ ಇಳಿದ ದೈವವನ್ನು ಕುರಿತ ಕಲ್ಪನೆ ಈ ವೇಳೆಗೆ ಸನಾತನ ಧರ್ಮದ ಅನುಯಾಯಿಗಳ ಸಂಪರ್ಕಕ್ಕೆ ಬಂದಿದ್ದ ಇತರ ಜನ ಸಮುದಾಯಗಳ ಪೂಜೆಗಳ ಮೂರ್ತಿಗಳನ್ನು ಅಂಗೀಕರಿಸಿ ಮತ್ತಷ್ಟು ವಿಸ್ತಾರವಾಯಿತು.

ಹೀಗೆ ಸನಾತನ ಧರ್ಮದ ದೈವಸಮುದಾಯದಲ್ಲಿ ಸೇರಿದ ಕೆಲವು ದೇವರು ಬಸವಣ್ಣನವರು ಹೆಸರಿಸಿದ ಮಾರಯ್ಯ, ಬೀರಯ್ಯ, ಅಂತರ, ಬೆಂತರ, ಕಂತರ, ಮಾಲಯ್ಯ, ಕೇತಯ್ಯ ಕನಕದಾಸರು ಹೆಸರಿಸಿದ ಎಕ್ಕನಾಟಿ, ಎಲ್ಲಮ್ಮ, ಮಾರಿ, ದುರ್ಗಿ, ಚೌಡಿ

ಹೀಗೆ ಪೂಜೆ ಪಡೆಯುವ ಸಮುದಾಯಕ್ಕೆ ಈಚೆಗೆ ಶನೇಶ್ವರ ಸೇರಿದ್ದಾನೆ. ಬೆಂಗಳೂರು ನಗರದಲ್ಲಿ ಜನ, ಒಬ್ಬ ಭಕ್ತರು ಶನೇಶ್ವರ ದೇವರು ಎಂದು ಒಬ್ಬ ಮೂರ್ತಿಯನ್ನು ಸಣ್ಣ ರಥ ಒಂದರಲ್ಲಿ ಕುಳ್ಳಿರಿಸಿ, ರಥವನ್ನು ಬೀದಿ ಬೀದಿಯಲ್ಲಿ ಎಳೆದುಕೊಂಡು ಹೋಗುತ್ತಿರುವುದನ್ನು ಕಂಡಿದ್ದಾರ

ಮಹಾಭಾರತದ ಈಗಿನ ರೂಪದಲ್ಲಿ ಶಿವ ವಿಷ್ಣು ಹಲವು ಕಡೆ ಪರಸ್ಪರ ಸ್ಪರ್ಧಿಸುವ ಎರಡು ದೇವರಾಗಿ ಕಾಣುತ್ತಾರೆ ಇರುತ್ತ ಅದರ ಒಂದು ಶ್ಲೋಕ, ರುದ್ರೋನಾರಾಯಣಶ್ಚೈವ ತತ್ವಮೇಕಂ ದ್ವಿಧಾಕೃತಂ ಎನ್ನುತ್ತದೆ ಒಂದು ಸಂದರ್ಭದಲ್ಲಿ ಈಶ್ವರ, ನನ್ನನ್ನು ವಿಷ್ಣುವನ್ನು ಬೇರೆಯೆಂದು ಎಣಿಸುವವರು ನನಗೆ ಇಷ್ಟರಲ್ಲ, ಎನ್ನುತ್ತಾನೆ. ಅಹುದಾದರೂ ಶಿವ ವಿಷ್ಣು ಬೇರೆ ಎನ್ನುವ ಭಾವ ಕಡಿಮೆಯಾಗಲಿಲ್ಲ.

ವೇದಗಳ ಕಾಲದಿಂದ ಬೆಳೆದು ಬಂದ ದೈವದ ಕಲ್ಪನೆಗಳಲ್ಲಿ ಹೀಗೆ ಶಿವ, ವಿಷ್ಣು ಮುಖ್ಯವಾಗಿ ನಿಂತರು. ರಾಮ, ಕೃಷ್ಣ, ವಿಷ್ಣುವಿನ ಅವತಾರಗಳೆಂದು ಪೂಜೆಯ ವಸ್ತುಗಳಾದರು. ಯಾವುದೋ ಕಾರಣದಿಂದ ಗಣಪತಿ ಇವರ ಜೊತೆಗೆ ನಿಂತನು, ಶಿವನ ಮಗ ಆದನು. ಶಿವ ವಿಷ್ಣುವಿನ ತಂಗಿಯನ್ನು

ಮದುವೆಯಾದನು. ಹೀಗೆ ದೈವಗಳಲ್ಲಿ ಸಂಬಂಧಗಳು ಮೂಡಿದವು. ಸಂಪರ್ಕಿಸಿ ಬಂದ ಇತರ ಸಮುದಾಯಗಳ ದೇವತೆಗಳೂ ಒಂದಲ್ಲ ಒಂದು ಭಾವದಿಂದ ಧರ್ಮದ ದೈವಗಳ ಸಮುದಾಯದಲ್ಲಿ ಸ್ಥಾನವನ್ನು ಪಡೆದರು. ಗ್ರಾಮದೇವತೆ ಮಾರಿ, ಕಾಳಿ ದೇವತೆಯು ಒಂದು ರೂಪ ಕಾಳಿ ದುರ್ಗಾದೇವಿಯು ಒಂದು ರೂಪ. ದುರ್ಗಾ ಶಿವನ ಪತ್ನಿ, ಕೃಷ್ಣನ ತಂಗಿ.

ಹೀಗಾಗಿ ಸನಾತನ ಧರ್ಮದ ದೈವ ನೂರು ರೂಪಗಳನ್ನು ಪಡೆಯಿತು. ಒಂದೊಂದು ರೂಪವೂ ವಾಡಿಕೆಯಿಂದ ಬಂದಿದ್ದ ರೀತಿಯಲ್ಲಿ ಪೂಜೆಯನ್ನು ಪಡೆಯುತ್ತ ಸನಾತನ ಧರ್ಮದ ವಿಸ್ತಾರವಾದ ಭೂಮಿಕೆಯಲ್ಲಿ ಒಂದು ಸ್ಥಾನವನ್ನು ಪಡೆಯಿತು

ಹೀಗೆ ಬಹುಕಡೆಯಿಂದ ಬಂದ ದೇವರನ್ನು ಕುರಿತ ಭಾವನೆಗಳ ಸಮರ್ಥನಕ್ಕೇ ಇರಬೇಕು, ಭಗವದ್ಗೀತೆ "ಯೇ ಯಥಾ ಮಾಂ ಪ್ರಪದ್ಯಂತೇ ತಾನ್ ತಥೈವ ಭಜಾಮ್ಯಹಂ" ಎಂಬ ವಾಕ್ಯವನ್ನು ಹೇಳಿತು. ಎಂದ ಮೇಲೆ ದೈವವನ್ನು ಕುರಿತ ಭಾವ ಯಾವುದು, ಅದು ಮುಖ್ಯವಲ್ಲ. ಹಾಗೆ ನಂಬಿದವರು ತಮ್ಮ ಆ ಭಾವದಿಂದ ದೇವರಿಗೆ ಸೇವೆ ಸಲ್ಲಿಸುತ್ತಾರೆ. ಆ ಭಾವ ಉನ್ನತವಾದರೂ ಸರಿ, ಅಲ್ಲವಾದರೂ ಸರಿ ದೈವ ಅದನ್ನು ಅಂಗೀಕರಿಸುತ್ತದೆ. ಸೇವೆ ಸಲ್ಲಿಸಿದ ಭಕ್ತನಿಗೆ ಫಲವನ್ನು ನೀಡುತ್ತದೆ.

೪

## ಪುರಾಣಗಳ ಕ್ರಮ

ದೈವದ ಮಹಿಮೆಯನ್ನು ಪ್ರಕಟಿಸುವ ಉದ್ದೇಶದಿಂದ ಪುರಾಣಗಳು, ಅಸಾಧ್ಯ ಅಸಂಭಾವ್ಯ ಅಸಾಧು ಆದ ಕತೆಗಳನ್ನು ಕಟ್ಟಿದುವು ಎಂದು ಹೇಳಿದ್ದಾಗಿದೆ. ಪುರಾಣಕಾರರು ತಾವು ಹೊಸದಾಗಿ ನಿರ್ಮಿಸಿದ ಕತೆಗಳಲ್ಲಿ ಇಂಥ ಸಂಗತಿಗಳನ್ನು ಸೇರಿಸಿದ್ದಲ್ಲದೆ ಆ ಮುನ್ನ ಪ್ರಚಾರಕ್ಕೆ ಬಂದು ಜನಪ್ರಿಯ ಆಗಿದ್ದ ರಾಮಾಯಣ ಭಾರತಗಳಲ್ಲೂ ಅನೇಕ ಸಂಗತಿಗಳನ್ನು ಸೇರಿಸಿದರು. ವಾಲ್ಮೀಕಿಯ ಕಾವ್ಯ ಎಂದು ಈಗ ಪ್ರಚಾರದಲ್ಲಿರುವ ರಾಮಾಯಣಗ್ರಂಥದಲ್ಲಿ

ವಾಲ್ಮೀಕಿಯ ಕೃತಿಯಲ್ಲದ ಭಾಗ ಹಲವು ಇವೆ ಎಂದು ನಾನು ಸುಮಾರು ಐವತ್ತು ವರ್ಷದ ಹಿಂದೆ ನಮ್ಮ ಜನರಿಗೆ ವಿಜ್ಞಾಪಿಸಿದೆನು ಈಚೆಗೆ ಬರೋಡಾ ನಗರದ ಒಂದು ಅನ್ವೇಷಕ ಸಂಸ್ಥೆ ರಾಮಾಯಣದ ಪರಿಷ್ಕೃತ ಪಾಠ ಒಂದನ್ನು ಪ್ರಕಟಿಸಿದೆ. ಹಲವು ಪ್ರಾಚೀನ ಹಸ್ತಪ್ರತಿಗಳ ಪರಿಶೀಲನದಿಂದ ಮೂಲಕೃತಿ ಯಾವುದು ಎನ್ನುವುದು ಈ ಪರಿಷ್ಕರಣದಲ್ಲಿ ತಕ್ಕಷ್ಟು ನಿಶ್ಚಯವಾಗಿ ಕಾಣುತ್ತದೆ ನಾನು ಹಿಂದೆ ಕಾವ್ಯದ ಕೆಲವು ಭಾಗಗಳು ವಾಲ್ಮೀಕಿಯ ಕೃತಿ ಅಲ್ಲ ಎಂದ ನನ್ನ ಊಹೆ ಸರಿ ಎಂದು ಈ ಪರಿಷ್ಕರಣದ ಪರಿಶೀಲನದಲ್ಲಿ ಸ್ಥಿರಪಟ್ಟಿದೆ ಇಂಥ ಸಂಗತಿಗಳನ್ನು ಪ್ರಕ್ಷೇಪ ಎಂದು ಕರೆಯುವುದು ಪದ್ಧತಿ. ಈಗ ಪ್ರಚಾರದಲ್ಲಿರುವ ರಾಮಾಯಣ ಕಾವ್ಯದಲ್ಲಿ ಈ ಮುಂದೆ ಹೇಳುವ ಪ್ರಸಂಗಗಳು ಪ್ರಕ್ಷೇಪಗಳು ಎನ್ನಲು ಪ್ರಮಾಣ ದೊರೆಯುತ್ತವೆ

## ಪ್ರಕ್ಷೇಪಣ

ಪ್ರಕ್ಷೇಪಗಳಲ್ಲಿ ಒಂದು ದೊಡ್ಡ ಭಾಗ ಈಗ ಉತ್ತರಕಾಂಡ ಎಂದು ಪ್ರಚಾರದಲ್ಲಿರುವ ರಚನೆ ಕೆಲವು ನೂರು ವರ್ಷಗಳ ಹಿಂದೆ ಬರೆದ ಒಂದು ಹಳೆಯ ಪ್ರತಿಯಲ್ಲಿ ಆರು ಕಾಂಡದ ಗ್ರಂಥದ ಕೊನೆಗೆ "ಶ್ರೀಮದ್ರಾಮಾಯಣಂ ಸಮಾಪ್ತಂ ಉತ್ತರಕಾಂಡಃ" ಎಂಬ ವಾಕ್ಯ ಇದೆ ಆಮೇಲೆ ಉತ್ತರಕಾಂಡ ಬರುತ್ತದೆ. ಎಂದರೆ ಆಗಿನ ಕಾಲಕ್ಕೆ ಉತ್ತರಕಾಂಡ ರಾಮಾಯಣದ ಒಂದು ಭಾಗ ಅಲ್ಲ ಎನ್ನುವ ಭಾವ ಇದ್ದಿತು. ಕಾಂಡದ ಕಥನದ ಪರಿಶೀಲನ ಈ ಭಾವವನ್ನು ಸ್ಥಿರಪಡಿಸುತ್ತದೆ.

ಈ ಕಾಂಡವನ್ನು ಬಿಟ್ಟು ಉಳಿದ ಆರು ಕಾಂಡಗಳಲ್ಲಿ ಮೊದಲ ಕಾಂಡ ಆರಂಭದಲ್ಲಿ ಬೇರೆಯಾಗಿ ಇರಲಿಲ್ಲ. ಈಗಿನ ಅಯೋಧ್ಯಾಕಾಂಡ ಬಾಲಕಾಂಡ ಆಗಿತ್ತು ಬಾಲಕಾಂಡ ಆಮೇಲೆ ರಚಿತವಾಗಿ ಬೇರೆ ಒಂದು ಕಾಂಡವಾಗಿ ಕಂಡು ಅಯೋಧ್ಯಾಕಾಂಡದ ಕಥೆ ಈ ಹಸರಿನಿಂದ ಪ್ರತ್ಯೇಕ ಆಯಿತು. ಬಾಲಕಾಂಡದಲ್ಲಿ ಮೊದಲ ನಾಲ್ಕು ಸರ್ಗ ಪ್ರಕ್ಷಿಪ್ತ. ಮುಂದಿನ ಕಥೆಯಲ್ಲಿ ಶ್ರೀರಾಮನ ಜನ್ಮದ ಕಥೆ, ಸಗರನ ಮಕ್ಕಳು ನೆಲವನ್ನು ಬಗೆದು ಸಮುದ್ರವನ್ನು ಮಾಡಿದ ಕಥೆ, ಭಗೀರಥ ಗಂಗೆಯನ್ನು ತಂದನೆಂಬ ಕಥೆ, ಈ ಪ್ರಸಂಗದಲ್ಲಿ ಬರುವ

ಕಾರ್ತಿಕೇಯನ ಜನ್ಮದ ಕಥೆ, ಶ್ರೀರಾಮ ಪರಶುರಾಮರ ಕಾಳಗದ ಕಥೆ, ಅಹಲ್ಯೆಯ ಕಥೆ, ಇವೆಲ್ಲ ಪ್ರಕ್ಷಿಪ್ತ ಕಥನಗಳು.

ಅಯೋಧ್ಯಾಕಾಂಡದಲ್ಲಿ ಕಚ್ಚಿತ್ ಸರ್ಗ ಎಂದು ಹೆಸರಾಗಿರುವ ಒಂದು ಸರ್ಗ, ಅರಣ್ಯಕಾಂಡದಲ್ಲಿ ಬರುವ ಕಾಕಾಸುರನ ಕಥೆ, ಪ್ರಕ್ಷಿಪ್ತ ಎನ್ನುವುದು ಪೂರ್ವದಿಂದ ಬಂದಿರುವ ನಂಬಿಕೆ.

ಬಾಲಕಾಂಡದಲ್ಲಿ ಬರುವ ವಸಿಷ್ಠ ವಿಶ್ವಾಮಿತ್ರರ ಮಧ್ಯದ ಕಲಹದ ಕಥೆ, ರಾಮ, ಭರತ, ಭರದ್ವಾಜಮಹರ್ಷಿಯ ಆಶ್ರಮಕ್ಕೆ ಹೋಗಿದ್ದರೆಂಬ ಪ್ರಸಂಗಗಳು, ಶ್ರೀರಾಮ ಅರಣ್ಯವಾಸದ ದಿನಗಳಲ್ಲಿ ಅಗಸ್ತ್ಯ ಮಹರ್ಷಿಯ ಆಶ್ರಮಕ್ಕೆ ಹೋಗಿದ್ದನೆಂಬ ಕಥೆ, ಯುದ್ಧದ ಮಧ್ಯೆ ಅಗಸ್ತ್ಯ ಮಹರ್ಷಿ ಬಂದು ಶ್ರೀರಾಮನಿಗೆ ಆದಿತ್ಯ ಹೃದಯವನ್ನು ಉಪದೇಶಮಾಡಿ, ಅವನು ರಾವಣನನ್ನು ಸಂಹರಿಸುವುದರಲ್ಲಿ ಸಹಾಯ ನೀಡಿದನು ಎಂಬ ಕಥೆ ಇವು ಈ ಋಷಿಗಳ ಮಾಹಾತ್ಮ್ಯವನ್ನು ಹೊಗಳಲು ಸೇರಿದ ಕಥೆಗಳು.

ಅರಣ್ಯಕಾಂಡದಲ್ಲಿ ಶೂರ್ಪನಖಿ ಆಶ್ರಮಕ್ಕೆ ಬಂದು ತೊಂದರೆ ಕೊಟ್ಟಾಗ ಲಕ್ಷ್ಮಣ ಅವಳ ಕಿವಿ ಮೂಗನ್ನು ಕೊಯ್ದನು ಎಂಬ ಕಥೆ, ಅವಳು ಹೋಗಿ ರಾವಣನಿಗೆ ಜನಸ್ಥಾನದ ಅವನ ಪಾಳ್ಯವನ್ನು ರಾಮ ನಾಶಮಾಡಿದನು ಎನ್ನುವುದನ್ನು ಎರಡನೆಯ ಬಾರಿ ತಿಳಿಸಿದಳು ಎನ್ನುವ ಕಥೆ, ಖರ ರಾಮನನ್ನು ದಂಡಿಸುವುದಕ್ಕೆ ಹದಿನಾಲ್ಕು ಸಾವಿರ ರಾಕ್ಷಸರನ್ನು ಕಳುಹಿಸಿ ರಾಮ ಒಬ್ಬನೇ ಅವರನ್ನೆಲ್ಲ ಕೊಂದ ಎನ್ನುವುದು, ಸೀತಾದೇವಿಯನ್ನು ಹುಡುಕಲು ಲಂಕೆಗೆ ಹೋದ ಹನುಮಂತ ಸಮುದ್ರವನ್ನು ಆಕಾಶದಲ್ಲಿ ಹಾರಿ ದಾಟಿದ ಎನ್ನುವುದು, ಸೀತಾದೇವಿಯೊಡನೆ ಮಾತನಾಡಿದ ಬಳಿಕ ಅಶೋಕವನವನ್ನು ಭಂಗಮಾಡಿದ, ತನ್ನನ್ನು ದಂಡಿಸಲು ಬಂದ ರಾವಣನ ಮಗ ಅಕ್ಷನನ್ನು ಕೊಂದ, ರಾವಣನನ್ನು ಅವನ ಸಭೆಯಲ್ಲಿ ಧಿಕ್ಕರಿಸಿದ, ಎಂಬ ಕಥೆ, ವಾನರಸೇನೆ ಲಂಕೆಗೆ ಹೋಗಲು ಸಮುದ್ರ ದಾರಿಕೊಡಲಿಲ್ಲ ಎಂದು ಶ್ರೀರಾಮ ಕೋಪಗೊಂಡಾಗ ಸಮುದ್ರ ಪುರುಷ ರೂಪದಲ್ಲಿ ಬಂದು ಅವನ ಕ್ಷಮೆ ಬೇಡಿ, ಅವನು ಹೇಗೆ ನಡೆದುಕೊಳ್ಳಬೇಕೆಂದು ತಿಳಿಸಿದನು ಎನ್ನುವುದು, ಯುದ್ಧದಲ್ಲಿ ರಾವಣ ರಥದಲ್ಲಿ ಕುಳಿತಿರುತ್ತ ರಾಮ ನೆಲದಮೇಲೆ ನಿಂತು ಯುದ್ಧಮಾಡುವುದು ಸರಿಯಲ್ಲ ಎಂದು ದೇವತೆಗಳ ಪ್ರಭು ಇಂದ್ರ ಅವನಿಗೆ ತನ್ನ ರಥವನ್ನು ಕಳುಹಿಸಿಕೊಟ್ಟ ಎನ್ನುವುದು,

ಯುದ್ಧದ ಕೊನೆಯಲ್ಲಿ ರಾಮನ ಬಾಣ ರಾವಣನ ತಲೆಯನ್ನು ಕಡಿದರೂ ಅದು ಮತ್ತೆ ಮತ್ತೆ ನೂರುಬಾರಿ ಕಂಡು ನೂರೊಂದನೆಯ ಬಾಣ ಹಗೆಯ ಪಾಡನ್ನು ಮುಗಿಸಿತು ಎನ್ನುವುದು, ಇವು ಪಾತ್ರಗಳ ಮಹಿಮೆಯನ್ನು ಹೆಚ್ಚಿಸಲು ಸೇರಿದ ಅದ್ಭುತ ವಿಚಾರಗಳು. ಇಂಥ ವಿವರ ಇನ್ನೂ ಹಲವು ಉಂಟು. ಈ ವಿಷಯವನ್ನೆಲ್ಲ ನಾನು ಉತ್ತರಕಾಂಡ ವಿಚಾರ ಎಂಬ ಪುಸ್ತಕ ಮತ್ತು ಶ್ರೀರಾಮ ಪಟ್ಟಾಭಿಷೇಕ ಕಾವ್ಯದ ಟಿಪ್ಪಣಿಗಳಲ್ಲಿ ವಿವರ ವಿವರವಾಗಿ ಪರಿಶೀಲಿಸಿದ್ದೇನೆ ಆಸಕ್ತಿ ಉಳ್ಳವರು ದಯವಿಟ್ಟು ಆ ಪುಸ್ತಕಗಳನ್ನು ನೋಡಿ ನಿರ್ಣಯಕ್ಕೆ ಬರಬಹುದು

ಇದರಂತೆ ಭಾರತದಲ್ಲಿ ಅನೇಕ ಸಂಗತಿ ಕೃಷ್ಣನ ಮಹಿಮೆಯನ್ನು ಸ್ಥಾಪಿಸುವುದಕ್ಕಾಗಿ ಸೇರಿದುವು. ಭಾರತ ಮೊದಲಲ್ಲಿ ೨೪,೦೦೦ ಶ್ಲೋಕಗಳ ಗ್ರಂಥ ಆಗಿದ್ದು ಕೃಷ್ಣನನ್ನು ಕುರಿತ ಈ ಪ್ರಸಂಗಗಳು, ಇತರ ಹಲವು ಕಾರಣ ಗಳಿಂದ ಸೇರಿದ ಇತರ ಭಾಗಗಳು, ಇವನ್ನು ಒಳಗೊಂಡು ಒಂದು ಲಕ್ಷ ಶ್ಲೋಕದ ಗ್ರಂಥ ಆಯಿತು ಮೂಲಕೃತಿಯನ್ನು ಹೀಗೆ ಹಿಗ್ಗಿಸಿದ ಭಾಗಗಳ ಪಟ್ಟಿ ಒಂದನ್ನು ಮಾಡುವುದು ಸುಲಭ.

ಈಗ ಪ್ರಚಾರದಲ್ಲಿರುವ ಮಹಾಭಾರತ ಗ್ರಂಥದ ಆರಂಭವಲ್ಲೇ ಎರಡು ಪಾರಗಳು ಸೇರಿರಬೇಕು ಎಂದು ತೋರುತ್ತದ. ಒಂದು ಮೂಲಪಾಠ, ಎರಡನೆಯದು ಕೃಷ್ಣನನ್ನು ದೇವರ ಅವತಾರವೆಂದು ಭಾವಿಸಿದ ಭಾಗವತ ಪಂಥದ ಜನ ನಿರ್ಮಿಸಿದ ಪಾಠ

ಕೌರವ ಪಾಂಡವರ ಮಧ್ಯದ ವೈರ ಸ್ಪಷ್ಟವಾಗಿ ಹೊರಗೆ ಕಂಡ ಸಂದರ್ಭ, ದುರ್ಯೋಧನ ಬೇಡಿದಂತೆ ಧೃತರಾಷ್ಟ್ರ ಒಪ್ಪಿ ಅಪ್ಪಣೆ ಕೊಟ್ಟು ದ್ಯೂತ ನಡೆಯಿತು ಎನ್ನುವ ಕಥೆ. ದ್ಯೂತ ಎರಡು ಬಾರಿ ನಡೆಯಿತು ಎನ್ನುವುದು ಈಗ ಕಾಣುವ ಕಥನ ಇರುತ್ತ, ದುರ್ಯೋಧನ ತಂದೆಯನ್ನು ಬೇಡಿದ ಎನ್ನುವ ಭಾಗ, ಎರಡು ಬಾರಿಯೂ ಅದೇ ಮೊದಲ ಪ್ರಾರ್ಥನೆ ಎಂಬ ರೀತಿಯಲ್ಲಿ ಆರಂಭಿಸುತ್ತದೆ ಕಥನದ ಮಧ್ಯದಲ್ಲಿ ಕೂಡ ಬಿರುಕು ಕಾಣುತ್ತದೆ. ಮೊದಲ ಬಾರಿ ನಡೆಯಿತು ಎಂಬ ದ್ಯೂತ ದಿಟದಲ್ಲಿ ನಡೆಯಲಿಲ್ಲ. ಪಾಂಡವರು ಸೋತು ಅವರ ಪತ್ನಿ ಅಸಹಾಯಕಳಾಗಿ ಮರೆಹೊಕ್ಕು ಕೂಗಿಕೊಂಡಾಗ ಕೃಷ್ಣ ಅಕ್ಷಯ ವಸ್ತ್ರವನ್ನು ದಾನಮಾಡಿ, ಅವಳ ಮರ್ಯಾದೆಯನ್ನು ಕಾಪಾಡಿದ, ಎನ್ನು

ವುದನ್ನು ಹೇಳುವುದಕ್ಕಾಗಿ ಈ ಭಾಗ ಅದರಲ್ಲಿ ಸೇರಿತು ಎಂದು ಸ್ಪಷ್ಟವಾಗಿ ಕಾಣುತ್ತದೆ.

ವನಪರ್ವದ ದೂರ್ವಾಸ ಪ್ರಸಂಗದ ಕಥೆ, ಜೊತೆಯ ಅಕ್ಷಯ ಪಾತ್ರೆಯ ಕಥೆ, ಹೀಗೆಯೇ ಕೃಷ್ಣನ ಮಹಿಮೆಯನ್ನು ಸ್ಥಾಪಿಸುವುದಕ್ಕೆ ಸೇರಿದ ಕಥೆಗಳು. ಪಾಂಡವರ ಜೀವನವನ್ನು ವರ್ಣಿಸುವಲ್ಲಿ ಕಾವ್ಯ ಪಾಂಡವರು ದಿನದಿನ ಬೇರೆ ಬೇರೆ ದಿಕ್ಕುಗಳಿಗೆ ಹೋಗಿ ಬೇಟೆ ಆಡಿ ಮಾಂಸವನ್ನು ತರುತ್ತಿದ್ದರು ಎಂದು ಹೇಳುತ್ತದೆ. ಆಶ್ರಮದಲ್ಲಿ ಅಕ್ಷಯ ಪಾತ್ರೆ ಒಂದು ಇದ್ದದ್ದು ದಿಟವಾದರೆ, ದಿನದಿನದ ಈ ಬೇಟೆ ಏಕೆ ಬೇಕಾಯಿತು ?

ಅವತಾರ ಪುರುಷನಾಗಿ ಕೃಷ್ಣ ಮೂರುಬಾರಿ ತನ್ನ ವಿಶ್ವರೂಪವನ್ನು ಪ್ರಕಟಿಸಿದನು ಎನ್ನುವ ಮೂರು ಪ್ರಸಂಗವೂ ಹೀಗೆಯೇ ಮೂಲದಲ್ಲಿ ಇಲ್ಲದೆ ಅದೇ ಉದ್ದೇಶದಿಂದ ಆ ಬಳಿಕ ಸೇರಿದ ಭಾಗ. ಒಳ್ಳೆಯವು ಎನ್ನಬಹುದಾದ ಈ ಸಂದರ್ಭಗಳಲ್ಲದೆ ಕೃಷ್ಣ ಪಾಂಡವರನ್ನು ಕಾಪಾಡಲು ತಪ್ಪು ದಾರಿಯನ್ನು ಹಿಡಿದ ಎನ್ನುವ ಪ್ರಸಂಗಗಳು ಬರುತ್ತವೆ. ಇಂಥ ಸಂಗತಿ ಕೃಷ್ಣ ಯುಧಿಷ್ಠಿರ ನಿಂದ ಒಂದು ಸುಳ್ಳು ಮಾತನ್ನು ಹೇಳಿಸಿ, ದ್ರೋಣ ಸಾಯುವಂತೆ ಮಾಡಿದ ಎನ್ನುವುದು , ಗದಾಯುದ್ಧದಲ್ಲಿ ಭೀಮನಿಗೆ ಹಗೆಯನ್ನು ತೊಡೆಯ ಮೇಲೆ ಹೊಡಿ ಎಂದು ಸನ್ನೆಮಾಡಿದ ಎನ್ನುವುದು , ಯುದ್ಧ ಮುಗಿದು ಪಾಂಡವರು ಧೃತರಾಷ್ಟ್ರನ ಬಳಿಗೆ ಬಂದಾಗ, ಈ ದೊಡ್ಡಪ್ಪ ಭೀಮನನ್ನು ಅಪ್ಪಿಕೊಳ್ಳಲು ಬಯಸಿದ, ಕೃಷ್ಣ ಅವನ ತೆಕ್ಕೆಗೆ ಒಂದು ಲೋಹದ ಪ್ರತಿಮೆಯನ್ನು ಕೊಡಿಸಿದ. ಧೃತರಾಷ್ಟ್ರ ಅಪ್ಪಿ ಆ ಪ್ರತಿಮೆ ನುಚ್ಚುನೂರಾಯಿತು, ಎನ್ನುವುದು , ಶಿವನ ಮಹಿಮೆಯನ್ನು ವಿಷ್ಣುವಿನ ಮಹಿಮೆಯನ್ನು ಸ್ಥಾಪಿಸಲು ಸೇರಿರುವ ಅನೇಕ ಭಾಗಗಳು , ವಿಷ್ಣುವಿನ ಪಾರಮ್ಯವನ್ನು ಸ್ಥಾಪಿಸುವ ನಾರಾಯಣೀಯ ಎಂಬ ಭಾಗ, ಮೊದಲಲ್ಲಿ ಹೇಳಿರುವ ಸಂಗತಿಗಳನ್ನು ಮತ್ತೆ ಹೇಳುವ ಉಮಾ ಮಹೇಶ್ವರ ಸಂವಾದ ಎಂಬ ಭಾಗ ; ಬ್ರಾಹ್ಮಣ ಶ್ರೇಷ್ಠ ಎಂದು ಸ್ಥಾಪಿಸಲು ಅನುಶಾಸನ ಪರ್ವದಲ್ಲಿ ಬರುವ ವಿಸ್ತಾರವಾದ ಪ್ರಸಂಗಗಳು, ಇವೆಲ್ಲ ಪುರಾಣಗಳ ದಿನದ ಆಚಾರ್ಯವರ್ಗದ ಜನ ತಮ್ಮ ಭಾವನೆಗಳ ಪ್ರಸಾರಕ್ಕೆಂದು ಸೇರಿಸಿದ ಭಾಗಗಳು ಎನ್ನುವುದರಲ್ಲಿ ಸಂದೇಹವಿಲ್ಲ. ಇಂಥ ಸಂಗತಿ ಇನ್ನು ಹಲವು ಉಂಟು. ಈ ವಿಷಯವನ್ನು ಕುರಿತು ನನ್ನ 'ಭಾರತ ತೀರ್ಥ' ಎಂಬ

ಕನ್ನಡ ಪುಸ್ತಕದಲ್ಲಿ, 'ಮಹಾಭಾರತ–ಎ ಷಾರ್ಟ್ ಸ್ಟಡಿ' ಎಂಬ ಇಂಗ್ಲೀಷ್ ಪ್ರಬಂಧದಲ್ಲಿ, ವಿವರವಾದ ಪರಿಶೀಲನೆ ಇದೆ ಈ ವಿಷಯದಲ್ಲಿ ಇನ್ನಷ್ಟು ವಿವರವನ್ನು ತಿಳಿಯಲು ಆಸಕ್ತಿ ಉಳ್ಳವರು ದಯವಿಟ್ಟು ಆ ಪುಸ್ತಕಗಳನ್ನು ನೋಡಬೇಕೆಂದು ಬೇಡುತ್ತೇನೆ.

## ಸಂಕೇತಾರ್ಥ

ಅವತಾರಗಳನ್ನು ಕುರಿತ ಕಥೆಗಳ ವಿಷಯದಲ್ಲಿ ಈ ಮುನ್ನ ನಾಲ್ಕು ಮಾತನ್ನು ಹೇಳಿದ್ದಾಗಿದೆ.

ಪ್ರಹ್ಲಾದನ ಕಥೆ, ಬಲಿಯ ಕಥೆ, ಸಂಕೇತಾರ್ಥಕ ಕಥೆಗಳು. ಹಿರಣ್ಯಕಶಿಪು, ದೇವರು ಗೀವರು ಇಲ್ಲ ಎನ್ನುವ ಅಹಂಕಾರದ ಪುರುಷರೂಪ, ಪ್ರಹ್ಲಾದ ಭಕ್ತಿಯ ಪುರುಷರೂಪ. ಅಹಂಕಾರ ಭಕ್ತಿಯ ಭಾವವನ್ನು ಒಪ್ಪಲಾರದು, ಅದನ್ನು ಕೊಂದೇ ಬಿಡಲು ಯತ್ನಿಸುತ್ತದೆ, ಕೊಲ್ಲಲಾಗದೆ ಸೋಲುತ್ತದೆ, ಬಾಳಿನಲ್ಲಿ ಸಹಿಸಲಾಗದ ಕಷ್ಟ ಯಾವುದೋ ಒಂದು ಎದೆಬಿರಿದು ನಿಲ್ಲುತ್ತದೆ. ಆ ಎದೆಬಿರಿದು ಬಂದ ಬುದ್ಧಿ ಅಹಂಕಾರವನ್ನು ಕೊಲ್ಲುತ್ತದೆ. ಆ ಬುದ್ಧಿ ದೈವ ತಳೆದ ರೂಪ. ಈ ಅರ್ಥವನ್ನು ತಿಳಿಸುವುದಕ್ಕೆ ಪುರಾಣಕಾರ ನರಸಿಂಹಾವತಾರದ ಕಥೆಯನ್ನು ಕಟ್ಟಿದ್ದಾನೆ. ಅಹಂಕಾರ ಎಷ್ಟು ಕಷ್ಟ ಕೊಟ್ಟರೂ ಭಕ್ತಿ ಕೆಡುವುದಿಲ್ಲ ಎನ್ನುವುದನ್ನು ತಿಳಿಸುವುದಕ್ಕೆ ತಂದೆ ಮಗನಿಗೆ ಅನೇಕ ಹಿಂಸೆಗಳನ್ನು ಕೊಟ್ಟ ಎಂದು ಕಥೆ ವರ್ಣಿಸುತ್ತದೆ ಅವುಗಳಲ್ಲಿ ಒಂದು ಅರಮನೆಯ ಮಾಡದ ಮೇಲಿಂದ ಮಗನನ್ನು ಕೆಳಕ್ಕೆ ಎಸೆಯಿಸಿದನು, ಎನ್ನುವುದು. ಮಾಡದ ಮೇಲಿಂದ ಕೆಳಕ್ಕೆ ಬಿದ್ದ ಮಗುವಿಗೆ ಏನೂ ತೊಂದರೆ ಆಗಲಿಲ್ಲ ಎನ್ನುವುದು ವಾಸ್ತವವಾಗಿ ಹೊಂದುವುದಿಲ್ಲ ಅವಾಸ್ತವ ಆಗುತ್ತದೆ ಕಥನಕ್ಕೆ ಒಂದು ಅರ್ಥ ಉಳಿಯಬೇಕಾದರೆ ಕಥೆಯನ್ನು ಒಂದು ಸಂಕೇತದ ಕಥೆ ಎಂದು ತಿಳಿಯುವುದು ಒಂದೇ ದಾರಿ.

ಬಲಿಯ ಕಥೆ ಆದರೂ ಹೀಗೆಯೇ ಒಂದು ಸಂಕೇತದ ಕಥೆ.

ಬಲಿ ದಿಟದಲ್ಲಿ ಒಬ್ಬ ರಾಜ. ಅವನ ಎದುರಿಗೆ ದಿಟದಲ್ಲಿ ಸಣ್ಣ ಮೂರ್ತಿ ಒಂದು ಬಂದಿತು, ವರ ಪಡೆದ ಮೇಲೆ ನೆಲದಿಂದ ಮುಗಿಲ ತಲೆಯವರೆಗೆ ಮೂರ್ತಿಯಾಗಿ ಬೆಳೆದು ನಿಂತಿತು. ಇದು ವಾಸ್ತವವಾದ ಸಂಗತಿ ಆಗಲಾರದು.

ಏನಿಲ್ಲವೆಂದರೂ ಸಣ್ಣದಾಗಿದ್ದ ಮೂರ್ತಿ ದೊಡ್ಡದಾಗಿ ಬೆಳೆದು, ಮೂರು ಹೆಜ್ಜೆಯ ಸ್ಥಳವನ್ನು ಕೇಳಿದಾಗ, ಬಲಿ, "ನಾನು ಕೊಡುತ್ತೇನೆ ಎಂದದ್ದು ಸಣ್ಣ ಆಕಾರದಲ್ಲಿ ನೀನು ಕೇಳಿದ ಹೆಜ್ಜೆ ಅದನ್ನು ತೆಗೆದುಕೋ ನಿನ್ನ ದೊಡ್ಡ ಆಕಾರಕ್ಕೆ ಮೂರು ಹೆಜ್ಜೆಯನ್ನು ಕೊಡುತ್ತೇನೆ ಎಂದು ನಾನು ಹೇಳಲಿಲ್ಲ," ಎಂದು ಹೇಳುತ್ತಿರಲಿಲ್ಲವೇ ? ಈ ದಿನ ನಮಗೆ ತೋರುವ ಈ ಮಾತು ಅಂದು ಬಲಿಗೆ, ಅವನ ಗುರು ಶುಕ್ರಾಚಾರ್ಯನಿಗೆ, ಅವನ ಮಂತ್ರಿ ಮಂಡಲಕ್ಕೆ ತೋರಲಿಲ್ಲವೇ ? ಕಥೆಯನ್ನು ಸಂಕೇತ ಒಂದರ ಕಥೆ ಎಂದೇ ತಿಳಿಯಬೇಕು. ವಾಸ್ತವ ಸಂಗತಿ ಎಂದು ತಿಳಿದರ ಅದು ಅರ್ಥಹೀನ ಆಗುತ್ತದೆ. ಬಲಿ ಸಂಪತ್ತಿನಲ್ಲಿ ಹೆಮ್ಮೆಯಿಂದ ಬಾಳುತ್ತಿರುವ ಜೀವ. ಒಂದು ಹೊತ್ತಿನಲ್ಲಿ ದೇವರು ಎಂಬ ತತ್ವವನ್ನು ಕುರಿತು ಅದಕ್ಕೆ ಗೌರವಭಾವ ಮೂಡುತ್ತದೆ. ಜೀವ ಆ ಭಾವಕ್ಕೆ ಬಾಳಿನಲ್ಲಿ ಸ್ವಲ್ಪ ಎಡೆ ಕೊಡುತ್ತದೆ. ಹೀಗೆ ಸ್ವಲ್ಪ ಎಡೆ ಪಡೆದ ಭಾವ, ಬಂದವೇಳೆ ಎಷ್ಟಿತ್ತು ಅಷ್ಟೇ ಆಗಿ ನಿಲ್ಲುವುದಿಲ್ಲ, ಬೆಳೆಯುತ್ತದೆ. ಸುಖದಲ್ಲಿ ತೇಲುತ್ತಿದ್ದ ಜೀವವನ್ನು ಹೆಚ್ಚುಹೆಚ್ಚಾಗಿ ದೇವರ ಕಡೆಗೆ ಸೆಳೆಯುತ್ತದೆ. ಜೀವ ಇದರ ಫಲವಾಗಿ ಒಂದು ಘಟ್ಟದಲ್ಲಿ ನನಗೆ ಇಹ ಬೇಡ, ಪರ ಬೇಡ, ನಿನ್ನಡಿಯ ಅಡಿಯಲ್ಲಿ ಅಡಗಿರುವ ಒಂದು ಭಾಗ್ಯ ಸಾಕು ಎನ್ನುತ್ತದೆ.

ಇಂಥ ಸಂಕೇತಾರ್ಥ ಇರಬೇಕು ಎನ್ನಿಸುವ ಇನ್ನೊಂದು ಕಥೆ : ಒಂದು ಆನೆ ಒಂದು ಮೊಸಳೆಯ ಬಾಯಲ್ಲಿ ಸಿಕ್ಕಿಕೊಂಡು, ಅಸಹಾಯಕವಾಗಿ ದೇವರ ಕೃಪೆಯನ್ನು ಬೇಡಿದಾಗ, ವಿಷ್ಣು ಧಾವಿಸಿ ಬಂದು ಅದನ್ನು ಬಿಡಿಸಿದನು ಎನ್ನುವ ಕಥೆ ದೇವರನ್ನು ಕರೆಯುವ ಒಂದು ಆನೆ ದಿಟದಲ್ಲಿ ಒಂದು ಇರಬಹುದೇ ? ಈ ಒಂದು ಅಡ್ಡಿಯ ಮಾತೇ ಸಾಕು ಕಥೆಗೆ ಸಂಕೇತ ಆದ ಅರ್ಥ ಒಂದು ಇರಬೇಕು ಎನ್ನುವುದಕ್ಕೆ ಆ ಸಂಕೇತ ಏನು ? ಪ್ರಹ್ಲಾದ, ಬಲಿ ಇವರ ಕಥೆಗಳಲ್ಲಿ ಸಂಕೇತವನ್ನು ಊಹಿಸುವಂತೆ, ಇಲ್ಲಿಯೂ ಒಂದು ಸಂಕೇತವನ್ನು ಊಹಿಸಬಹುದು. ಕಥೆಯನ್ನು ರಚಿಸಿದ ಪ್ರಾಜ್ಞಕವಿ ಸಂಕೇತವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಅದನ್ನು ರಚಿಸಿದನು. ಅವನೋ ಅವನ ಜೊತೆಯ ಜನರೋ ಸಾಮಾನ್ಯ ಜನರಿಗೆ ಆ ಸಂಕೇತಗಳ ಸ್ವರೂಪವನ್ನು ತಿಳಿಸಿದರು ; ಜನರು ಕಥೆಯನ್ನು ಅರ್ಥಮಾಡಿಕೊಂಡಿದ್ದರು. ಹಿರಿಯರಿಂದ ಕಿರಿಯರು, ಅವರಿಂದ ಅವರ ಕಿರಿಯರು, ಕೇಳಿ ತಿಳಿಯುತ್ತಿದ್ದ ಈ ಸಂಕೇತ ಅರ್ಥಗಳು

ಕಾಲಕ್ರಮದಲ್ಲಿ ಮರೆಯಾದವು. ಮತ್ತೆ ಕೆಲವು ಕಾಲ ಕಳೆದು, ಸಂಕೇತ ಗಳಿದ್ದುವೆನ್ನುವುದೇ ಮರೆತು ಹೋಯಿತು. ಕಥೆ ಬರಿಯ ಕಥೆ ಆಯಿತು. ಇದ್ದೂ, ಪುರಾಣ ಹೇಳುವ ಜನರು ಕೆಲವುವೇಳೆ ಸಂಕೇತಾರ್ಥ ಇದೆ ಎಂದು ಸೂಚನೆ ಕೊಡುತ್ತಲೂ ಇದ್ದರು. ಆದರೆ ಸಂಕೇತ ಯಾವುದು ಎಂದು ಸ್ಪಷ್ಟವಾಗಿ ತಾವೆ ಕಾಣದೆ, ಕೇಳುವವರಿಗೆ ತಿಳಿಸಲು ಬಾರದೆ, ಸೂಚನೆ ಅಷ್ಟನ್ನು ಕೊಟ್ಟು ನಿಲ್ಲುತ್ತಿದ್ದರು ನಾನು ಕಂಡಂತೆ ನಾನು ಬಲ್ಲ ಹಿರಿಯರು ಒಬ್ಬರು ಈ ಕಥೆಯ ಸಂಕೇತವನ್ನು ತಮ್ಮ ಮಾತಿನಲ್ಲಿ ತಂದರು. ಇವರ ಜೀವನದ ಕೊನೆಯ ದಿನಗಳು; ಇನ್ನೇನು ದಿನ ಎರಡು ದಿನದಲ್ಲಿ ಜೀವ ದೇಹವನ್ನು ಬಿಡಬೇಕು, ನಾನು ಅವರ ಹತ್ತಿರ ಹೋಗಿ ಕುಳಿತಾಗ ಇವರು, ಗಜೇಂದ್ರನಿಗೆ ಇನ್ನೂ ಮೋಕ್ಷ ಆಗಿಲ್ಲ, ಎಂದರು. ಎಂದರೆ, ದೇಹದಲ್ಲಿ ಸಿಕ್ಕಿ ಬಿದ್ದಿರುವ ಜೀವಕ್ಕೆ ಇನ್ನೂ ಬಿಡುಗಡೆ ಬಂದಿಲ್ಲ ಈ ಅಜ್ಜನಿಗೆ ಸಾವು ಒಂದು ಭಯದ ಸಂಗತಿಯಾಗಿ ಇರಲಿಲ್ಲ. ಸಾವು ತನ್ನ ದೈವ ತನ್ನನ್ನು ಒಂದು ಕ್ಲೇಶದಿಂದ ಬಿಡಿಸುವ ವ್ಯಾಪಾರ ಎಂದು ಕಾಣುತ್ತಿತ್ತು. ಆದ್ದರಿಂದಲೇ ಅವರು ಸಾವಿನ ಎದುರಲ್ಲಿ ಅಷ್ಟು ಸಮಾಧಾನವಾಗಿ ಮಲಗಿದ್ದರು, ಅದರ ಬರವನ್ನು ಕಾಯುತ್ತಿದ್ದರು. ಬರಬೇಕಾಗಿ ಹಾತೊರೆಯುತ್ತಲೂ ಇದ್ದರೋ ? ಅಹುದು ಎಂದರೆ ಆಶ್ಚರ್ಯವಿಲ್ಲ ಇದು ಕಥೆಗೆ ಅನ್ವಯಿಸಬಹುದಾದ ಒಂದು ಸಂಕೇತ ಕಥೆಯನ್ನು ಕುರಿತು ವಿಚಾರ ಮಾಡುವಾಗ ನನಗೆ ತೋರಿದ ಒಂದು ಅರ್ಥವನು ನಾನು ನಮ್ಮ ಜನರಿಗೆ ನಿವೇದಿಸಿದ್ದೂ ಉಂಟು. ಮನುಷ್ಯ ಸಂಸಾರದ ಸರೋವರದಲ್ಲಿ ಕಾಲನ್ನಿಟ್ಟಿದ್ದಾನೆ. ಇಂದ್ರಿಯಗಳ ಹಿಡಿತಕ್ಕೆ ಸಿಕ್ಕಿಬಿದ್ದ ಅವನ ಮೊದ್ದು ಜೀವ ವಿನಾಶದ ಕಡೆಗೆ ಹೋಗುತ್ತ ದಾರಿ ಕೆಟ್ಟೆ ಎಂದು ಕಂಡಾಗ ಕೂಗಿಕೊಳ್ಳುತ್ತದೆ. ಒಳಗಿರುವ ದೈವ ರಕ್ಷಣದಲ್ಲಿ ಅದರತ್ತ ತಿರುಗಿ ಅದನು ಮೊಸಳೆಯಂಥ ಕರಣಗಳ ಬಾಯಿಂದ ಬಿಡಿಸುತ್ತದೆ. ಕರಣಗಳ ವಾಸನೆ, ಸುಖಗಳ ಪ್ರಾರಬ್ಧ, ಮನುಷ್ಯನನ್ನು ಮೊಸಳೆ ಹಿಡಿದಂತೆ ಹಿಡಿದಿರುತ್ತವೆ. ಜನ್ಮಾಂತರಗಳ ಕರ್ಮಗಳ ಪ್ರಾರಬ್ಧ ಈ ಮೊಸಳ. ಇದು ಸಂಕೇತ ಎಂದು ಸೂಚಿಸುವ ವಾಕ್ಯಗಳು ಸ್ತೋತ್ರಗಳಲ್ಲಿ ಒಮ್ಮೊಮ್ಮೆ ಇಣಕಿ ಕಾಣುತ್ತವೆ. ಬೆಳಗಾಗ ಎದ್ದು ಹೇಳುವ ಸ್ತೋತ್ರಗಳಲ್ಲಿ ಒಂದು "ಪ್ರಾತಃಸ್ಮರಾಮಿ ಭವಭೀತಿಮಹಾರ್ತಿಶಾಂತ್ಯೈ ನಾರಾಯಣಂ ಗರುಡವಾಹನಮಂಜನಾಭಂ

ಗ್ರಾಹಾಭಿಭೂತಮುದವಾರಣಮುಕ್ತಿಹೇತುಂ," ಎನ್ನುತ್ತದೆ. ಇನ್ನೊಂದು ಶ್ಲೋಕ

"ಪ್ರಾತರ್ಭಜಾಮಿ ಭಜತಾಮಭಯಂಕರಂತಂ
ಪ್ರಾಕ್ಸರ್ವಜನ್ಮಕೃತಪಾಪ ಭಯಾಪಹತ್ಯೈ
ಯೋ ಗ್ರಾಹವಕ್ತ್ರಪತಿತಾಂಘ್ರಿ ಗಜೇಂದ್ರ ಘೋರ
ಶೋಕಪ್ರಣಾಶನಕರೋ ಧೃತಶಂಖಚಕ್ರಃ"

ಎನ್ನುತ್ತದೆ. ಒಂದರ ಪ್ರಕಾರ ಮೊಸಳೆ ಭವಭೀತಿಮಹಾರ್ತಿ, ಇನ್ನೊಂದರ ಪ್ರಕಾರ ಹಿಂದಿನ ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಮೂಡಿರುವ ಭಯ.

## ಕೃಷ್ಣಾವತಾರದ ಕಥೆ

ಇಲ್ಲಿ ಕೃಷ್ಣಾವತಾರವನ್ನು ಕುರಿತು ಭಾಗವತ ಪ್ರಚಾರಕ್ಕೆ ತಂದ ಕಥೆಗಳನ್ನೂ ಅವನ್ನು ನಮ್ಮ ಜನ ಈಚೆಗೆ ಗ್ರಹಿಸಿರುವ ರೀತಿಯನ್ನೂ ವಿವೇಚಿಸುವುದು ಯುಕ್ತ. ಭಾರತದ ಶ್ರೇಷ್ಠ ಮಾನವ ಕೃಷ್ಣ ಮಹಾಭಾರತದಲ್ಲಿ ಅವತಾರ ಪುರುಷನಾದ. ವಿಷ್ಣುಪುರಾಣದಲ್ಲಿ ಈ ಅವತಾರ ಎಂಬ ಕಲ್ಪನೆ ಮತ್ತಷ್ಟು ಬೆಳೆಯಿತು ಭಾಗವತಪುರಾಣ ಈ ಕಲ್ಪನೆಯನ್ನು ಮತ್ತಷ್ಟು ಮುಂದಕ್ಕೆ ಒಯ್ದಿತು! ಈ ಕಾರಣದಿಂದ ಶ್ರೀಕೃಷ್ಣ ಒಬ್ಬ ಮಾನವ ಅಷ್ಟೇ ಅಲ್ಲ, ಅವನು ದಿಟವಾಗಿ ಅವತಾರ ಹುಟ್ಟುತ್ತ ದಿವ್ಯರೂಪನಾಗಿ ಕೃಷ್ಣ ತಾಯಿಗೆ ತಂದೆಗೆ ತನ್ನನ್ನು ನಂದಗೋಕುಲಕ್ಕೆ ಒಯ್ದು ರಕ್ಷಿಸುವ ಕ್ರಮವನ್ನು ತಿಳಿಸಿ ಮಾತನಾಡಿದನು. ಇಂದ್ರನನ್ನು ಪೂಜಿಸಬೇಡಿ ಎಂದು ತನ್ನ ಜನಕ್ಕೆ ಹೇಳಿ, ಇಂದ್ರ ಕೋಪಗೊಂಡು, ಊರನ್ನು ಮುಳುಗಿಸುವ ಬಿರುಮಳೆಯನ್ನು ಸುರಿಸಲು ಗೋವರ್ಧನ ಗಿರಿಯನ್ನು ಎತ್ತಿ, ತನ್ನ ಬೆರಳುಗಳ ಮೇಲೆ ಹಿಡಿದು ನಂದವ್ರಜವನ್ನು ಅಪಾಯದಿಂದ ರಕ್ಷಿಸಿದನು. ತರುಣ ಹೋಗಿ ಕಂಸ ತನ್ನ ಮೇಲೆ ಬಿಡಿಸಿದ ಒಂದು ಆನೆಯನ್ನು ತನ್ನ ಶಕ್ತಿಯಿಂದ ಅಡಗಿಸಿದನು. ಹದಿನಾರು ಸಾವಿರ ಪತ್ನಿಯರನ್ನು ಬಾಳಿಸಿ ಅಸ್ಖಲಿತ ಬ್ರಹ್ಮಚಾರಿಯಾಗಿದ್ದನು. ಅವತಾರವನ್ನು ಮುಗಿಸಲು ನಿಶ್ಚಯಿಸಿ ಜರನಿಂದ ಪೆಟ್ಟುತಿಂದು ಸದೇಹವಾಗಿ ವೈಕುಂಠಕ್ಕೆ ತೆರಳಿದನು. ಭಾರತ ಕಥೆಯಲ್ಲಿ ಬಂದಿರುವ ಅಕ್ಷಯ ಪಾತ್ರೆ,

ಅಕ್ಷಯ ವಸ್ತ್ರಗಳ ಕಥೆಗಳು ಅಸಂಭಾವ್ಯವಾದ ಸಂಗತಿಗಳು ಇವೆಲ್ಲದರ ಉದ್ದೇಶ ಕೃಷ್ಣ ದೈವ, ಎಂದು ಸ್ಥಾಪಿಸುವುದು.

ಭಾಗವತದಲ್ಲಿ ಬರುವ ಎರಡು ಮುಖ್ಯ ಪ್ರಸಂಗ, ಸ್ನಾನ ಮಾಡುತ್ತಿದ್ದ ಸ್ತ್ರೀಯರ ವಸ್ತ್ರಗಳನ್ನು ಎತ್ತಿಕೊಂಡು ಕೃಷ್ಣ ಕೊಳದ ಬದಿಯ ಮರದ ಮೇಲೆ ಕುಳಿತು ಅವರನ್ನು ಕಾಡಿದನು ಎನ್ನುವುದು ; ಒಂದು ಹುಣ್ಣಿಮೆಯ ಇರುಳು ನಂದವ್ರಜದ ಗರತಿ ಹೆಣ್ಣು ಮಕ್ಕಳು ತಮ್ಮ ಗಂಡದಿರನ್ನು ಬಿಟ್ಟು, ಇವನ ಬಳಿ ಬರಲು ಅವರಿಗೆ ವಿವೇಕ ಹೇಳಿ ಅವರೊಡನೆ ನೃತ್ಯ ನಡೆಸಿ ಅವರನ್ನು ಹಿಂದಕ್ಕೆ ಕಳುಹಿಸಿದನು ಎನ್ನುವುದು

ಈ ಕಥೆಗಳಲ್ಲಿ ನಾವು ಸಾಮಾನ್ಯವಾದ ಮಾನವ ವ್ಯಾಪಾರವನ್ನು ಕಾಣ ಬಾರದು ಆ ಹೆಣ್ಣು ಮಕ್ಕಳು ಸ್ನಾನಕ್ಕೆ ಕೊಳದೊಳಕ್ಕೆ ಇಳಿಯುತ್ತ ಬೆತ್ತಲೆ ಯಾಗಿ ಇಳಿದರು ಎನ್ನುವುದು ಅಸಂಭವ. ಎಂಥ ಪುಂಡ ಹುಡುಗನೇ ಆದರೂ ಹೀಗೆ ಹೋಗಿ ಅವರನ್ನು ಬೇಸರಗೊಳಿಸಿದ ಎನ್ನುವುದು ಕೂಡ ಸುಲಭವಾಗಿ ನಂಬುವ ಸಂಗತಿ ಅಲ್ಲ. ಕಥೆ ಸಂಕೇತದಿಂದ ಒಂದು ಸಂಗತಿಯನ್ನು ತಿಳಿಸುತ್ತದೆ ಮನುಷ್ಯರು ನಾವು ನಮ್ಮ ವ್ಯವಹಾರ ಕ್ಷೇತ್ರದಲ್ಲಿ ದಿನದಿನ ನಮ್ಮನ್ನು ಯಾರೂ ನೋಡುತ್ತಿಲ್ಲ ಎಂದುಕೊಂಡು ನಿಸ್ಸಂಕೋಚವಾಗಿ ನೂರು ವಿಷಯದಲ್ಲಿ ತಪ್ಪಿ ನಡೆಯುತ್ತೇವೆ ನಮಗೆ ಕಾಣದ ಪರತತ್ವ ಮರೆಯಲ್ಲಿದೆ, ನಮ್ಮ ಆಟವನ್ನು ನೋಡುತ್ತಿದೆ. ಯಾವುದೋ ಹೊತ್ತಿನಲ್ಲಿ ಪರತತ್ವ ಹತ್ತಿರದಲ್ಲೇ ಇದೆ ಎಂದು ಕಂಡಾಗ ನಾವು ನಾಚುತ್ತೇವೆ, ತಪ್ಪಾಯಿತು ಎನ್ನುತ್ತೇವೆ, ಶರಣು ಹೋಗು ತ್ತೇವೆ, ರಕ್ಷಣೆ ಪಡೆಯುತ್ತೇವೆ. ರಾಸಕ್ರೀಡೆಯ ಕಥೆಯೂ ಒಂದು ಸಂಕೇತ ವನ್ನು ಸೂಚಿಸುತ್ತದೆ. ಪರಾತ್ಪರಮೂರ್ತಿ ಕೊಳಲು ನುಡಿಸಿದ, ಬೆಳದಿಂಗಳ ರಾತ್ರಿ, ಯಮುನಾ ತೀರ, ಗೋಕುಲದ ಹೆಣ್ಣುಮಕ್ಕಳು ಕೊಳಲ ಗಾನವನ್ನು ಕೇಳಿ ಕೃಷ್ಣನನ್ನು ಸೇರಲು ಅವನು ಇದ್ದಲ್ಲಿಗೆ ಹೋದರು. ಅವನು ನೀವು ಹೀಗೆ ಬರಬಾರದಾಗಿತ್ತು ಎಂದು ವಿವೇಕ ಹೇಳಿ ಅವರೊಡನೆ ನೃತ್ಯಮಾಡಿ ಅವರನ್ನು ಹಿಂದಕ್ಕೆ ಕಳುಹಿಸಿದನು ನೃತ್ಯದಲ್ಲಿ ಮಧ್ಯೆ ಒಂದು ಮೂರ್ತಿಯಾಗಿ ನಿಂತು ಅದನ್ನು ಸುತ್ತುತ್ತ ಆ ಹಲವು ಹೆಣ್ಣುಮಕ್ಕಳ ಒಬ್ಬೊಬ್ಬಳ ಎದುರಲ್ಲಿಯೂ ಬೇರೆ ಬೇರೆ ಒಂದು ಮೂರ್ತಿಯಾಗಿ ಕಾಣಿಸಿದನು ಇಷ್ಟೆಲ್ಲ ಆಗುತ್ತಿರುವಲ್ಲಿ ಆ ಹೆಣ್ಣುಮಕ್ಕಳ ದೇಹಗಳು ಅವರವರ ಪತಿಗಳೊಂದಿಗೆ

ಅವರವರ ಶಯ್ಯೆಗಳಲ್ಲಿ ಇದ್ದವು. ರಾಸಕ್ರೀಡೆ ನಮಗೆ ಸಂತೋಷ ಕೊಡುತ್ತಿರುವ ದಿನದಿನದ ಜೀವನ ನಮ್ಮ ಅಂತರ್ಯಾಮಿ ನಮ್ಮ ಒಳಗಿದ್ದಾನೆ. ಎದುರಿಗೆ ನಮ್ಮ ಜೀವ ಇದೆ ಅವನೊಂದಿಗೆ ಆನಂದದಲ್ಲಿ ನರ್ತಿಸುತ್ತಿದೆ. ಇರುತ್ತ ಹೊರಗಡೆಗೆ ವ್ಯವಹಾರದಲ್ಲಿ ನಾವು ಏನಾಗಿದ್ದೇವೆ ಅದೇ ಆಗಿರುತ್ತ ಎಲ್ಲರೂ ಬಾಳನ್ನು ನಡೆಸುತ್ತಿದ್ದೇವೆ.

ಭಕ್ತರನ್ನು ಸಲಹುವುದಕ್ಕಾಗಿ ದೇವರು ತಪ್ಪು ಮಾಡಲೂ ಹಿಂಜರಿಯುವುದಿಲ್ಲ ಎಂದು ತೋರುವ ಪ್ರಸಂಗಗಳು ಮಹಾಭಾರತದಲ್ಲಿ ಬರುತ್ತವೆಯಷ್ಟೆ. ಶ್ರೀಕೃಷ್ಣನ ಚರಿತ್ರೆಯ ಇಂಥ ಒಂದು ಕಥೆ ವೃಂದೆಯನ್ನು ಕುರಿತದ್ದು. ವೃಂದೆ ಮಹಾಪತಿವ್ರತೆ, ಒಬ್ಬ ಅಸುರನ ಪತ್ನಿ. ಇವಳ ಪಾತಿವ್ರತ್ಯದ ಬಲದಿಂದ ಅಸುರ ಅಜೇಯನಾಗಿದ್ದಾನೆ. ಅವನು ಅಳಿಯದೆ ದೇವತೆಗಳು ಉಳಿಯುವಂತಿಲ್ಲ. ಕೃಷ್ಣ ಪತಿ ಆದ ಅಸುರನ ರೂಪದಲ್ಲಿ ಹೋಗಿ ವೃಂದೆಯನ್ನು ಕೆಡಿಸುತ್ತಾನೆ. ರಕ್ಷೆಯಾಗಿದ್ದ ಪಾತಿವ್ರತ್ಯ ಭಂಗವಾಗಿ ಅಸುರ ಸಾಯುತ್ತಾನೆ. ದೇವತೆಗಳು ಬದುಕಿಕೊಳ್ಳುತ್ತಾರೆ ಈ ಕಥೆ ಎಲ್ಲಿದೆಯೋ ನನಗೆ ತಿಳಿಯದು. ನಮ್ಮ ಮಿತ್ರರೊಬ್ಬರು ಈ ಪ್ರಸಂಗವನ್ನು ಹಿಡಿದು ಒಂದು ಪದ್ಯವನ್ನು ರಚಿಸಿದ್ದಾರೆ

ಕೃಷ್ಣನನ್ನು ಹೀಗೆ ಚಿತ್ರಿಸಿ ಈ ಕಥೆಯನ್ನು ಕಲ್ಪಿಸಿದ ಪೌರಾಣಿಕ ತಾನು ತನ್ನ ದೇವರು ಎಂಥ ವಾತ್ಸಲ್ಯವಂತನೆಂದು ತೋರಿಸಲು ಉದ್ದೇಶಿಸಿದನು. ಹೀಗೆ ಮಾಡುವಲ್ಲಿ ಅವನು, ದೇವರನ್ನು ಒಬ್ಬ ಅನ್ಯಾಯಕಾರನಾಗಿ ಮಾಡುತ್ತಿರುವುದನ್ನು ಕಾಣಲಿಲ್ಲ.

ವಾಲ್ಟೇರ್ ತನ್ನ ಒಂದು ಮಾತನ್ನು ವಿಕಾರ ರೂಪದಲ್ಲಿ ಪ್ರಕಟಿಸಿದ ಮಿತ್ರರ ವಿಷಯವಾಗಿ "O God, save me from my friends, I shall look after my enemies myself" ಎಂದನಂತೆ. ಇಂಥ ಕಥೆಗಳ ವಿಷಯವಾಗಿ ಶ್ರೀಕೃಷ್ಣ ಇದೇ ಮಾತನ್ನು ಹೇಳಿಯಾನು.

## ಕಲ್ಪನೆ

ದೇವರನ್ನು ನಮ್ಮ ಮನಸ್ಸಿಗೆ ಹತ್ತಿರದ ವಸ್ತುವನ್ನಾಗಿ ಮಾಡಲು ಕಟ್ಟಿದ ಈ ಕಥೆಗಳು ರಚಿಸಿದವರ ದೃಷ್ಟಿಯಿಂದ ನಿರ್ದುಷ್ಟ; ಆದರೆ ವ್ಯವಹಾರದ

ದೃಷ್ಟಿಯಿಂದ ಅನುಚಿತ ಆಗುತ್ತವೆ. ದೇವರನ್ನು ಹತ್ತಿರದ ವಸ್ತುವನ್ನಾಗಿ ಮಾಡಲು ಪುರಾಣಗಳು ಅವನಿಗೆ ಒಂದು ದೇಹವನ್ನು ಕೊಟ್ಟು ಅವನನ್ನು ಕುರಿತು ಕಥೆಗಳನ್ನು ಕಲ್ಪಿಸಿದವು "ನಿನಗೆ ರೂಪ ಇಲ್ಲ, ಆಕಾರ ಇಲ್ಲ, ಆಯುಧಗಳಿಲ್ಲ, ನೆಲೆ ಇಲ್ಲ. ಹೀಗೆ ಇದ್ದೂ ಭಕ್ತರ ಸಲುವಾಗಿ ನೀನು ಪುರುಷಾಕಾರವನ್ನು ತಳೆದು ಕಾಣುತ್ತೀಯೆ" ಎಂದು ಆಗಮ ಹೇಳಿದೆ. ಎಂದ ಮೇಲೆ ದೇವರನ್ನು ಕುರಿತ ಕಥೆಗಳಲ್ಲಿ ದೇವರು ಧರಿಸಿದ ಈ ದೇಹಗಳು ಪ್ರಾಕೃತ ದೇಹಗಳಲ್ಲ ಎಂದು ಬೇರೆ ಹೇಳಬೇಕಾಗಿಲ್ಲ

ಆಗಮಗಳು ಮೂರ್ತಿಯಾಗಿ ಕಲ್ಪಿಸಿದ ದೈವದ ಈ ರೂಪುಗಳನ್ನು ಅಪ್ರಾಕೃತ ದಿವ್ಯಸುಂದರ ವಿಗ್ರಹ ಎಂದು ಹೇಳಿದೆ. ಎಂದರೆ ದೇವರನ್ನು ಮೂರ್ತಿಯಾಗಿ ನೆನೆದರೂ, ಆ ಮೂರ್ತಿಗೆ ತಲೆ, ತೋಳು, ಕಣ್ಣು, ಬಾಯಿ, ಕಾಲು ಇವೆ ಎಂದು ಎಣಿಸುವುದಾದರೂ, ಅವು ಒಳಗಣ್ಣಿಗೆ ಕಾಣುವುದಕ್ಕಾಗಿ ಹೊರತು, ಹೊರಗಣ್ಣಿಯ ದಿಟವಾದ ಮಾನವಮೂರ್ತಿಯ ಅವಯವಗಳಲ್ಲ. ಇದರ ಮೇಲೆ ದೇವರನ್ನು ನಿಜ ಮಾಡಿಕೊಳ್ಳುವುದರಲ್ಲಿ ಪುರಾಣಗಳು ಈ ದೇವತೆಗಳಿಗೆ ಹೆಂಡತಿ ಮಕ್ಕಳನ್ನು ನಿರ್ಮಿಸಿದವು ವಿಷ್ಣುವಿಗೆ ಲಕ್ಷ್ಮಿ ಪತ್ನಿ, ಅವಳು ಅವನ ಎದೆಯಲ್ಲಿ ವಾಸವಾಗಿದ್ದಾಳೆ ಅವಳು ಸಮಸ್ತ ಸೌಭಾಗ್ಯಗಳ ಅಧಿದೈವ. ತನ್ನ ಮಕ್ಕಳಿಗಾಗಿ ಪತಿಯ ಅನುಗ್ರಹವನ್ನು ಬೇಡಿ ಪಡೆಯುವವಳು. ಹೀಗೆ ವರ್ಣಿಸಿರುವ ಲಕ್ಷ್ಮಿ ಮೂಲತಃ ದೈವದ ಹೃದಯದಲ್ಲಿರುವ ಕರುಣೆ. ಇದು ಸ್ತೋತ್ರದಲ್ಲಿ ಸ್ಪಷ್ಟವಾಗುತ್ತದೆ. ಆದರೆ ಅದೇ ಸ್ತೋತ್ರಗಳಲ್ಲಿ, ಅವಳು ಒಂದು ಸ್ತ್ರೀತತ್ತ್ವ, ವಿಷ್ಣು ಪುರುಷತತ್ತ್ವ. ಆ ಪುರುಷತತ್ತ್ವಕ್ಕೆ ದೇಹವಿದೆ, ಈ ಸ್ತ್ರೀತತ್ತ್ವಕ್ಕೆ ದೇಹವಿದೆ. ಮರ್ತ್ಯಲೋಕದ ಗಂಡಹೆಂಡಿರಂತೆ ಇವರಿಗೆ ದಾಂಪತ್ಯ ಜೀವನ ಇದೆ. ಇದು ಪುರಾಣಗಳು ಕಲ್ಪಿಸುವ ಪ್ರಪಂಚ. ಈ ಸಂಬಂಧವನ್ನು ಮತ್ತಷ್ಟು ಮುಂದಕ್ಕೆ ಒಯ್ಯುವ ಸ್ತೋತ್ರವೊಂದು, ದೇವಿಯ ಕುಚ ಚೂಚುಕದ ಕುಂಕುಮದಿಂದ ಅವಳ ಪತಿಯ ನೀಲತನುವಿನ ಮೇಲೆ ಮಚ್ಚೆ ಆಗಿದೆ ಎಂದು ವರ್ಣಿಸುತ್ತದೆ ದೇವರ ಮಾತಲ್ಲವೇ ಎಂದು ನಾವು ಇದನ್ನು ಸ್ವಲ್ಪವೂ ಸಂಕೋಚಪಡದೆ ಹೇಳುತ್ತೇವೆ ಆದರೆ ಇದು ಯುಕ್ತವಾದ ವರ್ಣನೆಯೇ ಎಂದು ಯೋಚನೆ ಮಾಡಬೇಕು. ಯಾವ ಮಗು ತನ್ನ ತಂದೆ ತಾಯಿ ದಾಂಪತ್ಯ ಸಂಬಂಧದ ಈ ವಿವರವನ್ನು ನೆನೆಯಹೋಗುತ್ತದೆ?

ಮನುಷ್ಯರಾದ ತಂದೆ ತಾಯನ್ನು ಕುರಿತು ಅನುಚಿತ ಎನಿಸುವ ಈ ವಿವರ ಪ್ರಾಕೃತ ದೇಹವಿಲ್ಲದ ದೈವವನ್ನು ಕುರಿತು ಮತ್ತಷ್ಟು ಅನುಚಿತ ಎನಿಸಬೇಕು. ಹೀಗೆ ಪುರಾಣಗಳು ಕಟ್ಟಿದ ಕಥೆಗಳು ಮುಂದಕ್ಕೆ ವಿವರಗಳನ್ನು ಬೆಳೆಸಿಕೊಂಡು, ಒಳ್ಳೆಯ ಉದ್ದೇಶಕ್ಕೆಂದು ಅವಲಂಬಿಸಿದ ಸಾಹಿತ್ಯಯುಕ್ತಿಯನ್ನು ಎಲ್ಲೆ ಮೀರಿದ ಅನೌಚಿತ್ಯಕ್ಕೆ ಬೆಳೆಸಿ ಮುಗಿದವು.

ವಿಷ್ಣು ಲಕ್ಷ್ಮಿಯ ಕಥೆಯಂತೆ, ಶಿವ ಗೌರಿ, ಶಿವ ಪಾರ್ವತಿ ಇವರ ಕಥೆಗಳೂ ಅನೌಚಿತ ದ ಎಲ್ಲೆಯನ್ನು ಸಾರುತ್ತವೆ. ಗೌರಿ ದಕ್ಷನ ಮಗಳು ಅವಳು ಶಿವನ ಪತ್ನಿ. ತಂದೆ ಮಾಡಿದ ಯಜ್ಞಕ್ಕೆ ಶಿವನಿಗೆ ಆಹ್ವಾನ ಇಲ್ಲ. ಮಗಳು ತಾನೇ ಯಜ್ಞಕ್ಕೆ ಹೋಗುತ್ತಾಳೆ ಅವಮಾನಪಟ್ಟು ಅಗ್ನಿಯಲ್ಲಿ ಬಿದ್ದು ಸಾಯುತ್ತಾಳೆ ಶಿವ ದೇವರು, ಗೌರಿ ದೇವತೆ ಇವರಿಗೆ ವೈರ ಉಂಟೆ ? ಈ ವೈರಗಳನ್ನು ಸುಡುವ ಒಂದು ಅಗ್ನಿ ಉಂಟೆ ? ಗೌರಿ ಕಥೆಯಲ್ಲಿ ಪಾರ್ವತಿ ಯಾಗಿ ಹುಟ್ಟಿ ಶಿವನನ್ನು ಸೇರುತ್ತಾಳೆ. ದೇವತೆಗೆ ಹೀಗೆ ಜನ್ಮ ಉಂಟೆ ? ಇದೆಲ್ಲ ದೈವವನ್ನು ಕುರಿತ ಮೂಲಭಾವನೆ ತಪ್ಪಿದ್ದರಿಂದ ಮಾಡಿದ ತಪ್ಪು ಭಾವನೆ.

ರಾಮಾಯಣದಲ್ಲಿ ಕಾರ್ತಿಕೇಯನ ಜನ್ಮದ ಕಥೆ ಬರುತ್ತದೆ. ಅದರಲ್ಲಿ ಶಿವನೂ ಅವನ ಪತ್ನಿಯೂ ಕೂಡಿದ ಮಾತು ಬರುತ್ತದೆ ಆದರೆ ವಿವರವೆಲ್ಲ ಪ್ರಾಕೃತ ದೇಹದ ಒಂದು ಗಂಡು ಒಂದು ಹೆಣ್ಣು ಕೂಡುವ ಸಂದರ್ಭದ ಮಾತುಗಳು. ಮನುಜ ದೇಹದಲ್ಲಿ ರೇತಸ್ಸಿದೆ, ದೈವದ ದೇಹದಲ್ಲಿ ರೇತಸ್ಸಿರ ಬೇಕೇ ? ಇರುತ್ತದೆಯೇ ? ಎಷ್ಟು ಹೊತ್ತು ಆದರೂ ರೇತಸ್ಸು ಜಾರಲಿಲ್ಲವಾಗಿ ಈ ಸಂಬಂಧದಿಂದ ಇನ್ನೆಂಥ ಭಯಂಕರ ಸಂತಾನ ಹುಟ್ಟುತ್ತದಯೋ ಎಂದು ದೇವತಗಳಿಗೆ ಭಯವಾಯಿತಂತೆ ಅವರು ಶಿವನನ್ನು ಬೇಡಿ, ಶಿವ ಸಂಬಂಧ ವನ್ನು ಅಷ್ಟಕ್ಕೆ ನಿಲ್ಲಿಸಿ ರೇತಸ್ಸನ್ನು ಹೊರಕ್ಕೆ ಬಿಟ್ಟನಂತೆ ಅದು ಇಲ್ಲಿ ಅಲ್ಲಿ ಪ್ರಕ್ಷಿಪ್ತವಾಗಿ ಕೊನೆಗೆ ಒಂದು ಸ್ಥಾನದಲ್ಲಿ ನಿಂತು ಕಾರ್ತಿಕೇಯ ಆಯಿತಂತೆ. ಶಿವನನ್ನು ದೈವವೆಂದು ಗ್ರಹಿಸಿದ ಮನಸ್ಸು ಅವನನ್ನು ಕುರಿತು, ಅವನ ಪತ್ನಿಯನ್ನು ಕುರಿತು, ಇಂಥ ಮಾತನ್ನು ಹೇಳಬಹುದೇ ? ನಾವು ಯೋಚಿಸ ಬೇಕು. ಸ್ವಲ್ಪ ಯೋಚನೆ ಮಾಡಿದರೆ ದಿಟದಲ್ಲಿ ಇದು ದೈವವನ್ನು ಕುರಿತ ಒಂದು ಅಪಚಾರವೆಂದೇ ತೋರಬೇಕು.

## ತಪ್ಪು ಮನೋಧರ್ಮ

ತಮ್ಮ ದೇವರು ಹೆಚ್ಚು, ಬೇರೆ ದೇವರು ಕಡಿಮೆ ಎನ್ನುವ ಮನೋಧರ್ಮ ಹೀಗೆ ತಪ್ಪು ದಾರಿಯಲ್ಲಿ ಹರಿಯುವ ತೆರವನ್ನು ತೋರಿಸುವ ಒಂದು ಕಥೆ ಭಾಗವತ ಪುರಾಣದಲ್ಲಿ ಬರುತ್ತದೆ

ಒಂದು ಸಂದರ್ಭದಲ್ಲಿ ವಿಷ್ಣು ಮೋಹಿನಿ ರೂಪವನ್ನು ಧರಿಸಿದನೆಂದು ಕಥೆ ಇದೆಯಷ್ಟೆ. ಶಿವ ಈ ರೂಪವನ್ನು ನೋಡಿ ಮೋಹದಿಂದ ಪರವಶನಾಗಿ ವಿಷ್ಣುವನ್ನು ಹಿಡಿದುಕೊಳ್ಳಲು ಓಡಿದನಂತೆ. ವಿಷ್ಣು ಅವನಿಂದ ತಪ್ಪಿಸಿಕೊಳ್ಳಲು ಓಡಿದ ಶಿವ ಮೋಹಿನಿಯನ್ನು ಅಟ್ಟಿಸಿಕೊಂಡು ಹೋದ ಹೀಗೆ ಹೋಗುತ್ತ ಆಶೆಯ ಭರದಲ್ಲಿ ಅವನ ರೇತಸ್ಸು ಚೆಲ್ಲಿಹೋಯಿತು. ಇದು ಕಥೆ. ಇಲ್ಲಿಯೂ ಈ ಮುನ್ನ ಹೇಳಿರುವ ದೇಹ ವಿಚಾರದ ಆಕ್ಷೇಪ ಅನ್ವಯಿಸುತ್ತದೆ. ವಿಷ್ಣು ಮೋಹಿನಿ ರೂಪವನ್ನು ತಳೆದ, ಸರಿ ಹೀಗೆಂದರೇನು? ಹೆಣ್ಣಾದ ಎಂತಲೇ? ಹೆಣ್ಣಿನ ರೂಪ ತಾಳಿದ. ದಿಟದಲ್ಲಿ ಸ್ತ್ರೀ ಆದನೇ? ಶಿವ ಆ ರೂಪವನ್ನು ನೋಡಿ ಮೋಹಗೊಳ್ಳುವಷ್ಟು ಮೂಢನೇ, ಮೂರ್ಖನೆ? ಆಯಿತು. ಕಥೆ ಹೇಳುವವನ ಮನಸ್ಸಿನಲ್ಲಿ ಅವನು ಇಂಥ ಮೂಢ, ಮೂರ್ಖ, ಆದ. ಅವನು ಹಿಡಿಯಲು ಬಂದರೆ ವಿಷ್ಣು ಓಡಬೇಕು ಏಕೆ? ಸಂಕಲ್ಪದಿಂದ ಹೆಣ್ಣು ರೂಪವನ್ನು ತಳೆದ ವಿಷ್ಣು ಅಷ್ಟೇ ಸುಲಭವಾಗಿ ಸಂಕಲ್ಪದಿಂದ ಮತ್ತೆ ಗಂಡಾಗಿ ಕಾಣಲಾಗಲಿಲ್ಲವೆ? ತಳೆದ ದೇಹವನ್ನು ಉಳಿಸಿಕೊಂಡು ಓಡಬೇಕಾದ ಪ್ರಮೇಯ ಅಲ್ಲಿ ಏನಿತ್ತು? ಶಿವ ಅಟ್ಟಿಸಿಕೊಂಡು ಓಡಿದ ಶಿವನ ಮೈ ಮರ್ತ್ಯಲೋಕದ ಪ್ರಾಕೃತ ದೇಹವೇ? ದೇವರಾದ ಶಿವನಿಗೆ ತನ್ನ ರೇತಸ್ಸನ್ನು ತಡೆದು ನಿಲ್ಲಿಸಿಕೊಳ್ಳುವ ಶಕ್ತಿ ಇಲ್ಲದೆ ಹೋಯಿತೇ? ಈ ಕಥೆಗಾರನ ಈ ವಿಷ್ಣು ಈ ಶಿವನ ಕಲ್ಪನೆ ಇವನು ದೈವದ ಸ್ವರೂಪವನ್ನು ಗ್ರಹಿಸಲಾರದವನು ಎನ್ನುವದನ್ನಷ್ಟೇ ತೋರಿಸುತ್ತದೆ ಈ ಕಥೆಗಾರ ಶಿವನನ್ನೂ ಕಾಣ; ವಿಷ್ಣುವನ್ನೂ ಕಾಣ

## ಬುದ್ಧಿ ಸಾಲದ ಪ್ರಸಂಗ

ದೇವರನ್ನು ಸರಿಯಾಗಿ ಕಲ್ಪಿಸಿಕೊಳ್ಳಲು ಬುದ್ಧಿ ಸಾಲದ ಕಾರಣ ಈ ಪ್ರಸಂಗವನ್ನು ಈ ಮನುಷ್ಯ ಕಲ್ಪಿಸಿದಂತೆ, ಮತ್ತೆ ಯಾರೋ ಇದನ್ನು ಬೇರೆ ರೀತಿಯಲ್ಲಿ ಬೆಳೆಸಿದರು. ಇವರು ಶಿವ ದೊಡ್ಡವನು ಎಂಬ ನಂಬಿಕೆಯ ಜನ

ಇರಬೇಕು. ಇವರ ಕಥನದ ಪ್ರಕಾರ ಶಿವ ಮೋಹಿನಿಯನ್ನು ಅಟ್ಟಿಸಿಕೊಂಡು ಹೋಗಿ ಹಿಡಿದೇ ಬಿಟ್ಟ, ಅವಳೊಡನೆ ಸಹವಾಸ ಮಾಡಿದ, ಇದರ ಫಲವಾಗಿ ಮೋಹಿನಿ ಒಬ್ಬ ಮಗನನ್ನು ಹೆತ್ತಳು. ಅವನು ಅಯ್ಯಪ್ಪ; ಶಾಸ್ತಾ. ಕೇರಳದ ಶಬರಿಮಲೆಯ ದೇವಾಲಯದಲ್ಲಿ ಈಗ ಪೂಜೆ ಪಡೆಯುತ್ತಿದ್ದಾನೆ. ಶಿವ ಆಶೆಯಿಂದಓಡಿ ಭಂಗಪಟ್ಟಿದ್ದನ್ನು ಭಾಗವತ ವರ್ಣಿಸುವಂತೆ, ಮೋಹಿನಿಯನ್ನು ಹಿಡಿದು, ಆ ಮೂರ್ತಿಯೊಡನೆ ಕೂಡಿದ ಪ್ರಸಂಗವನ್ನು ಯಾವುದಾದರೂ ಪುರಾಣ ಹೇಳಿದೆಯೋ ನನಗೆ ತಿಳಿಯದು. ಹೀಗೆಂದು ಹೇಳಿ ಒಂದು ಪುರಾಣ ಇದ್ದರೆ ಆಶ್ಚರ್ಯವಿಲ್ಲ. ಶಿವ, ಭಾಗವತ ಹೇಳಿದಂತೆ ಭಂಗಪಡಲಿಲ್ಲ, ಒಬ್ಬ ಮಗಳನ್ನು ಪಡೆದ, ಎಂದು ಹೇಳಿ ಶಿವನ ಭಕ್ತ, ಭಾಗವತದ ಶ್ಲೋಕವನ್ನು ರಚಿಸಿದ ಕವಿಯಂತೆ, ತಾನೂ ಕೆಲವು ಶ್ಲೋಕಗಳನ್ನು ರಚಿಸಿದ ಎಂದಾಯಿತು. ಆ ಪ್ರಸಂಗಕ್ಕೆ ಅನ್ವಯಿಸುವ ಮಾತೆಲ್ಲ ಈ ಪ್ರಸಂಗಕ್ಕೂ ಅನ್ವಯಿಸುತ್ತದೆ. ಇಂಥ ರಚನೆ ಇದೆಯಾದರೆ ಅದು ತೀರ ಹೊಸಕಾಲದ ರಚನೆ ಇರಬೇಕು. ಅಯ್ಯಪ್ಪನ ಮಾತು ಕೇರಳದಲ್ಲಿ ಮಾತ್ರ ಪ್ರಚಾರದಲ್ಲಿದೆ ಬೇರೆ ಎಲ್ಲಿಯೂ ಕೇಳಿಬರುವುದಿಲ್ಲ. ಮಲೆಯಾಳಿ ಕವಿ ಒಬ್ಬಾತ ಇದನ್ನು ರಚಿಸಿರಬೇಕು.

ವಿಷ್ಣುವಿನ ಕರುಣೆಯನ್ನು ಒಂದು ಹೆಣ್ಣು ಎಂದು ಭಾವಿಸಿ, ಲಕ್ಷ್ಮಿ ಎಂದು ತಾಯಾಗಿ ವೈಷ್ಣವರು ಸೃಷ್ಟಿಸಿಕೊಂಡಂತೆ, ಬ್ರಹ್ಮನವಾಕ್‌ಶಕ್ತಿಯನ್ನು ಒಂದು ಹೆಣ್ಣಾಗಿ ಭಾವಿಸಿ, ನಮ್ಮ ಪೂರ್ವಿಕರು ಸಾಹಿತ್ಯ ಮುಂತಾದ ಸುಂದರ ಕಲೆಗಳ ಅಭಿಮಾನಿ ದೈವ ಸರಸ್ವತಿಯನ್ನು ನಿರ್ಮಿಸಿಕೊಂಡರು ಸರಸ್ವತಿ ಯನ್ನು ಕುರಿತ ನಮ್ಮ ಹಿರಿಯರ ಈ ಕಲ್ಪನೆ ತುಂಬ ಸುಂದರವಾದದ್ದು, "ಯಾ ಕುಂದೇಂದುತುಷಾರಹಾರಧವಳಾ" ಎಂದು ಆರಂಭವಾಗುವ ಸ್ತೋತ್ರ ವನ್ನು ನಾವೆಲ್ಲ ಕೇಳಿದ್ದೇವೆ. ಸರಸ್ವತಿ ಮೊಲ್ಲೆ, ಚಂದ್ರ, ಮಂಜು ಇವುಗಳಂತೆ ಧವಳಾ, ಶುಭ್ರ ವಸ್ತ್ರವನ್ನು ಧರಿಸಿದ್ದಾಳೆ. ವೀಣೆಯ ದಂಡ ಅವಳ ಕೈಯಲ್ಲಿ ಒಂದು ಭೂಷಣವಾಗಿ ಕಾಣುತ್ತಿದೆ ಅದನ್ನು ಹಿಡಿದು ದೇವಿ ಬಿಳಿಯ ತಾವರೆಯ ಪೀಠದ ಮೇಲೆ ಕುಳಿತಿದ್ದಾಳೆ. ಬ್ರಹ್ಮ ವಿಷ್ಣು ಮಹೇಶ್ವರರು ಆಕೆಯನ್ನು ಸದಾ ಪೂಜಿಸುತ್ತಿದ್ದಾರೆ. ದೇವಿ ಎಲ್ಲ ಜಡತೆಯನ್ನು ನಿವಾರಿಸುವ ಶಕ್ತಿ. 'ವಾಕ್‌ಶಕ್ತಿ'ಯನ್ನು ಒಂದು ಮೂರ್ತಿಯಾಗಿ ಹೀಗೆ ಕಲ್ಪಿಸಿಕೊಳ್ಳು ವುದು ಚೆನ್ನವೇ, ಅಡ್ಡಿಯಿಲ್ಲ. ಆದರೆ ಶಕ್ತಿಯನ್ನು ಹೀಗೆ ಹೆಣ್ಣು ಎಂದ

ಬುದ್ಧಿ ಮುಂದಕ್ಕೆ ಹೋಗಿ, ಈ ಹೆಣ್ಣು ಬ್ರಹ್ಮನ ಮಗಳು, ಮಗಳ ತುಂಬು ಚೆಲುವಿನ ರೂಪಕ್ಕೆ ಮೋಹಗೊಂಡು ಅವನು ಅವಳ ಸಹವಾಸವನ್ನು ಬಯಸಿದ, ಮಗಳು ಓಡಿದಳು. ತಂದೆ ಅಟ್ಟಿಸಿಕೊಂಡು ಹೋದ, ಅವಳು ಶಿವನನ್ನು ಮರೆ ಹೊಕ್ಕಳು, ಶಿವ ಬ್ರಹ್ಮನ ತಲೆಯನ್ನು ಕಡಿದ, ಕಡಿದ ತಲೆಯನ್ನು ಕಪಾಲ ಮಾಡಿಕೊಂಡು ತನ್ನ ಭಿಕ್ಷಾಟನದಲ್ಲಿ ಉಪಯೋಗಿಸಿದ, ಎಂದು ಪುರಾಣ ಒಂದು ಕಥೆಯನ್ನು ಹೇಳಿದೆ. ಸರಸ್ವತಿಯನ್ನು ಹೆಣ್ಣೆಂದು ವರ್ಣಿಸಿದೆಯಾದರೂ ಪಂಪನಂಥ ಬಲ್ಲ ಕವಿ, ನುಡಿ ಎಂಬ ಶಕ್ತಿ ಒಂದು ಹೆಣ್ಣು ಅಲ್ಲ ಎಂದು ಹೇಳಿದ್ದುಂಟು ಹೆಣ್ಣು ಅಲ್ಲದ ತತ್ವ ಒಂದು ಉಕ್ತಿಯ ಅಲಂಕಾರಕ್ಕಾಗಿ ಹೆಣ್ಣು ಎಂದು ಭಾವಿಸಿದ ಮಾತ್ರಕ್ಕೆ, ಬ್ರಹ್ಮನನ್ನು ಮಗಳ ವಿಷಯದಲ್ಲಿ ಮೋಹಗೊಳ್ಳುವ ಪಾಪಿಷ್ಠ ತಂದೆಯನ್ನಾಗಿಮಾಡಿ, ಶಿವನಿಂದ ಅವನ ತಲೆ ಯನ್ನು ಕಡಿಸಿರುವ ಕಥೆ ವಿವೇಚನೆಯ ಕೃತಿ ಅಲ್ಲ ಎನ್ನಬೇಕು ಬ್ರಹ್ಮ ವಿಷ್ಣು ಶಿವ, ಸೃಷ್ಟಿ ಸ್ಥಿತಿ ಲಯಕ್ಕಾಗಿ ಪರತತ್ವ ಧರಿಸಿರುವ ಮೂರು ರೂಪು. ಇದು ಪರಂಪರೆ ಸ್ಪಷ್ಟವಾಗಿ ಹೇಳಿರುವ ಸಂಗತಿ. ಒಂದು ಪರತತ್ವದ ಮೂರು ರೂಪಗಳಲ್ಲಿ ಒಂದು ಇನ್ನೊಂದರ ತಲೆಯನ್ನು ಕಡಿಯಿತು ಎನ್ನುವುದು ಮೂಲ ಸತ್ಯವನ್ನು ಬಲ್ಲ ಮನಸ್ಸಿಗೆ ಸಾಧ್ಯವಿಲ್ಲ

## ಮೂಲದ ಕವಿಯ ದೃಷ್ಟಿ

ಮೂಲದ ಕವಿಗಳು ಒಂದು ಸಂಕೇತವನ್ನು ಮನಸ್ಸಿನಲ್ಲಿಟ್ಟುಕೊಂಡು ರಚಿಸಿದ ಕೃತಿಗಳನ್ನು ವ್ಯವಹಾರದ ದಿಟವಾದ ಸಂಗತಿಗಳು ಎಂದು ತಿಳಿದಿದ್ದರ ಪ್ರಭಾವ ಈ ಸಂಗತಿಗಳನ್ನು ಕುರಿತ ಆಮೇಲಿನ ಈ ಬರಹಗಳಲ್ಲಿ ಕಾಣುತ್ತದೆ. ಜೀವಾತ್ಮ ಪರಮಾತ್ಮ ಆದ ರಾಧಾಕೃಷ್ಣರ ಪ್ರಣಯವನ್ನು ಜಯದೇವಕವಿ ಸಾಮಾನ್ಯ ಮಾನವ ಮಾನವಿ ಮಧ್ಯದ ದೈಹಿಕ ಸಂಬಂಧವಾಗಿ ವರ್ಣಿಸಿದ್ದಾನೆ. ಶ್ರೀಕೃಷ್ಣ ಕರ್ಣಾಮೃತದ ಕವಿ ಎಳೆಯಮಗು ಕೃಷ್ಣ ತಾಯ ಜೊತೆಯ ಹೆಣ್ಣು ಮಕ್ಕಳು ತನ್ನನ್ನು ಎತ್ತಿಕೊಂಡಾಗ, ಅವರೊಡನೆ ಬೆಳೆದ ವಯಸ್ಸಿನ ಪುಂಡನೊಬ್ಬನ ಚೇಷ್ಟೆಗಳನ್ನು ಮಾಡಿದನೆಂದು ವರ್ಣಿಸಿದ್ದಾನೆ. ಹರಿದಾಸ ಸಂಪ್ರದಾಯದ ಹಾಡು ಒಂದು ಕೃಷ್ಣ ಒಬ್ಬ ಸಂಸಾರಿ ಹೆಣ್ಣುಮಗಳ ಜೊತೆಗಿರಲು ಬಂದಂತೆ, ಅವಳು ಅವನಿಗೆ, "ಸದ್ದುಮಾಡಬೇಡ, ಮನೆಯ

ಜನಕ್ಕೆ ನೀನು ಬಂದದ್ದು ತಿಳಿಯುತ್ತದೆ" ಎಂದು ಹೇಳಿದಂತೆ ಕೃಷ್ಣನನ್ನು ವರ್ಣಿಸುತ್ತದೆ ಹೊಸಕಾಲದ ನಮ್ಮ ಕವಿ ಒಬ್ಬರು ರಾಸಕ್ರೀಡೆಗೆ ಹೊರಟ ಮಕ್ಕಳು ಗಂಡನನ್ನು ಮರೆ, ಮಕ್ಕಳನ್ನು ತೊರೆ ಎಂದು ಹೊರಟರು ಎಂದು ವರ್ಣಿಸಿದ್ದಾರೆ. ಇದಿಷ್ಟೂ ಸಾಹಿತ್ಯದ ಒಂದು ಸಂಕೇತವನ್ನು ಸಂಕೇತವೆಂದು ಕಾಣದ್ದರ ಪರಿಣಾಮ.

## ದೇವರನ್ನು ಕುರಿತ ಭಾವಗಳ ಮಧ್ಯೆ ಸ್ಪರ್ಧೆ

ನಮ್ಮ ಧರ್ಮವನ್ನು ಬಹುಕಾಲದಿಂದ ಕಾಡುತ್ತ ಬಂದಿರುವ ಒಂದು ಕೇಡು ಶಿವ ವಿಷ್ಣು ಇವರ ಮಧ್ಯೆ ಯಾರು ಹೆಚ್ಚು ಎನ್ನುವ ಪ್ರಶ್ನೆ. ಈ ವಿಷಯದ ಕಥೆ ಕೆಲವದರ ಮಾತನ್ನು ಈ ಮುನ್ನ ಹೇಳಿದೆ ಪರತತ್ವವನ್ನು ಶಿವ ವಿಷ್ಣು ಎಂಬ ಎರಡು ಹೆಸರುಗಳಿಂದ ಕರೆದದ್ದು ಶ್ರುತಿಯಲ್ಲಿ ಕಾಣುತ್ತದೆ. ಹಾಗೆ ಕರೆಯುವಲ್ಲಿ ಶಿವನಾಗಲಿ ವಿಷ್ಣುವಾಗಲಿ ಹೆಚ್ಚು ಎನ್ನುವ ಉದ್ದೇಶ ಇರಲಿಲ್ಲ. ವಿಷ್ಣುವನ್ನು ಕುರಿತಾದ ಮಂತ್ರ ವಿಷ್ಣು ಸರ್ವಶ್ರೇಷ್ಠ ಎನ್ನುವಂತಿರುತ್ತದೆ. ಶಿವನನ್ನು ಕುರಿತ ಮಂತ್ರವೂ ಹಾಗೆಯೇ "ಏಕಂ ಸತ್ ವಿಪ್ರಾಃ ಬಹುಧಾವದಂತಿ" ಎಂಬ ವಾಕ್ಯದಲ್ಲಿ ಅಗ್ನಿ ವರುಣ ಮರುತ್ ಇತ್ಯಾದಿ ದೈವವಾಚಕ ಶಬ್ದಗಳೆಲ್ಲ ಒಂದೇ ಪರವಸ್ತುವನ್ನು ನಿರ್ದೇಶಿಸುತ್ತವೆ ಎನ್ನುವುದು ಸ್ಪಷ್ಟವಾಯಿತು ನಾರಾಯಣೋಪನಿಷತ್ತು ನಾರಾಯಣನನ್ನು "ಶಾಶ್ವತಂ ಶಿವಂ ಅಚ್ಯುತಂ" ಎಂದು ವರ್ಣಿಸಿದೆ. ಅದರ ಕೊನೆಯ ಮಂತ್ರಗಳು "ನೀವಾರಶೂಕವತ್ತನ್ವೀ ಪೀತಾಭಾಸ್ವತ್ಯಣೂಪಮಾ, ತಸ್ಯಾಃ ಶಿಖಾಯಾಃ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ಸ ಬ್ರಹ್ಮಾ, ಸ ಶಿವಸ್ಸೇಂದ್ರಃ ಸೋಕ್ಷರಃ ಪರಮಸ್ಸ್ವರಾಟ್" ಮಂತ್ರದ ಮೂಲ ಹೀಗೆಂದೇ ಇರಬೇಕು. ಅದು ಈಗ ಕೆಲವು ಪಾಠಗಳಲ್ಲಿ "ಸ ಬ್ರಹ್ಮಾ, ಸ ಶಿವಃ ಸ ಹರಿಃ ಸೇಂದ್ರ, ಸೋಕ್ಷರಃ ಪರಮ ಸ್ವರಾಟ್" ಎಂತ ಆಗಿದೆ. ಹರಿ, ನಾರಾಯಣ, ಪರಮಾತ್ಮ ಎನ್ನುವಾಗ ಸ ಹರಿ, ಎಂದು ಹೇಳುವ ಕಾರಣ ಇಲ್ಲ. ಹರಿ, ಬ್ರಹ್ಮ, ಶಿವ, ಇಂದ್ರ ಇವರ ಜೊತೆಗೆ ಏಕಮೂರ್ತಿಯಾಗಿ ಇದ್ದಾನೆ ಎನ್ನುವಲ್ಲಿ, ಆ ಏಕಮೂರ್ತಿಯಲ್ಲಿ ಹರಿ ಇದ್ದಾನೆ ಎಂದು ಬೇರೆ ಹೇಳಬೇಕಾದ್ದೇನೂ ಇಲ್ಲ. ಆದರೆ ಅಕ್ಷರಗಳನ್ನು ಸೇರಿಸಿದ ಕಾಲಕ್ಕೆ ಹರಿ ಶಿವ ಬೇರೆ ಎಂದು ತಿಳಿದಿದ್ದ ಸಮುದಾಯ

ಒಂದು ಇದ್ದಿತು. ಆ ಸಮುದಾಯದ ಒಬ್ಬ ಪ್ರತಿನಿಧಿ "ಹರಿ ಶಿವನನ್ನು ಒಳಗೊಂಡಿದ್ದಾನೆ ಎನ್ನುವಲ್ಲಿ ಹರಿ ಮುಖ್ಯನಾಗಿ ಬಿಡುತ್ತಾನೆ ಶಿವ ಅವನೊಡನೆ ಇರುವ ಕಡಮೆಯ ವಸ್ತು ಆಗುತ್ತಾನೆ," ಎಂಬ ಭಯದಿಂದ ಇರಬೇಕು, ಈ ಅರುಚಿಯ ಸ್ಥಿತಿಯನ್ನು ತಪ್ಪಿಸುವುದಕ್ಕೆ ಸಹರಿಃ ಎಂಬ ಅಕ್ಷರಗಳನ್ನು ಮಂತ್ರದಲ್ಲಿ ಸೇರಿಸಿ ಇದ್ದಾನೆ ಹಚ್ಚಿನ ಈ ಅಕ್ಷರಗಳು ಶ್ಲೋಕ ವನ್ನು ಕೆಡಿಸುತ್ತವೆ ಆದರೆ ಶಿವನನ್ನು ಕಡಮೆಯ ಸ್ಥಳದಿಂದ ಎತ್ತಬೇಕು, ಅದಕ್ಕಾಗಿ ಹರಿಯನ್ನೂ ಅವನ ಜೊತೆಗೆ ನಿಲ್ಲಿಸಬೇಕು, ಎನ್ನುವ ಅಪೇಕ್ಷೆಯಲ್ಲಿ ಈ ಅಕ್ಷರಗಳನ್ನು ಸೇರಿಸಿದ ಶಿವಭಕ್ತ ಶ್ಲೋಕದ ಛಂದಸ್ಸನ್ನು ಕೆಡಿಸುವುದಕ್ಕೆ ಹಿಂಜರಿಯಲಿಲ್ಲ ಬರಬರುತ್ತ ಈ ಮನೋಧರ್ಮ ಬೆಳೆಯುತ್ತಾ ಹೋಯಿತು ಶಿವಭಕ್ತರು ವಿಷ್ಣುಭಕ್ತರು ನಮ್ಮ ದೇವರು ಬೇರೆ ನಿಮ್ಮ ದೇವರು ಬೇರೆ ಎಂದು ಎರಡು ಬಣ ಆದರು ಒಂದೊಂದು ಬಣವೂ ತನ್ನ ದೇವರ ಪಾರಮ್ಯವನ್ನು ಸ್ಥಾಪಿಸುವುದಕ್ಕೆ ಎದುರಾಳಿಯ ದೇವರನ್ನು ನಿಕೃಷ್ಟ ಎಂದು ಹೇಳಿತು ಒಂದು ಘಟ್ಟದಲ್ಲಿ ಈ ವೈಷಮ್ಯ ಎಷ್ಟು ದೂರಹೋಯಿತು ಎನ್ನುವುದು ನಮಗೆ ರಾಮಾಯಣದಲ್ಲಿ ಕಾಣುತ್ತದೆ ಶ್ರೀರಾಮ ಸೀತೆಯನ್ನು ಮದುವೆಯಾದಾಗ ಒಂದು ಧನುಸ್ಸಿಗೆ ಹೆದೆಯೇರಿಸಿದನು ಹಾಗೆ ಮಾಡು ವುದರಲ್ಲಿ ಧನುಸ್ಸು ಮುರಿಯಿತು. ಅದು ಮುರಿಯಿತೆಂದು ಕೇಳಿ ಪರಶುರಾಮ ಅವನನ್ನು ಕಾಣಲು ಬಂದನು. ತನ್ನ ಹತ್ತಿರ ಇದ್ದ ಇನ್ನೊಂದು ಧನುಸ್ಸನ್ನು ಅವನಿಗೆ ಕೊಟ್ಟು, ಇದರ ಹೆದೆಯನ್ನು ಏರಿಸು ನೋಡೋಣ, ಎಂದನು. ರಾಮ ಇದಕ್ಕೂ ಹೆದೆಯನ್ನು ಏರಿಸಿದನು. ಈ ಧನುಸ್ಸು ಮುರಿಯಲಿಲ್ಲ ಇದು ವಿಷ್ಣು ಧನುಸ್ಸು. ಆ ಮೊದಲು ಹರಿ ಹರರಲ್ಲಿ ಯಾರು ಹೆಚ್ಚು ಎನ್ನುವ ಪ್ರಶ್ನೆ ಒಂದು, ದೇವತೆಗಳು ಇವರನ್ನು ಒಂದು ಕಾಳಗದಲ್ಲಿ ತೊಡಗಿಸಿದ್ದರು ಆಗ ಶಿವಧನುಸ್ಸು ಊನವಾಯಿತು, ವಿಷ್ಣುಧನುಸ್ಸು ಭದ್ರವಾಗಿಯೇ ಇದ್ದಿತು ಆದ್ದರಿಂದ ದೇವತೆಗಳು ಶಿವನಿಗಿಂತ ವಿಷ್ಣು ಅಧಿಕ ಎಂದು ತಿಳಿದರು ಇದು ರಾಮಾಯಣದಲ್ಲಿ ಒಂದು ಪ್ರಸಂಗ ಈ ಪ್ರಸಂಗ ಪ್ರಕ್ಷಿಪ್ತ ಎನ್ನುವುದು ಆ ಸರ್ಗಗಳನ್ನು ಓದುತ್ತಿರುವಂತೆ ಸ್ಪಷ್ಟವಾಗಿ ಕಾಣುತ್ತದೆ. ಆದರೇನು ? ಪ್ರಕ್ಷೇಪ ಮಾಡಿರುವವನು ಮಾಡಿಯೇ ಬಿಟ್ಟ; ತನ್ನ ದೇವರು ಹೆಚ್ಚು ಎಂಬ ಪ್ರಮಾಣವನ್ನು ರಾಮಾಯಣದಲ್ಲಿ ಒಂದು ಭಾಗವಾಗಿ ಸೇರಿಸಿಬಿಟ್ಟ. ಶೈವ

ಇದಕ್ಕೆ ಸೋಲಲಿಲ್ಲ. ಶ್ರೀರಾಮ ಲಂಕೆಗೆ ಹೋಗುವಾಗ, ಇಲ್ಲವೆ ರಾವಣನನ್ನು ಸಂಹರಿಸಿ ಹಿಂದಿರುಗಿ ಬರುವಾಗ, ಸಮುದ್ರದ ಇತ್ತಣ ತೀರದಲ್ಲಿ ಒಂದು ಶಿವಲಿಂಗವನ್ನು ಪ್ರತಿಷ್ಠೆ ಮಾಡಿದ ಎಂದು ಕಥೆಯನ್ನು ಕಟ್ಟಿದ, ಆ ಲಿಂಗ ರಾಮೇಶ್ವರಲಿಂಗ ಎಂದ, ಅದಕ್ಕೆ ಒಂದು ಆಲಯವನ್ನು ನಿರ್ಮಿಸಿ ಅದನ್ನು ರಾಮೇಶ್ವರ ದೇವಾಲಯ ಮಾಡಿದ. ಈ ಮುಯ್ಯಿಗೆ ಮುಯ್ಯಿ ವ್ಯಾಪಾರ ಎಷ್ಟುಕಾಲ ನಡೆಯಿತೋ; ಸಾಮಾನ್ಯ ವೈಷಮ್ಯ ಆಗಿದ್ದದ್ದು, ಒಂದು ಕಾಲಕ್ಕೆ ಎರಡು ಬಣಗಳ ಮಧ್ಯೆ ಪೂರ್ಣ ದ್ವೇಷವೇ ಆಯಿತು. ಶೈವರು ಪ್ರಬಲರಾಗಿದ್ದ ಚೋಳ ರಾಜ್ಯದಲ್ಲಿ ವೈಷ್ಣವ ಸಿದ್ಧಾಂತದ ಸ್ಥಾಪಕರಾದ ರಾಮಾನುಜಾಚಾರ್ಯರ ಶಿಷ್ಯರಿಗೆ ಆಚಾರ್ಯರು ಆ ರಾಜ್ಯದಲ್ಲಿ ನಿಲ್ಲುವುದು ಅಪಾಯ ಎನ್ನಿಸಿತು ಶಿಷ್ಯರು ಅವರನ್ನು ಅಪಾಯದಿಂದ ತಪ್ಪಿಸಲು ಹೊಯ್ಸಲನಾಡಿಗೆ ಕರೆದುತರಬೇಕಾಯಿತು. ಅದುವರೆಗೆ ಚಿದಂಬರದಲ್ಲಿ ನಟರಾಜ, ಗೋವಿಂದರಾಜ, ಶೈವ ವೈಷ್ಣವ ಎರಡು ದೇವಾಲಯ ಇದ್ದವು. ಗೋವಿಂದರಾಜದೇವಾಲಯವನ್ನು ಶೈವರು ಕೆಡಿಸಲು ಯೋಚಿಸಿದ್ದಾರೆಂದು ತಿಳಿದು ವೈಷ್ಣವರು ಗೋವಿಂದರಾಜನ ಮೂರ್ತಿಯನ್ನೇ ಆಲಯದಿಂದ ಕಳಚಿ ಉತ್ತರಕ್ಕೆ ಎತ್ತಿ ತಂದರು. ತಿರುಪತಿ ಮಲೆಯ ಅಡಿಯಲ್ಲಿ ಒಂದು ಕಡೆ ಅದನ್ನು ಪ್ರತಿಷ್ಠಿಸಿ, ಅಲ್ಲಿ ಗೋವಿಂದರಾಜಪುರವನ್ನು ನಿರ್ಮಿಸಿದರು, ಎಂದು ಕಥೆ ಇದೆ. ಇದು ಎಲ್ಲ ತಪ್ಪು ಎಂಬ ಭಾವವೂ ಬಲ್ಲ ಜನ ಅನೇಕರಲ್ಲಿ ಇದ್ದಿತು ಎಂದು ಕಾಣುತ್ತದೆ. ಮೊದಲುಮೊದಲು ವೈಷ್ಣವ ಭಕ್ತ ಆಳ್ವಾರುಗಳ ಪ್ರಬಂಧಗಳಲ್ಲಿ ಹರಿ, ಹರ, ಬ್ರಹ್ಮ ಮೂರೂ ತತ್ವ ಒಂದೇ ಭಾವ ಇದೆ ಹೀಗಿದ್ದೂ ರಾಮಾನುಜಾಚಾರ್ಯರ ಕಾಲಕ್ಕೆ ಶಿವ ಕಡಮೆ, ವಿಷ್ಣು ಹೆಚ್ಚು ಎಂದು ವೈಷ್ಣವ ಸಮುದಾಯ ತಿಳಿದಿತ್ತು ಎನ್ನುವುದು ಈ ಗುರುಗಳ ಚರಿತ್ರೆಯಿಂದ ಕಾಣುತ್ತದೆ. ಆದರೂ ಎರಡೂ ತತ್ವ ಒಂದೇ ಎಂದು ಹೇಳುವ ಸಂಪ್ರದಾಯವೂ ಬಲಗೊಳಿಸುತ್ತಾ ಬೆಳೆಯಿತು, ಭಾಗವತ ಎಂಬ ಹೆಸರಿನ ಒಂದು ಪಂಥವಾಗಿ ರೂಪುಗೊಂಡಿತು. ಈ ಜನ ಶಿವ ವಿಷ್ಣು ಒಂದೇ ಎಂಬ ಭಾವನೆಯನ್ನು ಮುಖ್ಯ ಸೂತ್ರವಾಗಿ ಸ್ವೀಕರಿಸಿದರು. ಮಹಾಭಾರತದಲ್ಲಿ ರುದ್ರೋ ನಾರಾಯಣಶ್ಚೈವ ತತ್ವಮೇಕಂ ದ್ವಿಧಾಕೃತಂ ವಾಕ್ಯದ ಜೊತೆಗೆ ಶಂಕರನು "ನನ್ನನ್ನೂ ವಿಷ್ಣುವನ್ನೂ ಬೇರೆ ಎನ್ನುವ ಜನ ನನಗೆ ಸಮ್ಮತವಲ್ಲ" ಎಂದು ಹೇಳಿದ್ದರ ಉಲ್ಲೇಖ

ಇದೆ. ಆದರೂ ಕೃಷ್ಣ ತಪಸ್ಸುಮಾಡಿ ಶಿವನನ್ನು ಒಲಿಸಿ ಚಕ್ರಾಯುಧವನ್ನು ಅವನಿಂದ ವರವಾಗಿ ಪಡೆದನು ಎಂಬ ಕಥೆಯೂ ಭಾರತದಲ್ಲಿ ಬರುತ್ತದೆ. ಇರುತ್ತ ಭಾಗವತ ಪಂಥ ಈ ತತ್ವ ಎರಡೂ ಒಂದು ಎನ್ನುವ ಭಾವವನ್ನು ಮುಖ್ಯಮಾಡಿ, ದೇವರಿಗೆ ಹರಿಹರ, ಶಂಕರನಾರಾಯಣ, ಶಿವರಾಮ ಮುಂತಾದ ಹೆಸರುಗಳನ್ನು ಬಳಕೆಗೆ ತಂದಿತು

ಬಸವಣ್ಣನವರು ವೀರಶೈವ ಮತವನ್ನು ಪ್ರತಿಷ್ಠಾಪಿಸಿದ ಕಾಲಕ್ಕೆ ಅದರ ಅನುಯಾಯಿಗಳಲ್ಲಿ ಶಿವನೇ ದೈವ, ಹರಿ ಅಥವಾ ನಾರಾಯಣ ಏನೂ ಅಲ್ಲ ಎನ್ನುವ ಜನ ಪ್ರಬಲರಾಗಿದ್ದುದು ಕಾಣುತ್ತದೆ ಬಸವಣ್ಣನವರ ವಚನಗಳಲ್ಲಿ "ದೇವರೊಬ್ಬ, ನಾಮ ಹಲವು" ಎಂಬ ಉದಾರ ಭಾವದ ವಚನದೊಂದಿಗೆ, "ನಾರಾಯಣ ಗೀರಾಯಣನನ್ನು ಕಾಣೆ" ಎನ್ನುವ ವೈಷ್ಣವ ಮತವನ್ನು ಕುರಿತ ಅಸಹನೆಯ ವಾಕ್ಯವೂ ಸೇರಿದೆ. ಮೊದಲು ವಾಕ್ಯವನ್ನು ಹೇಳಿದ ಪ್ರಾಜ್ಞ ಎರಡನೆಯ ವಾಕ್ಯವನ್ನು ಹೇಳಿರಲಾರ ಎಂದು ನಮಗೆ ತೋರಬೇಕು. ಈ ವಾಕ್ಯ ಬಸವಣ್ಣನವರಿಗೆ ಇತರರು ಆರೋಪಿಸಿದ ವಾಕ್ಯ ಎಂದರೆ ತಪ್ಪಾಗ ಲಾರದು. ವಾಕ್ಯ ಪ್ರಕ್ಷಿಪ್ತ ಎನ್ನುವುದಾದರೂ, ಆಗ ಇಂಥ ಅಸಹನೆಯ ಜನರೂ ತಕ್ಕಷ್ಟು ಸಂಖ್ಯೆಯಲ್ಲಿ ಇದ್ದರು ಎನ್ನುವುದು ಸ್ಪಷ್ಟ. ಆಮೇಲಿನ ಕಾಲದ ಕುಮಾರವ್ಯಾಸ ಲಕ್ಷ್ಮೀಶ ಕವಿಗಳು, ಶಿವ ವಿಷ್ಣುಗಳ ಮಧ್ಯೆ ಭೇದವನ್ನು ಎಣಿಸಬಾರದು ಎಂದೇ ಹೇಳಿದರು. ಅಲ್ಲಿಂದೀಚೆಗೆ, ಶತಮಾನಗಳಲ್ಲಿ ಶೈವರು ವೈಷ್ಣವರು ಒಬ್ಬರೊಡನೊಬ್ಬರು ಕಾದದೆ ಬಾಳಿ ಬಂದಿದಾರೆ. ಆದರೂ ಸದ್ಯದಲ್ಲಿ ನಮ್ಮ ಸಮಾಜದಲ್ಲಿ ಶಿವ ವಿಷ್ಣು ಬೇರೆ ದೇವರುಗಳು ಎನ್ನುವ ಭಾವವೇ ವಾಡಿಕೆ ಆಗಿ, ಸನಾತನ ಧರ್ಮ ಒಂದು ಸಂಕಟದಲ್ಲಿ ಸಿಕ್ಕಿಕೊಂಡಿದೆ.

## ಮಧ್ಯಸ್ಥಿಕೆಯ ಯತ್ನಗಳು

ಇಂದಿನ ನಮ್ಮ ಜನತೆ ಗುರು ಎಂದು ಅಂಗೀಕರಿಸುವ ಪರಂಪರೆಯಲ್ಲಿ ಶಂಕರಾಚಾರ್ಯರು ಹಿರಿಯರು. ಅವರ ಬಳಿಕ ರಾಮಾನುಜರು, ಆ ಬಳಿಕ ಆನಂದತೀರ್ಥರು, ಆ ಬಳಿಕ ಬಸವಣ್ಣನವರು ಬಂದರು. ಶಂಕರಾಚಾರ್ಯರು ಶಿವನನ್ನು ಕುರಿತ ಸ್ತೋತ್ರಗಳನ್ನು ರಚಿಸಿರುವಂತೆ ವಿಷ್ಣುವನ್ನು ಕುರಿತೂ ಸ್ತೋತ್ರಗಳನ್ನು ರಚಿಸಿದ್ದಾರೆ. ಅವರ ಭಜ

ಗೋವಿಂದಂ ಸ್ತೋತ್ರವಂತೂ ಈಗಲೂ ಸಾಮಾನ್ಯರ ಬಾಯಲ್ಲೂ ನಲಿಯುವ ಸ್ತೋತ್ರ. ಇದಕ್ಕೆ ತಕ್ಕಂತೆ ಆಚಾರ್ಯರ ಅದ್ವೈತ ಮತದ ಅನುಯಾಯಿ ಸಮುದಾಯ ಶಿವನನ್ನು ಮುಖ್ಯ ಎಂದು ಎಣಿಸುತ್ತಾ ವಿಷ್ಣುವನ್ನು ಹತ್ತಿರ ಹತ್ತಿರ ಅಷ್ಟೇ ಮುಖ್ಯ ಎಂಬಂತೆ ಕಾಣುತ್ತದೆ ಶ್ರೀವೈಷ್ಣವರು ಶಿವನನ್ನು ವಿಷ್ಣುವಿಗೆ ಸಮ ಎಂದು ಒಪ್ಪುವುದಿಲ್ಲ. ದ್ವೈತಮತದ ಅನುಯಾಯಿಗಳು ಈಶ್ವರನನ್ನು ವಿಷ್ಣುವಿನ ಭಕ್ತ ಎಂದು ಪೂಜಿಸುತ್ತಾರೆ ಎಂದು ಕಾಣುತ್ತದೆ. ಶಿವಾಚಾರದವರು ತಮ್ಮ ಮತದಲ್ಲಿ ವಿಷ್ಣುವಿಗೆ ಯಾವ ಸ್ಥಾನವನ್ನೂ ಕೊಡುತ್ತಿಲ್ಲ. ಇದರಿಂದ ಒಂದು ಧರ್ಮದ ನಾಲ್ಕು ಜನಸಮುದಾಯಗಳು ತಮ್ಮದೇ ಸರಿಯಾದ ನಿಲುವು ಎಂದು ಹಟ ಮಾಡುತ್ತ ಇತರ ಜನರೊಂದಿಗೆ ಬೆರೆಯದೆ ಬೇರೆಬೇರೆಯಾಗಿ ಬಾಳುತ್ತಿವೆ. ಇದು ಚೆನ್ನವಲ್ಲ ಚೆನ್ನ ಅಲ್ಲ ಎನ್ನುವುದನ್ನು ಸ್ವಲ್ಪವಾದರೂ ತಿಳುವಳಿಕೆಯುಳ್ಳ ಜನವೆಲ್ಲ ಒಪ್ಪುತ್ತಾರೆ. ಆಯಿತು, ಇದನ್ನು ಸರಿಪಡಿಸುವುದು ಹೇಗೆ? ಇದು ಈಗ ದೊಡ್ಡ ಸಮಸ್ಯೆ ಆಗಿ ನಿಂತಿದೆ. ಸಮಾಜದ ಕ್ಷೇಮವನ್ನು ಬಯಸುವ ಗುರುಗಳು ಈ ಸ್ಥಿತಿಯನ್ನು ತಿದ್ದಲು ಯತ್ನಿಸಿದ್ದುಂಟು. ಶ್ರೀವೈಷ್ಣವರಲ್ಲಿ ಸಿದ್ಧಾಂತ ಸ್ಥಾಪಕರಾದ ರಾಮಾನುಜಾಚಾರ್ಯರ ಬಳಿಕ ಅತ್ಯಂತ ದಕ್ಷರೆಂದು ಖ್ಯಾತರಾಗಿ ವೇದಾಂತ ದೇಶಿಕ ಎಂಬ ಹೆಸರಿಂದ ಪೂಜೆ ಪಡೆಯುತ್ತಿರುವ ಗುರು ವೆಂಕಟನಾಥರೂ, ಅದ್ವೈತ ಸಿದ್ಧಾಂತದ ಪರಂಪರಯಲ್ಲಿ ಬಹು ಶ್ರೇಷ್ಠರೆಂದು ಹೆಸರು ಪಡೆದಿರುವ ಅಪ್ಪಯ್ಯ ದೀಕ್ಷಿತರೂ ಸಮಕಾಲೀನರು. ಅಪ್ಪಯ್ಯ ದೀಕ್ಷಿತರು ಇಂಥ ಮಾತು ಬಂದಾಗ, "ಮಹೇಶ್ವರೇ ವಾ ಜಗದೀಶ್ವರೇ ವಾ ಜನಾರ್ದನೇ ವಾ ಜಗದಂತ-ರಾತ್ಮನಿ, ನ ವಸ್ತುಭೇದ ಪ್ರತಿಪತ್ತಿರಸ್ತಿ ಮೇ ತಥಾಽಪಿ ಚೇತಃ ತರುಣೇಂದು ಶೇಖರೇ", ಎಂದು ಹೇಳಿದರಂತೆ. ಎರಡು ರೂಪವೂ ಒಂದು ದೈವದ ರೂಪ. ಆದರೂ ದೀಕ್ಷಿತರ ಮನಸ್ಸು ಶಿವನ ಕಡೆ ಒಲಿಯಿತು. ಈ ಮಾತು ಬುದ್ಧಿಯ ಔದಾರ್ಯವನ್ನೂ ವಾಡಿಕೆಯ ರೂಪದ ವಿಷಯದಲ್ಲಿ ಮೋಹವನ್ನೂ ಸೂಚಿಸುತ್ತದೆ. ದೀಕ್ಷಿತರದು ಎಂತಹ ಉದಾರ ಬುದ್ಧಿ ನೋಡಿ ಎಂದು ಸ್ಮಾರ್ತ ಈ ಶ್ಲೋಕವನ್ನು ಹೇಳಿದರೆ, ವೈಷ್ಣವ, "ಅವನ ಪೂರ್ವಕರ್ಮ ಅವನ ಬುದ್ಧಿಯನ್ನು ತಪ್ಪು ಕಡೆಗೆ ಸೆಳೆಯಿತು ಎನ್ನುವುದು ಇದರಿಂದ ಕಾಣುತ್ತದೆ," ಎನ್ನುತ್ತಾನೆ. ಲಿಂಗಪುರಾಣದಲ್ಲಿ ಒಂದು ಕಥೆ ಬ್ರಹ್ಮ ವಿಷ್ಣು ಲಿಂಗದ ಆದಿ

ಮುಡಿ ಎಲ್ಲಿ ಎಂದು ನೋಡಲು ಹೊರಟರು, ಬ್ರಹ್ಮ ಹಂಸನಾಗಿ ಆಕಾಶಕ್ಕೆ ಹಾರಿದ, ವಿಷ್ಣು ವರಾಹನಾಗಿ ಭೂಮಿಯನ್ನು ಅಗೆಯತೊಡಗಿದ, ಅವನಿಗೆ ತಲೆಯನ್ನು ಮುಟ್ಟಲಾಗಲಿಲ್ಲ, ಇವನಿಗೆ ಅಡಿಯೂ ಸಿಕ್ಕಲಿಲ್ಲ. ಇದು ಈಶ್ವರ ಎಷ್ಟು ಶ್ರೇಷ್ಠ ಎನ್ನುವುದನ್ನು ತೋರಿಸಲು ಒಬ್ಬ ಶಿವಭಕ್ತ ನಿರ್ಮಿಸಿದ ಕಥೆ ಎನ್ನುವುದು ಸ್ಪಷ್ಟ. ಸಮಾಧಾನ ಅವಶ್ಯಕ ಎಂದು ಯೋಚಿಸಿ ಕಾವು ಕೋಟಿ ಪೀಠದ ಸ್ವಾಮಿಗಳು ಇದಕ್ಕೆ ಒಂದು ಅರ್ಥವನ್ನು ಹೇಳಿದ್ದುಂಟು "ನೋಡಿ, ಒಂದೇ ಶಿಲ್ಪದಲ್ಲಿ ಈಶ್ವರ, ಬ್ರಹ್ಮ, ವಿಷ್ಣು ಮೂವರೂ ಇದ್ದಾರೆ. ಮೂವರೂ ಒಂದೇ ಎಂದು ಹೇಳುವುದು ಕಥೆಯ ಉದ್ದೇಶ." ಇದು ಹೇಗೆ ಎನ್ನುವುದು ನಮ್ಮಂಥವರಿಗೆ ತಿಳಿಯುವುದಿಲ್ಲ ಸ್ವಾಮಿಗಳ ಮನಸ್ಸು ಒಳ್ಳೆಯದು. ಇರುತ್ತ ಈ ವಿವರಣೆ ಮೂಲಕಥೆಯ ಉದ್ದೇಶವನ್ನು ತಿದ್ದುವುದಿಲ್ಲ. ಇಂಥ ವೇಳೆ ಈ ವಿಷಯದಲ್ಲಿ ಬೇರೆ ಯಾರೋ ಮತ್ತೊಂದು ಸಮಾಧಾನ ಹೇಳಿದ್ದುಂಟು. "ರಾಮೇಶ್ವರ" ಎಂದರೆ, "ರಾಮನ ಈಶ್ವರ" ಎಂತಲೆ? ಹೀಗೆಂದರೆ ಈಶ್ವರ ರಾಮನ ಒಡೆಯ. ಎಂದಮೇಲೆ ಈಶ್ವರ ರಾಮನಿಗಿಂತ, ಎಂದರೆ ವಿಷ್ಣುವಿಗಿಂತ, ಹೆಚ್ಚು. ಇದು ಸರಿಯೇ ಎಂದು ದೇವತೆಗಳು ರಾಮ ಈಶ್ವರರನ್ನೇ ಕೇಳೋಣ ಎಂದು ಹೊರಟರಂತೆ ಆಗ "ರಾಮ ಸ್ತತ್ಪುರುಷಂ ಬ್ರೂತೇ ಬಹುವ್ರೀಹಿಣಮೀಶ್ವರಃ ಅತ್ರ ಪ್ರಾಜ್ಞಾನಾಂತು ದೇವಾನಾಂ ಸ್ವಯಂಭೂಃ ಕರ್ಮಧಾರಯಂ". ರಾಮ, ರಾಮೇಶ್ವರ ಪದದ ವಿಗ್ರಹವಾಕ್ಯ ರಾಮನ ಈಶ್ವರ" ಎಂದ ಈಶ್ವರ, "ರಾಮ ಯಾರಿಗೆ ಈಶ್ವರ, ಅವನು" ಎಂದ; ಎಂದರೆ ಈಶ್ವರನಿಗೆ ರಾಮ ಒಡೆಯ. ಹೀಗೆ ಇವನು ಅವನನ್ನು, ಅವನು ಇವನನ್ನು, ತನಗಿಂತ ಹೆಚ್ಚು ಎಂದು ಒಪ್ಪಿಕೊಂಡರು. ಇದರಿಂದ ದೇವತೆಗಳಿಗ ನಿರ್ಣಯ ದೊರೆಯಲಿಲ್ಲ. ಅವರು ಬ್ರಹ್ಮನ ಬಳಿಗೆ ಹೋಗಿ, ನಿವಾರಣೆ ಏನು ಎಂದು ಕೇಳಿದರು. ಅವನು, "ರಾಮ, ಈಶ್ವರ ಸಮ; ರಾಮ ಈಶ್ವರ ವಿಗ್ರಹವಾಕ್ಯ, ಎಂದರೆ ಇವನೂ ಅವನೂ ಒಂದೇ ಎಂದರ್ಥ," ಎಂದನು. ಇಷ್ಟೆಲ್ಲ ತೊಳಲಾಟ ಬೇಡ, ರಾಮ ಬೇರೆ, ಈಶ್ವರ ಬೇರ ಎಂಬ ಭಾವವೇ ತಪ್ಪು, ಇದನ್ನು ಬಿಡಿ, ಎಂದು ಈ ಹಿರಿಯರು ಯಾರೂ ಹೇಳುವುದಿಲ್ಲ. ಏಕೆ? ಅತ್ಯಂತ ಪ್ರಾಜ್ಞರಾದ ನನ್ನ ಸ್ನೇಹಿತರೊಬ್ಬರು "ಕ್ಷುದ್ರಾ ರುದ್ರ ಪಿತಾಮಹಪ್ರಭೃತಯಃ" ಎಂದು ವಿಷ್ಣುವಿನ ಎದುರಿಗೆ ರುದ್ರ ಕ್ಷುದ್ರ

ಎನ್ನುವ ವೈಷ್ಣವ ವಾಕ್ಯ ಎಷ್ಟು ಅನುಚಿತ ಎಂದದ್ದುಂಟು ಮತ್ತೊಬ್ಬರು "ಶ್ರೀರಾಮ ರಾಮರಾಮೇತಿ" ಎಂದು ಈಶ್ವರ ತನ್ನ ಪತ್ನಿಗೆ ರಾಮನನ್ನು ಹೊಗಳಿ ಹೇಳಿದ ಎನ್ನುವುದು ತಪ್ಪು ಎಂದು ಹೇಳಿದ್ದುಂಟು. ಇಂಥ ಮಾತು ಸಾಧುಗಳಾದ ಜನರಲ್ಲಿ ಕೂಡ ಅಸಮಾಧಾನಕ್ಕೆ ಎಡೆಕೊಡುತ್ತದೆ ಸನಾತನ ಧರ್ಮದಲ್ಲಿ ಈ ಮಾತುಗಳಿಗೆ ಎಡೆ ಇರಬಾರದು.

## ಕ್ಷೇತ್ರಗಳ ಕಥೆಗಳು

ಪುರಾಣಗಳು ದೇವರನ್ನು ಕುರಿತ ಕಥೆಗಳನ್ನು ನಿರ್ಮಿಸಿದಂತೆ ನಮ್ಮ ಪುಣ್ಯ ಕ್ಷೇತ್ರಗಳ ಇತಿಹಾಸಗಳೂ ಅನೇಕ ನಂಬಿಕೆಗಳನ್ನು ನಿರ್ಮಿಸಿವೆ.

ದಕ್ಷಿಣ ದೇಶದಲ್ಲೆಲ್ಲ ಬಹು ಪ್ರಸಿದ್ಧವಾದ ದೇವಾಲಯಗಳಲ್ಲಿ ತಿರುಪತಿ ವೆಂಕಟರಮಣಸ್ವಾಮಿಯ ಆಲಯವೂ ಒಂದು. ಇದು ತಮಿಳು ವೈಷ್ಣವ ಪರಂಪರೆಯ ಆಳ್ವಾರುಗಳ ಕಾಲದಲ್ಲೇ ವಿಖ್ಯಾತವಾಗಿದ್ದ ಕ್ಷೇತ್ರ. "ಇಲ್ಲಿ ಮೊದಲಲ್ಲಿ ವರಾಹಸ್ವಾಮಿಯ ದೇವಾಲಯವೊಂದಿತ್ತು. ಶ್ರೀನಿವಾಸ ಬಂದು ಕ್ಷೇತ್ರವನ್ನು ಅವನಿಂದ ಕಸಿದುಕೊಂಡ," ಎಂದು ಒಂದು ಐತಿಹ್ಯ ಈಗ ಕ್ಷೇತ್ರಕ್ಕೆ ಹೋಗುವ ಬಹುಜನ ವರಾಹಸ್ವಾಮಿಯ ಕ್ಷೇತ್ರ ಒಂದು ಅಲ್ಲಿ ಇದೆ ಎನ್ನುವುದನ್ನೇ ಕಾಣರು. ದೇವರ ಎರಡು ರೂಪಗಳಲ್ಲಿ ಒಂದು ಇನ್ನೊಂದರ ಸ್ಥಳವನ್ನು ಅಪಹರಿಸಿತು ಎನ್ನುವುದು ನೋಜಿಗದ ಮಾತು ಆದರೆ ಸ್ಥಳ ಪುರಾಣವನ್ನು ಕಲ್ಪಿಸಿದವರಿಗೆ ಇದರ ಅನೌಚಿತ್ಯ ತೋರಲಿಲ್ಲ

ಶ್ರೀನಿವಾಸದೇವರ ಮೂರ್ತಿ ಮೊದಲಲ್ಲಿ ಷಣ್ಮುಖಮೂರ್ತಿಯಾಗಿತ್ತು, ವೈಷ್ಣವಮೂರ್ತಿ ಎಂದು ವೈಷ್ಣವರು ಅದನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಲು ಯತ್ನಿಸುತ್ತಿದ್ದರು, ರಾಮಾನುಜಾಚಾರ್ಯರು ಕ್ಷೇತ್ರಕ್ಕೆ ಬಂದಾಗ ಶೈವ ವೈಷ್ಣವರ ಮಧ್ಯದ ಈ ವಿವಾದ ತೀರ್ಮಾನಕ್ಕೆ ಅವರಲ್ಲಿಗೆ ಬಂದಿತು. ಆಚಾರ್ಯರು, 'ಇದನ್ನು ನಾವು ನಿರ್ಣಯಿಸುವುದು ಬೇಡ, ದೇವರೇ ನಿರ್ಣಯಿಸಲಿ. ಶೈವ ಮೂರ್ತಿಯ ಆಯುಧ ಆಭರಣಗಳನ್ನು, ವೈಷ್ಣವ ಮೂರ್ತಿಯ ಆಯುಧ ಆಭರಣಗಳನ್ನು ರಾತ್ರಿ ಮೂರ್ತಿಯ ಸನ್ನಿಧಿಯಲ್ಲಿ ಇಟ್ಟು ಬಾಗಿಲು ಹಾಕಿ ಬೀಗಮುದ್ರೆ ಮಾಡಿ ಬಂದುಬಿಡಿ, ಬೆಳಗಾಗ ಬಾಗಿಲನ್ನು ತೆಗೆದು ಮೂರ್ತಿ ಆಭರಣಗಳಲ್ಲಿ ಯಾವುದನ್ನು ಧರಿಸಿಕೊಂಡಿದೆ ನೋಡಿ,

ಮೂರ್ತಿ ಶೈವವೇ ವೈಷ್ಣವವೇ ತಿಳಿಯುತ್ತದೆ," ಎಂದರು ಜನ ಹೀಗೆ ಮಾಡಿದರು. ಬೆಳಗ್ಗೆ ಬಾಗಿಲು ತೆರೆದಾಗ ಮೂರ್ತಿ ವೈಷ್ಣವ ಲಾಂಛನಗಳನ್ನು ಧರಿಸಿತ್ತು. ಇದು ಸಂಪ್ರದಾಯದ ಕಥೆ. ಆಚಾರ್ಯರ ಭಕ್ತರು, "ಆಚಾರ್ಯರು ಆದಿಶೇಷನ ಅವತಾರ ಅಲ್ಲವೆ? ಅವರು ರಾತ್ರಿ ತಮ್ಮ ನಿಜಸ್ವರೂಪವನ್ನು ತಾಳಿ ಹೊಸ್ತಿಲ ಕೆಳಗೆ ಒಂದು ಕಂಡಿಯಿಂದ ಒಳಕ್ಕೆ ಹೋಗಿ ದೇವರಿಗೆ ಈ ಲಾಂಛನವನ್ನು ತೊಡಿಸಿದರು," ಎಂದು ಹೆಮ್ಮೆಯಿಂದ ಹೇಳುತ್ತಾರೆ. ತಮ್ಮ ಕಥೆ ಆಚಾರ್ಯರನ್ನು ಒಬ್ಬ ಮೋಸಗಾರರನ್ನಾಗಿ ಮಾಡುತ್ತದೆ ಎನ್ನುವುದರ ಪರಿವೆಯೇ ಇಲ್ಲ ಈ ಜನರಿಗೆ. ಆಳ್ವಾರರುಗಳು ಹೊಗಳಿದ ವೈಷ್ಣವ ಮೂರ್ತಿಯನ್ನು ರಾಮಾನುಜಾಚಾರ್ಯರು ಹೀಗೆ ಮೋಸದಿಂದ ವೈಷ್ಣವವಾಗಿ ಮಾಡಬೇಕಾದ ಕಾರಣ ಏನೂ ಇರಲಿಲ್ಲ. ಆಚಾರ್ಯರ ಮೋಸದ ಕಥೆ ಅವರನ್ನು ಪ್ರಶಂಸಿಸುವುದಕ್ಕಾಗಿ ವಿವೇಚನೆ ನಾಲದ ಅವರ ಅನುಯಾಯಿಗಳು ಕಲ್ಪಿಸಿದ್ದು ಎನ್ನುವುದರಲ್ಲಿ ಸಂದೇಹವಿಲ್ಲ ಮೂರ್ತಿ ಮೊದಲಲ್ಲಿ ಶೈವಮೂರ್ತಿಯಾಗಿತ್ತು ಎನ್ನುವುದಾದರೆ ಅದು ನಮ್ಮಾಳ್ವಾರರ ಕಾಲಕ್ಕೂ ಹಿಂದಿನ ಮಾತಾಗಿರಬೇಕು

ಶ್ರೀನಿವಾಸದೇವರನ್ನು ಕುರಿತು ಒಂದು ಪುರಾಣವೇ ರಚಿತವಾಗಿದ. ಇದನ್ನು ವೆಂಕಟೇಶ ಮಹಾತ್ಮ್ಯೆ ಎಂದು ಕರೆಯುತ್ತಾರೆ. ಇದು ಪೂರ್ವ ಸಂಪ್ರದಾಯದ ಒಂದು ಚಿತ್ರ ಕಥೆ. ನೆಲದಲ್ಲಿ ಹುದುಗಿದ್ದ ದೇವರನ್ನು ಗುರುತಿಸಿ ದನಗಳು ಆ ಸ್ಥಳದ ಮೇಲೆ ಹಾಲು ಕರೆಯುತ್ತಿದ್ದುದನ್ನು ಕಂಡು, ಇದು ದೇವರ ನೆಲೆ ಒಂದು ಇರಬೇಕೆಂದು ಜನ ನೆಲವನ್ನು ಬಗೆದು ನೋಡಿ ಮೂರ್ತಿಯನ್ನು ಕಂಡರು, ಎನ್ನುವ ಕಥೆಯಿಂದ ಮೊದಲಾಗಿ ಚರಿತ್ರೆ ಅನೇಕ ವಿಚಿತ್ರ ಅಮಾನುಷ ಹಾಗೆಯೇ ತೀರ ಸಹಜ ಎನ್ನುಬಹುದಾದ ಹಲವು ಸಂದರ್ಭಗಳನ್ನು ಬೆಳೆಸಿ ಸಾಮಾನ್ಯ ಹಸು ಮನಸ್ಸಿಗೆ ರುಚಿಸುವ ಒಂದು ಕಥಾನಕವನ್ನು ಮಾಡಿದೆ ಇದನ್ನು ಆಧರಿಸಿ ಕೆಲವು ವರ್ಷಗಳ ಹಿಂದೆ ಒಂದು ಸಿನೀಮಾ ಚಿತ್ರ ಕೂಡ ಪ್ರಕಟ ಆಯಿತು.

ತಿರುಪತಿ ಎಂದು ಹೆಸರಾದ ಈ ಕ್ಷೇತ್ರ ಇರುವ ಪರ್ವತ ಶೇಷಗಿರಿ. ಆದಿಶೇಷನೇ ಗಿರಿಯಾಗಿ ರೂಪ ತಳೆದು ದೇವರಿಗೆ ಕ್ಷೇತ್ರವನ್ನು ಒದಗಿಸಿದ್ದಾನೆ ಎನ್ನುವುದು ಸಂಪ್ರದಾಯದ ನಂಬಿಕೆ. ಗಿರಿಯ ಬುಡದಲ್ಲಿರುವ ಊರು ಗೋವಿಂದರಾಜಪುರ. ಚಿದಂಬರದ ಗೋವಿಂದರಾಜ ಮೂರ್ತಿಯನ್ನು ರಕ್ಷಿಸಲು

ವೈಷ್ಣವರು ಅದನ್ನು ಇಲ್ಲಿಗೆ ತಂದು ಇಲ್ಲಿ ಪ್ರತಿಷ್ಠೆ ಮಾಡಿದರು, ಎನ್ನುವ ಐತಿಹ್ಯವನ್ನು ಈ ಮುನ್ನ ಹೇಳಿದೆ. ಗೋವಿಂದರಾಜಪುರದಿಂದ ಸುಮಾರು ಹರಿದಾರಿ ದೂರದಲ್ಲಿ ತಿರುಚ್ಚಾನೂರು ಎಂಬ ಗ್ರಾಮ ಇದೆ. ಅಲ್ಲಿ ದೇವಿಯ ಸನ್ನಿಧಿ ಇದೆ. ಈ ಆಲಯದ ದೇವಿಗೆ ಆಳ್ವಾರುಗಳ ಪ್ರಬಂಧಗಳ ಕಾಲದಿಂದ ವಾಡಿಕೆಯಾಗಿ ಬಂದಿರುವ ಹೆಸರು ಅಲರ್‌ಮೇಲ್‌ಮಂಗೈ, ಹೂವಿನಮೇಲಿರುವ ಮಹಾತಾಯಿ.

ತಿರುಪತಿ ಕ್ಷೇತ್ರದ ಒಂದು ವಿಶಿಷ್ಟ ಲಕ್ಷಣ, ಮಲೆಯ ಮೇಲಿನ ದೇವಾಲಯದಲ್ಲಿ ದೇವರ ಮೂರ್ತಿ ಇರುತ್ತ ದೇವಿಗೆ ಬೇರೆ ಒಂದು ಆಲಯ ಇಲ್ಲದಿರುವುದು ತಿರುಚ್ಚಾನೂರ ದೇವಾಲಯ ದೇವಿಯ ಆಲಯ. ಇದರಲ್ಲಿ ಶ್ರೀನಿವಾಸದೇವರಿಗೆ ಎಂದು ಒಂದು ಮಂದಿರ ಇಲ್ಲ. ದೇವರು ಎಂದಲ್ಲಿ ದೇವಿ ಎಂದು ಬೇರೆಯಾಗಿ ಎಣಿಸುವುದು ಬೇಡ, ದೇವಿ ಎಂದಲ್ಲಿ ದೇವರು ಎಂದು ಬೇರೆಯಾಗಿ ಎಣಿಸುವುದು ಬೇಡ, ಎನ್ನುವುದು ಈ ವ್ಯವಸ್ಥೆಯ ಉದ್ದೇಶ ಇರಬೇಕು

ತಿರುಪತಿಯನ್ನು ಕುರಿತು ಈ ಕಥೆ ಇರುವಂತೆ, ಶ್ರೀರಂಗವನ್ನು, ಕಾಂಚೀ ಪುರವನ್ನು, ಮಧುರೆಯನ್ನು, ಕುರಿತೂ ಕಥೆಗಳಿವೆ. ಇವನ್ನೆಲ್ಲ ಇಲ್ಲಿ ಹೇಳುವುದು ಆವಶ್ಯಕವಲ್ಲ ಕಂಚಿಯಲ್ಲಿ ನಾನು ಕೇಳಿದ ಒಂದು ಕಥೆ ಶೈವ ವೈಷ್ಣವ ವಿರೋಧದ ಮನಸ್ಸು ಒಂದು ಕಾಲದಲ್ಲಿ ಹೇಗೆ ಹರಿಯಿತು ಎನ್ನುವದನ್ನು ತೋರಿಸುತ್ತದೆಯಾಗಿ ಅದನ್ನು ಸೂಚಿಸಬಹುದು

ಒಮ್ಮೆ ನಾವು ನಾಲ್ಕುಜನ ಕಾಮಾಕ್ಷಿ ದೇವಿಯ ಆಲಯಕ್ಕೆ ಹೋದೆವು. ಪೂಜೆಯನ್ನು ಮುಗಿಸಿಕೊಂಡು ಹೊರಕ್ಕೆ ಬಂದಾಗ ಅರ್ಚಕರು ನಮ್ಮ ಬಳಿಗೆ ಬಂದು, "ಇಲ್ಲಿ ನಿಮ್ಮ ಲಕ್ಷ್ಮೀದೇವಿಯ ಮೂರ್ತಿ ಇದೆ, ಅದರ ದರ್ಶನ ತೆಗೆದುಕೊಂಡು ಹೋಗಿ," ಎಂದರು ನಮ್ಮಲ್ಲಿ ಮೂವರು ಶ್ರೀವೈಷ್ಣವರು, ಒಬ್ಬರು ಸ್ಮಾರ್ತರು. ಮೂವರ ಮುಖದ ಮೇಲಿನ ನಾಮವನ್ನು ನೋಡಿ ನಾವು ಶ್ರೀವೈಷ್ಣವರು ಎಂಬುದನ್ನು ತಿಳಿದು ಅರ್ಚಕರು ಹೀಗೆ ಹೇಳಿದರು ಎಂದು ನಾನು ಎಣಿಸಿದೆನು ಆಗಲಿ ಎಂದು ನಾವು ಅವರು ಒಯ್ದ ಸ್ಥಳಕ್ಕೆ ಹೋದೆವು ಅದೇನು ಅದು ಒಂದು ಮಂದಿರ ಅಲ್ಲ, ಮಂಟಪ ಅಲ್ಲ, ಒಂದು ಗೂಡೂ ಅಲ್ಲ. ಅಗಲವಾಗಿ ನಿಂತಿರುವ ಗೋಡೆಯ ಮಧ್ಯೆಯ ಒಂದು ಚಪ್ಪಟೆ

ಆದ ಕಲ್ಲು ಹಲಗೆ. ಅದರ ಮೇಲೆ ಅಸ್ಪಷ್ಟವಾಗಿ ಕೆಲವು ಗೆರೆಗಳು ಕಾಣು ತ್ತಿದ್ದವು. ಇದು ಏನು ಎಂದು ಅರ್ಥವಾಗದೆ ನೋಡುತ್ತಿರಲು ಅರ್ಚಕರು ಹೇಳಿದರು "ಒಂದು ಬಾರಿ ಲಕ್ಷ್ಮಿ ವಿಷ್ಣುವಿಗೆ, ನಿನ್ನ ತಂಗಿ ಕರಿಗಿ, ನನ್ನಂತೆ ಚೆಲುವೆ ಅಲ್ಲ ಎಂದಳು. ವಿಷ್ಣು ಕೋಪಗೊಂಡು, ನನ್ನ ತಂಗಿಯನ್ನು ಹೀಗೆ ನಿಂದಿಸಿದ ನೀನು ಪಿಶಾಚಿಯಾಗು, ಅವಳ ಮಂದಿರದ ಗೋಡೆಯಲ್ಲಿ ವಾಸ ಮಾಡು, ಎಂದನು. ಆಗ ಲಕ್ಷ್ಮಿಗೆ ಬಂದ ರೂಪ ಇದು." ಲಕ್ಷ್ಮಿಯೇ ಹೌದಾದರೆ ನಮಸ್ಕಾರ ಮಾಡಲೇಬೇಕು, ಏನಡ್ಡಿ ? ಎಂದು ನಾವು ದೇವಿಗೆ ಎಂದು ಕೈಮುಗಿದೆವು, ಅಲ್ಲಿಂದ ಹೊರಟುಬಂದೆವು. ಇಂಥ ಒಂದು ಕಾರಣ ದಿಂದ ಹೆಂಡತಿಯ ಮೇಲೆ ಕೋಪಿಸಿಕೊಂಡದ್ದು ವಿಷ್ಣು ಮಾತ್ರ ಅಲ್ಲ; ಶಿವನೂ ಒಮ್ಮೆ ಪಾರ್ವತಿಯ ವಿಷಯ ಹೀಗೆ ಕೋಪಗೊಂಡನಂತೆ. ಇದರ ಕಥೆಯನ್ನು ನನಗೆ ಅತ್ಯಂತ ಗೌರವನೀಯ ಶ್ರೀ ಶ್ರೀನಿವಾಸಶಾಸ್ತ್ರಿಗಳು ಒಮ್ಮೆ ಕಂಡಾಗ ಹೇಳಿದರು. "ಶಿವ ಪಾರ್ವತಿ ಒಮ್ಮೆ ವಿಮಾನದಲ್ಲಿ ಕುಳಿತು ಆಕಾಶದಲ್ಲಿ ವಿಹಾರಕ್ಕೆ ಹೊರಟರು. ಮಧ್ಯೆ ಯಾವುದೋ ಮಾತಿಗೆ ಶಿವ ದೇವಿಯನ್ನು 'ನಮ್ಮಿಬ್ಬರ ರೂಪಗಳಲ್ಲಿ ಯಾವುದು ಹೆಚ್ಚು ಸುಂದರ ಎಂದು ನಿನಗೆ ತೋರು ತ್ತದೆ ?' ಎಂದು ಕೇಳಿದನು. ದೇವಿ ನನ್ನದು ಎಂದಳು. ಶಿವನಿಗೆ ಕೋಪ ಬಂದಿತು. ಅವನು ಒಡನೆಯೇ ದೇವಿಯನ್ನು ಚೂರುಚೂರಾಗಿ ಕಡಿದನು. ಕಡಿದ ಚೂರನ್ನೆಲ್ಲ ಒಂದೊಂದನ್ನು ಒಂದೊಂದು ದಿಕ್ಕಿಗೆ ಎಸೆದನು. ದೇವಿಯ ಯೋನಿಭಾಗ ಕಾಮರೂಪದ ಒಂದು ಪ್ರದೇಶದಲ್ಲಿ ನೆಲಕ್ಕೆ ಬಿತ್ತು. ಜನ ಅಲ್ಲಿ ಒಂದು ಆಲಯವನ್ನು ಕಟ್ಟಿ ಅಲ್ಲಿ ದೇವಿಯನ್ನು ಪೂಜಿಸಿದರು. ಅದು ಈಗಲೂ ಪುಣ್ಯಕ್ಷೇತ್ರವಾಗಿದೆ. ಕ್ಷೇತ್ರದ ಹೆಸರು ಯೋನಿಮಾತ್ರಾ". ಕಥೆಯನ್ನು ಹೇಳಿ ಶಾಸ್ತ್ರಿಗಳವರು, "ಇದೆಂಥ ವಿಚಿತ್ರ ಕಥೆ ? ಇಂಥ ಕಥೆಗಳನ್ನು ಕಟ್ಟಿ ಜನ ಅದು ಹೇಗೆ ಸಂತೋಷಪಟ್ಟರೋ, ಇದು ನಮ್ಮಲ್ಲಿ ವಾಡಿಕೆಯಾಗಿರುವ ಒಂದು ಅಕ್ರಮ," ಎಂದರು.

ಶ್ರೀರಂಗದ ಮಾಹಾತ್ಮ್ಯವನ್ನು ಹೊಗಳುವ ಜನ ಶ್ರೀರಂಗನಾಥನ ಮೂರ್ತಿಯನ್ನು ಕುರಿತು ಈ ಕಥೆಯನ್ನು ಹೇಳುತ್ತಾರೆ. "ಮೂರ್ತಿ ಅಯೋಧ್ಯೆ ಯಲ್ಲಿ ದಶರಥನ ಅರಮನೆಯಲ್ಲಿ ಅರಸರು ಪೂಜೆ ಮಾಡುತ್ತಿದ್ದ ಮೂರ್ತಿ. ಪಟ್ಟಾಭಿಷೇಕದ ಬಳಿಕ ವಿಭೀಷಣ ಲಂಕೆಗೆ ಹೊರಟಾಗ ಈ ಮೂರ್ತಿ ತನಗೆ

ಪೂಜೆಗೆ ಬೇಕೆಂದು ಬೇಡಿದನು ರಾಮಚಂದ್ರ ಅದನ್ನು ಅವನಿಗೆ ಕೊಟ್ಟನು. ಮೂರ್ತಿಯನ್ನು ಇಲ್ಲಿಯವರೆಗೆ ತಂದು ವಿಭೀಷಣ ಸಂಪುಟವನ್ನು ಇಲ್ಲಿರಿಸಿ ಶೌಚಕ್ಕೆಂದು ಹೋದನು ತಕ್ಷಣ, ಬೇಗನ ಹಿಂದಿರುಗದ ಕಾರಣ ಅವನು ಬರುವ ವೇಳೆಗೆ ಸಂಪುಟ ಇಲ್ಲಿಯೇ ಕಚ್ಚಿಕೊಂಡು ಬಿಟ್ಟಿತು ವಿಭೀಷಣ ಅದನ್ನು ಬಿಡಿಸಿಕೊಳ್ಳಲು ನೋಡಿದನು. ಆಗಲಿಲ್ಲ, ಬರಿಗೈಯಲ್ಲಿ ಹೋದನು. ಮೂರ್ತಿ ಕಚ್ಚಿಕೊಂಡ ಸ್ಥಳ ಕ್ಷೇತ್ರ ಆಯಿತು" ರಾಮಾಯಣದಲ್ಲಿ ಪಟ್ಟಾಭಿಷೇಕದ ಕಥನದ ಕೊನೆಯಲ್ಲಿ, "ಲಬ್ಧ್ವಾ ಕುಲಧನಂ ರಾಜಾ ಲಂಕಾಂ ಪ್ರಾಯಾದ್ವಿಭೀಷಣಃ" ಎನ್ನುವ ವಾಕ್ಯ ಇದೆ ಅದರಲ್ಲಿಯ ಕುಲಧನ ಶಬ್ದ ಲಂಕೆಯನ್ನು ಕುರಿತದ್ದು ಎಂದು ತೋರುತ್ತದೆ ರಾಮ ತಾನು ಗೆದ್ದ ಲಂಕಾ ರಾಜ್ಯವನ್ನು ವಿಭೀಷಣನಿಗೆ ಅನುಗ್ರಹಿಸಿದನು. ಈ ಮಾತನ್ನು ಹಿಡಿದು ಚಮತ್ಕಾರ ಬುದ್ಧಿಯ ಜನ, ಅದನ್ನು ಬಳಸಿ ಶ್ರೀರಂಗದ ಮಾಹಾತ್ಮ್ಯವನ್ನು ಹೆಚ್ಚಿಸುವುದಕ್ಕೆ ಹೀಗೆ ತಿರುಗಿಸಿದರು.

ಇದರಂತೆ ಗೋಕರ್ಣವನ್ನು ಕುರಿತು ಒಂದು ಐತಿಹ್ಯ ಇದೆ "ರಾವಣ ಈಶ್ವರನಿಂದ ಆತ್ಮಲಿಂಗವನ್ನು ವರವಾಗಿ ಪಡೆದು ಊರಿಗೆಂದು ಹೊರಟನು. ದಾರಿಯಲ್ಲಿ ನಿಲ್ಲಬೇಕಾಗಿ ಅದನ್ನು ಗಣಪತಿಯ ಕೈಯಲ್ಲಿ ಕೊಟ್ಟು, "ಇದನ್ನು ಹಿಡಿದೇ ಇರು, ನೆಲದ ಮೇಲೆ ಇಡಬೇಡ, ಇಟ್ಟರೆ ಅದು ಕಚ್ಚಿಕೊಳ್ಳುತ್ತದೆ, ಮತ್ತೆ ಎತ್ತುವುದಕ್ಕೆ ಬರುವುದಿಲ್ಲ, ಜೋಕೆ," ಎಂದು ಹೇಳಿ ಸ್ವಲ್ಪಹೊತ್ತು ಬದಿಗೆ ಹೋದನು ಅವನು ಬರುವುದು ತಡವಾಯಿತು. ಬೇಸರದಿಂದ ಗಣಪತಿ ಲಿಂಗವನ್ನು ನೆಲದ ಮೇಲೆ ಇಟ್ಟನು ರಾವಣ ಬಂದು ಗಣಪತಿ ಹೀಗೆ ಮಾಡಿದ್ದುದನ್ನು ಕಂಡು, ಲಿಂಗವನ್ನು ಮತ್ತೆ ಎತ್ತಿಕೊಳ್ಳಲು ನೋಡಿ ಸಾಧ್ಯವಾಗದೆ ಕೋಪಗೊಂಡು, ಗಣಪತಿಯ ತಲೆಯ ಮೇಲೆ ಮೊಟ್ಟಿದನು ಲಿಂಗ ಅಲ್ಲಿಯೇ ಪ್ರತಿಷ್ಠೆ ಆಯಿತು ಅದೇ ಈಗ ಈ ಕ್ಷೇತ್ರದಲ್ಲಿ ಪೂಜೆ ಪಡೆಯುತ್ತಿರುವ ಮಹಾಬಲೇಶ್ವರ ದೇವಾಲಯದ ಹೊರಗಡೆ ದಾರಿಯಲ್ಲಿ ಗಣಪತಿಯ ಶಿಲಾಮೂರ್ತಿ ಒಂದಿದೆ ಅದರ ತಲೆಯಲ್ಲಿ ಒಂದು ಕುಳಿ ಇದೆ. "ರಾವಣ ಕೋಪದಿಂದ ತನ್ನ ಕೈಗೆಣ್ಣಿನಿಂದ ಮೊಟ್ಟಿದಾಗ ಆದ ಕುಳಿ ಅದು." ಇದು ಕಥೆ.

ಜಾಣರಾದ ಭಕ್ತರು ಹೀಗೆ ಕ್ಷೇತ್ರಕ್ಷೇತ್ರಕ್ಕೂ ಒಂದೊಂದರಂತೆ ಕಟ್ಟಿದ ಕಥೆಗಳು ಕೇಳುವುದಕ್ಕೆ ಚೆನ್ನಾಗಿವೆ ಆದ್ದರಿಂದ ಒಳ್ಳೆ ಸಾಹಿತ್ಯ ಹೌದು.

ಇವನ್ನು ಹೀಗೆಂದು ನಂಬುವುದು ಸರಿ. ದಿಟದಲ್ಲಿ ನಡೆದ ಸಂಗತಿಗಳ ಇತಿಹಾಸ ಎಂದು ತಿಳಿಯುವುದು ಸರಿಯಲ್ಲ.

## ಕ್ಷೇತ್ರಗಳ ಸಂಪ್ರದಾಯಗಳು

ಒಂದೊಂದು ಕ್ಷೇತ್ರದಲ್ಲೂ ಸಂಪ್ರದಾಯ ಸೇವೆಯ ಒಂದು ಕ್ರಮವನ್ನು ರೂಪಿಸುತ್ತದೆ. ಉದಾಹರಣೆಗೆ ತಿರುಪತಿಯ ಆಲಯದ ಸಂಪ್ರದಾಯದ ಕೆಲವು ವಿವರಗಳನ್ನು ಇಲ್ಲಿ ಹೇಳಬಹುದು ಬಹು ಪ್ರಾಚೀನವಾದ ಈ ದೇವಾಲಯ ವನ್ನು ನಮ್ಮ ಜನ ಹಲವರು ನೂರಾರು ತಲೆಮಾರಿನ ಕಾಲ ನಿಶ್ಚಲಭಕ್ತಿಯಿಂದ ನಂಬಿ ನಡೆದು ತಾವು ಶ್ರೀನಿವಾಸದೇವರ ಒಕ್ಕಲು ಎಂದು ಹೇಳಿಕೊಳ್ಳುತ್ತಾರೆ ಈ ಕಥೆಯನ್ನು ಹೇಳುತ್ತಿರುವ ನಾನು ಈ ತೆರನ ಒಂದು ಮನೆತನದವನು ನನ್ನ ತಂದೆ ನನಗೆ ವೆಂಕಟೇಶ ಎಂದು ಹೆಸರಿಟ್ಟರು. ಮನೆಯ ಹಿರಿಯರ ಹೆಸರನ್ನು ಬಾಯಲ್ಲಿ ಹೇಳುವುದು ಸರಿಯಲ್ಲ ಎಂದು ನನ್ನ ತಾಯಿ ನನ್ನನ್ನು ಶ್ರೀನಿವಾಸ ಎಂದು ಕರೆದರು. ಇದು ಮನೆದೇವರ ಇನ್ನೊಂದು ಹೆಸರು. ಶ್ರೀನಿವಾಸದೇವರಿಗೆ ಒಕ್ಕಲಾದವರಮಕ್ಕಳು ಶ್ರಾವಣಮಾಸದ ಶನಿವಾರಗಳನ್ನು ವಿಶೇಷ ದಿನಗಳೆಂದು ನಡೆಸಬೇಕು ಹೀಗೆ ನಡೆಸುವುದರ ಒಂದು ಭಾಗ ದೇವರ ಹೆಸರು ಹೇಳಿ, ಏನಿಲ್ಲ ಎಂದರೂ ಐದು ಮನೆಗಳಿಗೆ ಹೋಗಿ ಅಕ್ಕಿಯ ಭಿಕ್ಷೆಯನ್ನು ಬೇಡಬೇಕು ಹಾಗೆ ಬಂದ ಅಕ್ಕಿಯನ್ನು ಮನೆಯಲ್ಲಿ ತಂಬಿಟ್ಟುಮಾಡಿ ದೇವರಿಗೆ ಒಪ್ಪಿಸಿ ಪ್ರಸಾದ ಮಾಡಿಕೊಂಡು ಅದನ್ನು ಮೊದಲ ತುತ್ತಾಗಿ ಉಣ್ಣಬೇಕು. ನಾನು ಹುಡುಗನಾಗಿ ಈ ಯಾಯವಾರವನ್ನು ಮಾಡಿದೆನು. ನನಗೆ ಈಗ ನೆನಪಿರುವಂತೆ ಇದನ್ನು ಮದುವೆ ಆಗುವವರೆಗೂ ತಪ್ಪದೆ ನಡೆಸಿದೆನು. ನಡೆಸದೆ ಬಿಡುವುದು ದೊಡ್ಡ ತಪ್ಪು ಎಂದು ಜನರ ನಂಬಿಕೆ ಹೀಗೆಂದಲ್ಲ, ನಡೆಸುವ ವಾಡಿಕೆ ಎಂಬ ಕಾರಣದಿಂದ, ನಾನು ಈ ಕ್ರಮದಲ್ಲಿ ಎಂದೂ ಅಶ್ರದ್ಧೆ ತೋರಲಿಲ್ಲ. ನನ್ನ ತಮ್ಮಂದಿರು, ನಮ್ಮ ಮನೆಯಲ್ಲಿ ಬೆಳೆದ ಮೊಮ್ಮಕ್ಕಳು, ಬಾಲ್ಯದಲ್ಲಿ ಹಾಗೆಯೇ ಯಾಯವಾರ ನಡೆಸಿದರು ಶ್ರೀನಿವಾಸ ದೇವರ ಒಕ್ಕಲಾದ ಜನ ಶುಭಕಾರ್ಯಗಳ ಸಂದರ್ಭಗಳಲ್ಲಿ ತಿರುಪತಿ ದೇವರನ್ನು ಮೊದಲು ನೆನೆಯುತ್ತಾರೆ. ಕಷ್ಟದ ಹೊತ್ತಿನಲ್ಲಿ ರಕ್ಷೆ ಬೇಡಿ ಕೈಲಾದಷ್ಟು ಕಾಸನ್ನು ಕಾಣಿಕೆ ಎಂದು ಬೇರೆಯಾಗಿಟ್ಟು, ತಾವೇ ತಿರುಪತಿಗೆ ಹೋಗಿ, ಇಲ್ಲವೆ

ತಿರುಪತಿಗೆ ಹೋಗುವವರ ಕೈಯಲ್ಲಿ ಇಟ್ಟು, ಅದನ್ನು ದೇವರಿಗೆ ಸಲ್ಲಿಸುತ್ತಾರೆ. ಸಲ್ಲಿಸದೆ ಇದ್ದರೆ ಏನೋ ಕೆಡಕು ಸಂಭವಿಸುತ್ತದೆ ಎನ್ನುವುದು ಈ ಮನೆತನಗಳಲ್ಲಿ ವಾಡಿಕೆ ಆದ ಒಂದು ಭಯ ಕೆಲವು ಸೇಳೆ ಇವರಲ್ಲಿ ಯಾರಾದರೂ ತಿರುಪತಿ ದೇವಾಲಯದಲ್ಲಿ ಯಾವುದಾದರೂ ಒಂದು ಸೇವೆಯನ್ನು ನಡೆಸುತ್ತೇವೆ ಎಂದು ಹರಕೆಮಾಡಿಕೊಳ್ಳುವುದೂ ಉಂಟು ಇಂಥ ಹರಕೆಯನ್ನು ತಪ್ಪದೆ ನಡೆಸಬೇಕು. ಇಂಥ ಹರಕೆ ಒಂದನ್ನು ಕುರಿತ ಭಾಗಾನಗರದ ತಾಯಿ ಒಬ್ಬಳ ಹಾಡು ನನ್ನ ಚಿಕ್ಕಂದಿನಲ್ಲಿ ತುಂಬ ಪ್ರಚಾರದಲ್ಲಿತ್ತು. ಬಹುವರ್ಷ ಮಕ್ಕಳಿಲ್ಲದೆ ತಾನು ಬಂಜೆಯಾಗುತ್ತೇನೋ ಏನೋ ಎಂದು ಅಂಜಿದ ಗರತಿಯೊಬ್ಬಳು, ತನಗೆ ಮಗುವನ್ನು ಕೊಡು, ಕೊಟ್ಟಿಯಾದರೆ ವರ್ಷ ಬೆಳೆದ ಮಗುವನ್ನು ನಿನ ತೇರಿನ ಉತ್ಸವದಲ್ಲಿ ಹರಿಯುವ ಗಾಲಿಯ ಕೆಳಗೆ ಒಪ್ಪಿಸುತ್ತೇನೆ, ಎಂದು ದೇವರನ್ನು ಬೇಡಿದಳು. ಮಗು ಆಯಿತು, ವರ್ಷ ಬೆಳೆಯಿತು ಉತ್ಸವಕ್ಕೆ ಹೋಗಿ ಅದನ್ನು ಹರಿಯುವ ತೇರಿನ ಗಾಲಿಯ ಕೆಳಗೆ ಇರಿಸಬೇಕು. ಈ ತಾಯಿಗೆ ಇದನ್ನು ಮಾಡಲು ಮನಸ್ಸು ಬರಲಿಲ್ಲ ಮಾಡಿದರೆ ಮಗು ಸಾಯುವುದು ನಿಜ. ಮಾಡಲಿಲ್ಲ ಬೇರೆ ಏನೋ ಕೇಡು ಆಗುವುದು ನಿಶ್ಚಯ. ಅದನ್ನು ಸಹಿಸಬೇಕಾಗುತ್ತದೆ. ತುಂಬ ಯೋಚಿಸಿ ಇವಳು ಆದದ್ದಾಗಲಿ, ಮಾಡಿಕೊಂಡ ಹರಕೆಯನ್ನು ನಡೆಸಬೇಕು, ನಡೆಸುತ್ತೇನೆ, ಎಂದು ನಿಶ್ಚಯಿಸಿದಳು ಉತ್ಸವಕ್ಕೆ ಹೋಗಿ ಮಗುವನ್ನು ಗಾಲಿಯ ಕೆಳಗೆ ಇರಿಸಿದಳು. ತೇರು ಹರಿಯಿತು. ಚಕ್ರ ಮಗುವಿನ ಮೇಲೆ ಹಾಯ್ದಿತು ಆಶ್ಚರ್ಯ, ಗಾಲಿ ಮುಂದಕ್ಕೆ ಹೋದಮೇಲೆಯೂ ಮಗು ಸುಖವಾಗಿದ್ದಿತು. ಭಗವಂತ ಹರಕೆ ಸಲ್ಲಿಸಿದ ತಾಯಿಗೆ ಮಗುವನ್ನು ಉಳಿಸಿಕೊಟ್ಟನು ಇದು ದೇವರು ಎಂಥ ಕೃಪಾಳು ಎನ್ನುವುದನ್ನು ತಿಳಿಸುವ ಕಥೆ. ತೇರಿನ ಗಾಲಿ ಮೇಲೆಹರಿದು ಮಗು ಜೀವದೊಂದಿಗೆ ಉಳಿಯಿತು ಎನ್ನುವುದು ದಿಟವಿರಬಹುದೇ ? ಆದರೂ ಜನ ನಂಬುತ್ತಿದ್ದರು. ಹರಕೆಗಳನ್ನು ಸಲ್ಲಿಸುವುದಕ್ಕೆ ಕಾಲದ ನಿಯಮವೇನೂ ಇಲ್ಲ ಎಷ್ಟು ವರ್ಷಗಳ ಮೇಲಾದರೂ ಸಲ್ಲಿಸಬಹುದು. ತಾನು ಸಲ್ಲಿಸಲಾಗಲಿಲ್ಲ, ಹರಿಸಿಕೊಂಡವರ ಒಬ್ಬ ಮಗನೋ ಮಗಳೋ ಸಲ್ಲಿಸಬಹುದು. ಅವರಿಂದ ಆಗಲಿಲ್ಲ, ಅವರ ಮಕ್ಕಳು ಯಾರಾದರೂ ಸಲ್ಲಿಸಬಹುದು. ನಮ್ಮ ತಾತ ಹೀಗೆ ಒಮ್ಮೆ ಗರುಡೋತ್ಸವ ಮಾಡಿಸುತ್ತೇನೆ ಎಂದು ಹರಸಿಕೊಂಡರಂತೆ.

ಮಾಡಿಸೋಣ ಎಂದು ಯೋಚಿಸುತ್ತಿರುವಲ್ಲೇ ಅವರು ತೀರಿಕೊಂಡರು. ಮನೆಯಲ್ಲಿ, ದೇವರಿಗೆ ನಡೆಸಬೇಕಾದ ಸೇವೆ ಇದು ಸಾಲವಾಗಿ ಉಳಿದಿದೆ ಎನ್ನುವುದು ಎಲ್ಲರಿಗೂ ತಿಳಿದ ವಿಷಯ. ನಮ್ಮ ತಂದೆ ಈ ಉತ್ಸವವನ್ನು ನಡೆಸಲಿಲ್ಲ. ನಾನು ಓದು ಮುಗಿಸಿ ಕೆಲಸ ಹಿಡಿದು ೧೯೩೫ರಲ್ಲಿ ಮೊದಲಬಾರಿ ತಿರುಪತಿ ಯಾತ್ರೆ ಹೋದಾಗ ಈ ಉತ್ಸವವನ್ನು ನಡೆಸಿ ಅಜ್ಜನ ಹರಕೆಯನ್ನು ಸಲ್ಲಿಸಿದೆನು. ನಡೆಸದಿರುವುದು ದೊಡ್ಡ ತಪ್ಪು ಎನ್ನುವುದು ಇಂಥ ಎಲ್ಲ ಸಂದರ್ಭದ ಮುಖ್ಯ ಭಾವನೆ. ನನ್ನ ಆ ಮೊದಲ ಯಾತ್ರೆ ಬಹು ಚೆನ್ನಾಗಿ ನಡೆಯಿತು. ನಾನು, ನನ್ನ ತಾಯಿ, ನನ್ನ ಸೋದರತ್ತೆ, ನನ್ನ ಮನೆಯಾಕೆ, ನನ್ನ ಮಕ್ಕಳು, ಎಲ್ಲ ತುಂಬ ಸಂತೋಷದಿಂದ ಪೂಜೆ ಸಲ್ಲಿಸಿ ಧನ್ಯಭಾವದಿಂದ ಹಿಂದಿರುಗಿದೆವು. ಬೆಟ್ಟವನ್ನು ಏರುವುದರ ಸಂತೋಷವೇ ಒಂದು ದೊಡ್ಡ ಸಂತೋಷ. ದಾರಿ ಸುಮಾರು ಏಳು ಮೈಲಿ. ಏಳು ಬೆಟ್ಟವನ್ನು ದಾಟಿ ದೇವಾಲಯವನ್ನು ಮುಟ್ಟಬೇಕು. ಉದ್ದಕ್ಕೂ ಇಲ್ಲ ಮೆಟ್ಟಿಲು, ಇಲ್ಲ ಕಲ್ಲುಕಟ್ಟಿದ್ದ ನಡೆಯುದಾರಿ. ಪಕ್ಕದಲ್ಲಿ ಉದ್ದಕ್ಕೂ ಸಾಲಿನ ಮರಗಳು. ದಾರಿಯ ಪಕ್ಕವೆಲ್ಲ ಒಂದು ಉಪವನ ಎಂಬಂತೆ ಕಾಣುವ ಒಂದು ಕಾಡು. ಮೆಟ್ಟಿಲು ಎರಡು ಸ್ಥಳದಲ್ಲಿ ಸ್ವಲ್ಪ ಕಷ್ಟದ ಏತ. ಏಳು ಬೆಟ್ಟಗಳನ್ನು ಗುರುತಿಸಿ, ಏಳು ದೊಡ್ಡ, ಸಣ್ಣ ಗೋಪುರ. ಮೊದಲ ಗೋಪುರ ಗಾಳಿಗೋಪುರ. ಅದನ್ನು ಮುಟ್ಟುವುದು ಒಂದು ಪ್ರಯಾಸದ ಘಟ್ಟ. ನಾಲ್ಕೋ ಏನೋ ಬೆಟ್ಟಗಳ ಬಳಿಕ ಬಹು ಕಷ್ಟದ ಒಂದು ಏತ. ಅದನ್ನು ಮೊಣಕಾಲು ಮುರಿಯ ಎಂದು ಕರೆಯುತ್ತಿದ್ದರು. ಬೆಟ್ಟವನ್ನು ಏರುವವರು ಸಾಮಾನ್ಯ ಆರೋಗ್ಯದಲ್ಲಿದ್ದರೆ ದಾರಿಯನ್ನು ನಡೆಯಲೇಬೇಕು. ಹಾಗಲ್ಲದೆ ಯಾತ್ರೆ ಸಿದ್ಧಿಸುವುದಿಲ್ಲ. ರೋಗಿಷ್ಠರೂ, ತುಂಬ ಮುದುಕರಾದರೂ, ಬಹು ಸಣ್ಣ ಮಕ್ಕಳೂ ಡೋಲಿಯಲ್ಲಿ ಕುಳಿತು ಹೋಗಬಹುದು. ಯಾತ್ರಿಕರು ಕುಳಿತ ಡೋಲಿಗಳನ್ನು ಹೊರುವುದಕ್ಕೆ ಯಾವಾಗಲೂ ತಕ್ಕಷ್ಟು ಸಂಖ್ಯೆಯ ಕೂಲಿಜನ ಇರುತ್ತಿದ್ದರು. ನಾನು ಯಾತ್ರೆ ಹೋದ ದಿನಗಳಲ್ಲಿ ಅವರಿಗೆ ಕೂಲಿ ಒಂದು ರೂಪಾಯಿ ನಾಲ್ಕಾಣೆ. ಈ ಕೂಲಿ ಜನ ಯಾತ್ರಿಕರ ಸಾಮಾನುಗಳನ್ನು ಹೊರುವರು. ಶ್ರೀನಿವಾಸದೇವರು ದುಷ್ಟರನ್ನು ನಿಗ್ರಹಿಸುವ ದೇವರು, ತನ್ನ ಸನ್ನಿಧಿಗೆ ಬರುವ ಯಾತ್ರಿಕರಿಗೆ ಅನ್ಯಾಯ ಮಾಡಿದವರನ್ನು ತಪ್ಪದೆ ದಂಡಿಸುವನು, ಇದು ಈ ಜನರ ನಂಬಿಕೆ. ಕೂಲಿಕಾರ ಯಾತ್ರಿಕರ

ಜೊತೆಜೊತೆಗೆ ನಡೆಯುತ್ತಾನೆಯೇ? ಮೂಟೆಯನ್ನು ಹೊತ್ತೋ, ಮಕ್ಕಳನ್ನು ಡೋಲಿಯಲ್ಲಿ ಕೂರಿಸಿಕೊಂಡೋ ದಡದಡ ಮೆಟ್ಟಿಲುಗಳನ್ನು ಏರಿ ಹೋಗುತ್ತಾನೆ, ಯಾತ್ರಿಕರು ಬೆಟ್ಟದ ತಲೆಯನ್ನು ಮುಟ್ಟಿದಾಗ, ಮೂಟೆಗಳನ್ನು, ಮಕ್ಕಳನ್ನು ಅಲ್ಲಿ ಅವರಿಗೆ ಒಪ್ಪಿಸುತ್ತಾನೆ. ಆಗಿನ ಕಾಲದಲ್ಲಿ ಮೂಟೆಯಿಂದಲಾಗಲಿ, ಮಕ್ಕಳ ಮೈಮೇಲಿಂದಾಗಲಿ, ಏತರದಾದರೂ ಒಂದು ಸಾಮಾನು ಕಳೆದು ಹೋಯಿತು ಎಂಬ ಮಾತೇ ಇಲ್ಲ ಇವು ನಾನು ಮೊದಲಬಾರಿ ಯಾತ್ರೆ ಹೋದಾಗ ತಿಳಿದ ವಿವರಗಳು.

ದೇವಾಲಯದ ಆವರಣದಲ್ಲಿ 'ತೊಟ್ಟಿ ತೀರ್ಥ' ಎಂದು ಕರೆಯುವ ಕಲ್ಲಿನ ತೊಟ್ಟಿ ಒಂದಿದೆ. ಪ್ರತಿ ಶುಕ್ರವಾರದ ಅಭಿಷೇಕದ ನೀರು ದೇವರ ಪಾದದಿಂದ ಹರಿದುಬಂದು ಇದರೊಳಗೆ ಬೀಳುತ್ತದೆ ಆದಕಾರಣ ಇದು ಪವಿತ್ರ ತೀರ್ಥ. ಯಾತ್ರಿಕರು ಇದನ್ನು ತಾವೇ ಎತ್ತಿಕೊಂಡು ತೀರ್ಥ ಎಂದು ಕುಡಿದು ಸಂತೋಷಪಡುತ್ತಾರೆ ಒಂದು ಶುಕ್ರವಾರ ಹರಿದ ನೀರು ಬರುವ ಶುಕ್ರವಾರದ ವರೆಗೆ ತೊಟ್ಟಿಯಲ್ಲಿದ್ದು ಕೆಡುತ್ತದೆ ಇದರಿಂದ ಕೆಟ್ಟ ವಾಸನೆ ಬರುತ್ತದೆ ಕೆಟ್ಟ ವಾಸನೆ ಎಂದು ಕುಡಿಯದೆ ಇರಬಾರದು, ಕೆಡಕಾಗುತ್ತದೆ, ಎಂದು ಇತರ ಯಾತ್ರಿಕರು ಹೇಳುವರು ಮೊದಲಬಾರಿ ತೀರ್ಥ ತಿಳಿಯಾಗಿತ್ತು. ತೆಗೆದುಕೊಳ್ಳುವುದು ಕಷ್ಟವಾಗಲಿಲ್ಲ. ಎರಡನೆಯಬಾರಿ ಹೋದಾಗ ವಾಸನೆಯಾಗಿತ್ತು. ಕುಡಿಯಲು ನನಗೆ ಮನಸ್ಸು ಬರಲಿಲ್ಲ. ದೇವರ ವಿಷಯದಲ್ಲಿ ಅಪಚಾರವಾದೀತು ಎಂಬ ಭಯ ಇತ್ತಷ್ಟೆ. ತಕ್ಷಣ ನನಗೆ ತೋರಿತು: "ಈ ನೀರು ಚೆನ್ನಾಗಿಲ್ಲ ಎಂದು ನನಗೆ ದೇವರೇ ಹೇಳುತ್ತಿದ್ದಾರೆ. ಅಲ್ಲವೇ? ಹೊರಗಿನ ಮಾತು ಯಾತ್ರಿಕರದು ಒಳಗಿನ ಎಚ್ಚರಿಕೆ ದೇವರದು" ನಾನು ತೀರ್ಥವನ್ನು ತೆಗೆದು ತಲೆಗೆ ಪ್ರೋಕ್ಷಿಸಿಕೊಂಡೆನು. ಮನೆಯವರಿಗೆ, ಮತ್ತೆ ಎಲ್ಲರಿಗೆ, ಇಷ್ಟನ್ನೇ ಮಾಡಿ ಎಂದು ಹೇಳಿದೆನು. ತಿರುಪತಿಯಲ್ಲಿದ್ದ ಆ ದಿನ ಇತರ ಯಾತ್ರಿಕರು ಆಡುತ್ತಿದ್ದ ಮಾತಿನಲ್ಲಿ ದೇವರನ್ನು ಕುರಿತು ಯಾತ್ರಿಕರ ಭಾವನೆಗಳು ಎಷ್ಟೋ ಇವೆ ಎಂದು ಕಂಡುಬಂದಿತು. "ನನಗೆ ಈ ಕೃಪೆಯನ್ನು ಅನುಗ್ರಹಿಸು, ನಾನು ಇಂಥ ಕಾಣಿಕೆಯನ್ನು ಸಲ್ಲಿಸುತ್ತೇನೆ ಎಂದು ಹೇಳಿಕೊಂಡೆ. ನನ್ನ ಅಪೇಕ್ಷೆ ಸಂದಿತು," ಎಂದು ಒಬ್ಬರು. ಮತ್ತೊಬ್ಬರು, "ಬೇಡಿದ ಅನುಗ್ರಹ ದೊರಕಿತು, ಹರಕೆಯನ್ನು ನಡೆಸಲಿಲ್ಲ, ಕೇಡಾಯಿತು,"

ಇತ್ಯಾದಿ. ಇಂಥ ಮಾತು ದೇವರ ವಿಷಯವಾಗಿ ಕ್ಷುದ್ರಭಾವನೆಗಳನ್ನು ಹುಟ್ಟಿಸುತ್ತವೆ ಎಂದು ನನಗೆ ವ್ಯಥೆಯಾಯಿತು ಆಮೇಲೆ ನಾನು ನಾಲ್ಕು ಬಾರಿ ತಿರುಪತಿಗೆ ಯಾತ್ರೆ ನಡೆಸಿ ಬಂದೆನು ಆ ಬಳಿಕ ಮನೆಮಕ್ಕಳ ಎರಡು ಉಪನಯನಕ್ಕೆಂದು, ಅರವತ್ತನೆಯ ವರ್ಷ ಷಷ್ಟ್ಯಬ್ದಿ ವಂದನೆ ಸಲ್ಲಿಸಲಿಕ್ಕೆಂದು ತಿರುಪತಿಗೆ ಹೋಗಿ ಬಂದಿದ್ದೇನೆ ಮತ್ತೆ ಯಾತ್ರೆ ಹೋಗಬೇಕೆಂದು ಎನ್ನಿಸುತ್ತಿಲ್ಲ.

ತಿರುಪತಿ ದೇವರ ಒಕ್ಕಲಾದವರು ಬೇರೆ ದೇವರನ್ನು ಆಶ್ರಯಿಸುವುದು ಒಳಿತಲ್ಲ ಎಂಬ ಒಂದು ಭಾವನೆ ನಮ್ಮ ಜನರಲ್ಲಿ ವಾಡಿಕೆ ಹಾಗೆ ಮಾಡಿದವರು ಕಳ್ಳಒಕ್ಕಲಾಗುತ್ತಾರೆ ಆಮೇಲೆ ತಿರುಪತಿಗೆ ತಾವೇ ಯಾತ್ರೆ ಹೋಗಕೂಡದು ಹೋದರೆ ಕೆಟ್ಟದಾಗುತ್ತದೆ ಹೋಗಬೇಕೆಂದು ಅಪೇಕ್ಷೆಯಾದರೆ ಕಳ್ಳಒಕ್ಕಲಲ್ಲದ ಬಂಧುವೋ ಮಿತ್ರರೋ ಯಾತ್ರೆ ಹೊರಟಾಗ ಅವರ ಪರಿವಾರ ಆಗಿ ಹೋಗ ಬೇಕು

ಈ ಭಾವವೂ ಶ್ರೀನಿವಾಸದೇವರನ್ನು ಒಂದು ಕ್ಷುದ್ರ ದೈವವನ್ನಾಗಿ ಮಾಡುತ್ತದೆ. ಹೀಗೆ ದೈವವನ್ನು ಕುರಿತು ಕಲ್ಪನೆಯನ್ನು ಕೆಡಿಸಿರುವ ನಂಬಿಕೆಗಳು ಎಷ್ಟೋ ಇವೆ

ಮೊದಲಬಾರಿ ಹೋದಾಗ ದಾರಿ ನಡೆಯುವುದು ಎಷ್ಟು ಚೆನ್ನಾಗಿತ್ತು ಎನ್ನುವುದನ್ನು ಹೇಳಿದ್ದೇನೆ. ಆಮೇಲಿನ ದಿನಗಳಲ್ಲಿ ಈ ದಾರಿ ಅಷ್ಟು ಚೆನ್ನಾಗಿ ಇರಲಿಲ್ಲ. ದಾರಿಯಲ್ಲಿ ನೆರಳು ಕೊಡುತ್ತಿದ್ದ ಮರಗಳು ಇಲ್ಲವಾದವು. ಏಳು ಮೈಲಿ ದೂರ ಒಂದು ಉಪವನದಲ್ಲಿ ನಡೆಯುತ್ತಿದ್ದೇವೆ ಎಂದು ತೋರುತ್ತಿದ್ದ ದಾರಿಯು ನಡಿಗೆ ಕಷ್ಟದ ಪ್ರಯಾಣ ಎಂದು ತೋರಿತು ಈಚೆಗೆ ಈ ದಾರಿಯಲ್ಲಿ ಕಳ್ಳಕಾಕರು ಯಾತ್ರಿಕರನ್ನು ಕಷ್ಟಪಡಿಸಿದ್ದಾರೆ ಎಂದು ವರದಿಯಾಗಿದೆ. ಇದು ತಿರುಪತಿಯ ಯಾತ್ರೆಯನ್ನು ಒಂದು ಸಾಹಸ ಕರ್ಮವಾಗಿ ಮಾರ್ಪಡಿಸಿದೆ ಆದರೆ ಈಗ ಬಸ್ಸಿನ ಏರ್ಪಾಡು ಇರುವುದರಿಂದ ಯಾತ್ರಿಕರು ಈ ದಾರಿಯನ್ನು ಉಪಯೋಗಿಸುವುದು ಕಡಿಮೆ ಸಾವಿರ ಸಾವಿರವಾಗಿ ಬಸ್ಸುಗಳ ಮೂಲಕ ಆಲಯಕ್ಕೆ ಹೋಗುತ್ತಿದ್ದಾರೆ

ಇರುತ್ತ ದೇವಾಲಯದಲ್ಲಿ ಹಿಂದೆ ಇದ್ದ ಸೇವೆಯ ವೈಭವ ಈಗ ಇಲ್ಲ ಎಂದು ಕಾಣುತ್ತದೆ. ಮೊದಲ ಎರಡು ಬಾರಿ ಆಲಯದ 'ತೋಮಾಲಸೇವೆ'

ಎನ್ನುವ ಸೇವೆಗೆ ಸೇವಕರು ಹತ್ತು ಬಣ್ಣದ ಹತ್ತು ತೆರನ ಹೂಗಳನ್ನು ಸುಂದರವಾಗಿ ಪೋಣಿಸಿದ ದಂಡೆ ಹಾರ ಒಂದನ್ನು ಮೂರ್ತಿಯ ಮೇಲೆ ಅರ್ಪಿಸುತ್ತಿದ್ದರು. ಆಮೇಲೆ ಈ ಹಾರ ಕಾಣಲಿಲ್ಲ. ಸಾಲಿಗ್ರಾಮಗಳ ಹಾರ ಒಂದು ಹೂವಿನ ಹಾರದ ಪ್ರತಿಯಾಗಿ ಬಂದಿತು. ಹೀಗೆ ಮಾರ್ಪಟ್ಟ ಸೇವೆ ಮೊದಲಂತೆ ಭವ್ಯ ಆಗುವುದು ಸಾಧ್ಯವಿಲ್ಲ. ಹಿಂದೆ ಸಂತೋಷಪಟ್ಟಿದ್ದವರು, "ಅಯ್ಯೋ, ಈ ಜನ ದೇವರಿಗೆ ಹಾರವಿಲ್ಲದೆ ಮಾಡಿದರೆ" ಎಂದು ವ್ಯಥೆಪಡುವ ಪಾಡು ಒಂದಿತು. ದೇವಾಲಯದ ವ್ಯವಹಾರವೂ ಈಗ ಒಂದು ವ್ಯಾಪಾರದ ಮನೋಭಾವದಿಂದ ನಡೆಯುತ್ತಿರುವಂತೆ ಕಾಣುತ್ತದೆ ಯಾತ್ರಿಕರ ಸಂಖ್ಯೆ ಹೆಚ್ಚುತ್ತಿದೆ. ಆಲಯದ ವರಮಾನ ಸಹ ಹೆಚ್ಚುತ್ತಲೇ ಇದೆ. ಆದರೆ ಸಾಮಾನ್ಯ ಯಾತ್ರಿಕರಿಗೆ ದೊರೆಯುವ ಸೌಕರ್ಯ ಸಾಲದು. ದೇವಾಲಯದ ಕಾರ್ಯಕರ್ತರು ದೇವರಿಗೆ ಬರುತ್ತಿರುವ ಲಕ್ಷಲಕ್ಷ ವರಮಾನವನ್ನು ದೇವರಿಗೆ ರತ್ನಕಿರೀಟವನ್ನು ಮಾಡಿಸಲು ಬಳಸುವ ಯೋಚನೆ ಮಾಡುತ್ತಾರೆ. ತನ್ನನ್ನು ನೋಡಲು ಬರುವ ತನ್ನ ಮಕ್ಕಳಿಗೆ ಯಾತ್ರೆ ಸುಖಕರವಾಗುವಂತೆ ಮಾಡಲು ವರಮಾನವನ್ನು ಬಳಸಿದರೆ ದೇವರು ಹೆಚ್ಚು ಸಂತೋಷಪಟ್ಟಾನು ಎಂದು ಯೋಚಿಸಲಾರರು ಇದರ ಮೇಲೆ ತಪ್ಪಿ ನಡೆದರೆ ದೇವರು ದಂಡಿಸುತ್ತಾನೆ ಎಂಬ ಭಯ ದೇವಾಲಯದ ಸೇವಕರಲ್ಲಿಯೇ ಕಡಮೆಯಾಗಿರುವಂತೆ ಕಾಣುತ್ತದೆ ಹುಂಡಿಯಲ್ಲಿ ಬಿದ್ದ ಹಣ ಕಳವಾಯಿತು ಎಂದು ಒಮ್ಮೊಮ್ಮೆ ವರದಿಯಾಗುತ್ತದೆ.

ಕಾಸು ಉಳ್ಳವರು ಬಾಡಿಗೆಗೆ ತೆಗೆದುಕೊಳ್ಳಲು ಆಡಳಿತಗಾರರು ವಸತಿ ಗೃಹಗಳನ್ನು ಕಟ್ಟಿಸಿದ್ದಾರೆ. ದೇವರ ಯಾತ್ರೆಗೆ ಎಂದು ಒಂದೇ ಭಾವದಿಂದ ಹೋಗುತ್ತಿದ್ದ ಪುಣ್ಯಕ್ಷೇತ್ರ ಈಗ ಹಣವುಳ್ಳವರು ವಿಹಾರಕ್ಕೆಂದು ಬಳಸಬಹುದಾದ ಒಂದು ಪ್ರವಾಸಸ್ಥಾನ ಆಗಿದೆ.

ಈ ಬಂಗಲೆಗಳಲ್ಲಿ ಇಳಿಯುವ ಜನ ಕೆಲವರಾದರೂ ತಾವು ಯಾತ್ರೆಗೆ ಬಂದಿದ್ದೇವೆ ಎನ್ನುವುದನ್ನು ಗ್ರಹಿಸುವುದಿಲ್ಲ ಆಲಯಕ್ಕೆ ಹೋಗುವ ಜನ ಅದರ ಮುಂದುಗಡೆ ಗುಂಪಾಗಿ ಹೋಗುತ್ತಿರುವಾಗ, ಇಂಥವರು ಬಂಗಲೆಗಳಿಂದ ಕಾರುಗಳಲ್ಲಿ ಹೊರಟು ತಮ್ಮ ಕಾರುಗಳ ಹಾರನ್‌ಗಳನ್ನು ಸದ್ದುಮಾಡುತ್ತ, ನಡೆಯುತ್ತಿರುವ ಜನ ಭಯಪಟ್ಟು ತಮಗೆ ದಾರಿ ಕೊಡುವಂತೆ ಮಾಡಿ, ದ್ವಾರದ ಮುಂದೆ ಕಾರನ್ನು ನಿಲ್ಲಿಸುತ್ತಾರೆ.

ಒಟ್ಟಿನಲ್ಲಿ ಸ್ಥಳ ಒಂದು ಪುಣ್ಯಕ್ಷೇತ್ರ ಎಂಬ ಭಾವ ಬಲ್ಲವರು ಪುಣ್ಯವಂತರು ಎಂಬ ಜನರಲ್ಲಿ ಕಡಮೆಯಾಗಿದೆ ಎಂದು ಕಾಣುತ್ತದೆ ಈ ಕುತ್ತ ಸಾಮಾನ್ಯ ಜನರನ್ನು ಮುಟ್ಟುವುದಿಲ್ಲ ಅವರ ಅಚ್ಚುಮನಸ್ಸು ರಕ್ಷೆಯಾಗಿ ಅವರನ್ನು ಕಾಯುತ್ತದೆ.

೫

## ಕ್ಷೇತ್ರಗಳ ಮಾಹಾತ್ಮ್ಯೆ

ಕ್ಷೇತ್ರಗಳನ್ನು ಕುರಿತ ಕಥೆಗಳು ಒಮ್ಮೊಮ್ಮೆ ನೀತಿಯನ್ನು ಬೋಧಿಸುವವಾಗಿರುತ್ತವೆ ಈಗ ಬೆಂಗಳೂರು ನಗರದ ಒಂದು ಭಾಗವಾಗಿರುವ ಪೂರ್ವದ ಬಸವನಗುಡಿ ಗ್ರಾಮದ ಬಸವಣ್ಣನ ದೇವಾಲಯ ಈ ಸುತ್ತಿನಲ್ಲಿ ತುಂಬ ಪ್ರಸಿದ್ಧವಾದ ಆಲಯ ಇದಕ್ಕೆ ಸಂಬಂಧಿಸಿ ವರ್ಷದಲ್ಲಿ ಒಮ್ಮೆ ಒಂದು ಪರಿಷೆ ನಡೆಯುತ್ತದೆ ಇದನ್ನು ಕಡಲೇಕಾಯಿ ಪರಿಷೆ ಎಂದು ಕರೆಯುತ್ತಾರೆ. ಸುತ್ತಮುತ್ತಣ ಪ್ರದೇಶದಲ್ಲಿ ಬೆಳೆದ ಕಡಲೇಕಾಯಿ ಬೆಳೆಯ ಗಣ್ಯವಾದ ಒಂದು ಭಾಗ ಪರಿಷೆಯ ದಿನ ಗುಡಿಯ ಸುತ್ತಿನ ನೆಲದಲ್ಲಿ ವ್ಯಾಪಾರಕ್ಕೆ ಬರುತ್ತದೆ. ಮಾರುವವರದು ನೂರಾರು ಅಂಗಡಿ, ಕೊಳ್ಳುವವರು ಸಾವಿರಾರು ಜನ. ಆ ದಿನ ಬೆಂಗಳೂರಿನಲ್ಲಿ ಕಡಲೇಕಾಯಿ ತಿನ್ನದ ನರಪಿಳ್ಳೆ ಒಬ್ಬ ಇರುವುದಿಲ್ಲ. ಇದನ್ನು ಕುರಿತು ಒಂದು ಐತಿಹ್ಯ.

ಹಿಂದೆ ಒಂದು ಕಾಲದಲ್ಲಿ ಈ ಗ್ರಾಮದಲ್ಲಿ ಒಬ್ಬ ಶೆಟ್ಟಿ ಇದ್ದ. ಅನೇಕ ಎಕರೆ ನೆಲದ ಇವನ ಆಸ್ತಿ ವರ್ಷ ವರ್ಷ ಇವನು ಬಯಸಿದಷ್ಟು ಕಡಲೇಕಾಯಿ ಬೆಳೆಯನ್ನು ಕೊಡುತ್ತಿತ್ತು ಇದರಿಂದ ಅವನು ತುಂಬ ಹಣವೊಂದಿಗನಾದ. ಜೊತೆಗೆ ತುಂಬ ಜಿಪುಣ ಆದ. ಊರಿನಲ್ಲಿ ನಂದಿಯ ಗುಡಿಯೊಂದು ಇದ್ದಿರಬೇಕು. ಗ್ರಾಮದ ಈ ದೇವರು ಈ ಪುಣ್ಯವಂತಶೆಟ್ಟಿ ಜಿಪುಣನಾಗಿ ಕೆಡಬಾರದು ಎಂದು ಅವನನ್ನು ಕಾಪಾಡಬೇಕೆಂದು ನಿಶ್ಚಯಿಸಿದನು, ಒಂದು ವರ್ಷ ಕಡಲೇಕಾಯಿಯ ಗಿಡ ಎಕರೆ ಎಕರೆ ನೆಲದ ಹರಹಿನಲ್ಲಿ ಸೊಂಪಾಗಿ ಬೆಳೆದಿದ್ದಾಗ ಒಂದು ಗೂಳಿಯಾಗಿ ಬಂದು ಹೊಲವನ್ನು ಹೊಕ್ಕು ಗಿಡವನ್ನು ಮೇಯಲು ಆರಂಭಿ

ಸಿದನು. ಹೊಲದ ಕಾವಲ ಜನ ಗೂಳಿಯನ್ನು ಅಟ್ಟಲು ನೋಡಿದರು. ಅದು ಇವರ ಮೇಲೆ ಬಿದ್ದಿತು. ಹಾಯುತ್ತದೆ ಎಂದು ಹೆದರಿ ಇವರು ಓಡಿದರು. ಒಬ್ಬರಿಗೆ ಸಗ್ಗುವುದಿಲ್ಲ ಎಂದು ಹತ್ತು ಜನ ಬಂದರು. ಆದರೂ ಗೂಳಿಯನ್ನು ಓಡಿಸುವುದಕ್ಕೆ ಆಗಲಿಲ್ಲ ಅವರಲ್ಲಿ ಕೆಲವರು ಊರಿಗೆ ಬಂದು ಶೆಟ್ಟಿಗೆ ಈ ಸಂಗತಿಯನ್ನು ತಿಳಿಸಿದರು. ಅಯ್ಯೋ ಮುಟ್ಠಾಳ ಮಕ್ಕಳೆ, ದೊಡ್ಡ ಧೈರ್ಯ ಧೀರ ಜನ ನಿಮಗೆ ಒಂದು ಗೂಳಿಯನ್ನು ಓಡಿಸುವುದಕ್ಕೆ ಯೋಗ್ಯತೆ ಇಲ್ಲದೆ ಹೋಯಿತೆ, ಎಂದು ಅವರನ್ನು ಅಲ್ಲಗಳೆಯುತ್ತಾ ಶೆಟ್ಟಿ ತಾನೇ ಹೊಲಕ್ಕೆ ಹೋದನು. ದೊಣ್ಣೆಯನ್ನು ಎತ್ತಿಕೊಂಡು ಗೂಳಿಯ ಬಳಿಗೆ ನಡೆದನು. ಗೂಳಿ ಇವನನ್ನು ಹಾಯುವುದಕ್ಕೆ ಬರಲಿಲ್ಲ. ಸುಮ್ಮನೆ ನಿಂತು ಇವನನ್ನು ನಿಟ್ಟಿಸಿ ನೋಡುತ್ತಿತ್ತು. ಹತ್ತಿರ ಹೋದಂತೆ ಇವನಿಗೆ ಆ ನೋಟ ಅದೇನೋ ರೀತಿಯ ವಿಚಿತ್ರ ನೋಟ ಎನ್ನಿಸಿತು. ಇದೇನು ನೋಟ ಎಂದುಕೊಳ್ಳುತ್ತ ಇವನು ಗೂಳಿಯನ್ನು ಹೊಡೆಯಲು ದೊಣ್ಣೆಯನ್ನು ಎತ್ತಿದನು ಎತ್ತಿದ ದೊಣ್ಣೆ ಹಾಗೆಯೇ ನಿಂತಿತು. ಇವನಿಗೆ ಅದನ್ನು ಇಳಿಸಿ ಗೂಳಿಯನ್ನು ಮುಟ್ಟಲು ಆಗ ಲಿಲ್ಲ. ಶೆಟ್ಟಿ ಆ ಕ್ಷಣ ಇದು ಏನೋ ದೈವದ ವ್ಯಾಪಾರ ಎಂದುಕೊಂಡನು. ಅದೇ ಕ್ಷಣ ಗೂಳಿ ಇವನಿಗೆ, "ನಿನಗೆ ಕೊಟ್ಟಿರುವ ಐಶ್ವರ್ಯ ನಿನ್ನ ಒಬ್ಬನಿಗೇ ಅಂತ ಕೊಟ್ಟಿದ್ದಲ್ಲ, ಕಾಸು ಕೂಡಿಸುವ ಕೃಪಣ ಆಗಬೇಡ. ದಾನಿಯಾಗು," ಎಂದಿತು. ಶೆಟ್ಟಿ ಆಗ ಈಶ್ವರನ ವಾಹನ ಆದ ನಂದಿ ಈ ರೂಪದಲ್ಲಿ ಬಂದು ತನ್ನನ್ನು ಕಾಪಾಡುತ್ತಿದ್ದಾನೆ ಎಂದುಕೊಂಡನು. ಅಪ್ಪಣೆ ದೇವರೆ, ಎಂದನು. ನಂದಿ, "ಊರಿನಲ್ಲಿ ನನಗೆ ಒಳ್ಳೆಯ ಆಲಯವನ್ನು ಕಟ್ಟಿ ಪೂಜೆ ನಡೆಸು. ವರ್ಷದಲ್ಲಿ ಒಮ್ಮೆ ಈ ದಿವಸದ ನೆನಪಾಗಿ ಒಂದು ಪರಿಷೆ ನಡೆಸು," ಎಂದನು; ಕಣ್ಣಿನಿಂದ ಮರೆಯಾದನು. ದೇವರು ಪ್ರತ್ಯಕ್ಷನಾಗಿ ಮಾಡಿದ ಅಪ್ಪಣೆಯನ್ನು ಸೇವಕರಿಗೆ ತಿಳಿಸಿ ಶೆಟ್ಟಿ ಊರಿಗೆ ಬಂದನು ಈ ಆಲಯವನ್ನು ಕಟ್ಟಿಸಿ ನಂದಿಯ ಪೂಜೆಗೆ ಏರ್ಪಾಟುಮಾಡಿ ದಾನಿಯಾಗಿ ಬೆಳೆದು ಉದ್ಧಾರವಾದನು

ಇದು ಎಪ್ಪತ್ತು ವರ್ಷದ ಹಿಂದೆ ನಾನು ಬಿ ಎ. ಓದಿಗಾಗಿ ಬೆಂಗಳೂರಿಗೆ ಬಂದು ನಿಂತಾಗ ಕೇಳಿದ ಕತೆ. ಆ ವರ್ಷಗಳಲ್ಲಿ ಪರಿಷೆ ತುಂಬ ವೈಭವದಿಂದ ನಡೆಯುತ್ತಿತ್ತು. ನಾನು ನನ್ನ ಸ್ನೇಹಿತರು, ಕಾಲೇಜಿನ ವಿದ್ಯಾರ್ಥಿಗಳು,

ಪರಿಷೆಗೆ ಬಂದು ಕತೆಯನ್ನು ಕೇಳಿ ನೇರು ಸೇರು ಕಡಲೇಕಾಯಿ ಕೊಂಡು ಪರಿಷೆಯ ದಿನ ತಿಂದದ್ದುಂಟು

ಈಚೆಗೆ ಇಲ್ಲಿ ಹೊಸದೊಂದು ಕ್ಷೇತ್ರ ಹುಟ್ಟಿಕೊಂಡಿದೆ. ಬಸವಣ್ಣನ ದೇವಾಲಯದಿಂದ ಸುಮಾರು ಅರ್ಧ ಮೈಲಿ ದೂರದಲ್ಲಿ ಬಸವನಗುಡಿಯ ಗುಡ್ಡದಂಥದೇ ಇನ್ನೊಂದು ಗುಡ್ಡ ಇದೆ. ದಿಟದಲ್ಲಿ ಇಲ್ಲಿ ತೀರ ಹತ್ತಿರ ಹತ್ತಿರ ವಾಗಿ ಐದೋ ಆರೋ ಗುಡ್ಡಗಳಿರುವುದು ಕಾಣುತ್ತದೆ. ದಕ್ಷಿಣದ ಕೊನೆಗಿರು ವುದು ಇವುಗಳಲ್ಲೆಲ್ಲ ಎತ್ತರದ ಗುಡ್ಡ, ಇದರ ತಲೆಯಲ್ಲಿ ಎಪ್ಪತ್ತು ವರ್ಷದ ಹಿಂದೆ ನಾನು ನೋಡಿದಾಗಲೇ ಒಂದು ಹಳೆಯ ಕಾಲದ ದೇಗುಲ ಇತ್ತು. ಅದ ರಲ್ಲಿ ಯಾವುದಾದರೂ ಮೂರ್ತಿ ಇದ್ದಿತೇ ನನಗೆ ನೆನಪಿಲ್ಲ ಪೂಜೆ ಗೀಜೆ ಏನೂ ನಡೆಯುತ್ತಿರಲಿಲ್ಲ. ಅದರ ವಿಷಯ ಜನಜನಿತವಾಗಿ ಒಂದು ಕತೆ. ಆಗ್ಗೆ ಸ್ವಲ್ಪ ಹಿಂದೆ ಮೈಸೂರು ರಾಜ್ಯದ ಮುಖ್ಯ ನ್ಯಾಯಾಲಯದ ಒಬ್ಬ ನ್ಯಾಯಾಧೀಶ ನರಹರಿರಾಯ ಎಂಬವರು ಇದ್ದರು. ತಕ್ಕಷ್ಟು ವಯಸ್ಸಿನ ಈ ಮಹನೀಯರು ಇನ್ನೇನು ವಿಶ್ರಾಂತರಾಗಬೇಕು ಎನ್ನುವ ಕಾಲಕ್ಕೆ ಕೋಲಾರದ ನಾಗರತ್ನ ಎಂಬ ತರುಣಿ ವೇಶ್ಯೆಯೊಡನೆ ಸ್ನೇಹ ಬೆಳೆಸಿದರು. ವಯಸ್ಸಾದ ಹೆಂಡತಿ ಮನೆಯಲ್ಲಿ ಇದ್ದಾರೆ. ದೊಡ್ಡ ಸ್ಥಾನದಲ್ಲಿರುವ ಈ ಹಿರಿಯರು ಆಕೆಯನ್ನು ಅನಾದರಿಸಿ ಈ ತರುಣಿಯೊಡನೆ ಸರಸದಲ್ಲಿ ಬಾಳುವುದು ಸಮಾಜದ ದೃಷ್ಟಿ ಯಿಂದ ಸರಿಯಲ್ಲ. ಹೀಗೆಂದು ಯೋಚಿಸಿ ರಾಯರು ಸಂಗತಿಯನ್ನು ಪತ್ನಿಗೆ ತಿಳಿಸಿ ಹುಡುಗಿಯನ್ನು ಜೊತೆಯಾಗಿರಿಸಿಕೊಳ್ಳಲೇ ಎಂದು ಕೇಳಿದರು. ಆ ಪತ್ನಿ ಮಹಾತಾಯಿ, "ನೀವೇನು ತಿಳಿಯದವರೇ? ನಾನು ನಿಮಗೆ ಹೇಳಿ ಕೊಡಬಲ್ಲೆನೆ? ನಿಮಗೆ ಚೆನ್ನ ಎಂದು ಕಂಡದ್ದನ್ನು ನೀವು ಮಾಡಿ," ಎಂದರು. ಹುಡುಗಿ ಚೆಲುವೆ, ಅಲ್ಲದ ಬಹು ಚೆನ್ನಾಗಿ ಹಾಡುತ್ತಿದ್ದಳು. ರೂಪು, ಹಾಡು ಎರಡೂ ಕಾರಣವಾಗಿ ರಾಯರು ಅವಳಿಗೆ ಮನಸೋತಿದ್ದರು. ವಿಶ್ರಾಂತರಾದ ಮೇಲೆ ಈ ಗುಡ್ಡದ ಆಲಯದ ಕಟ್ಟಡವನ್ನು ಚೆನ್ನಮಾಡಿಸಿ ಇಲ್ಲಿ ಅವಳೊಡನೆ ವಿಹರಿಸುತ್ತ ನಿಂತರು.

ನಾನು ಮೊದಲು ಆಲಯವನ್ನು ನೋಡುವ ವೇಳೆಗೆ ರಾಯರು ತೀರಿ ಕೊಂಡಿದ್ದರು ಅವರ ಗೆಳತಿ ತೀರಿಕೊಂಡಿದ್ದಳೆಂದು ಕಾಣುತ್ತದೆ. ಆಲಯ ಆಷ್ಟೇನೂ ಒಳ್ಳೆಯ ಸ್ಥಿತಿಯಲ್ಲಿರಲಿಲ್ಲ.

ಕೆಲವು ವರ್ಷದ ಬಳಿಕ ಮದರಾಸಿನ ಒಂದು ಕಾಲೇಜಿನಲ್ಲಿ ಕನ್ನಡದ ಇಲ್ಲವೆ ಸಂಸ್ಕೃತದ ಅಧ್ಯಾಪಕರಾಗಿ ಕೆಲಸಮಾಡಿ ವಿಶ್ರಾಂತರಾಗಿದ್ದ ಒಬ್ಬ ಶಾಸ್ತ್ರಿಗಳು ಬೆಂಗಳೂರಿಗೆ ಬಂದರು. ಅವರ ತಂದೆ ಸಹ ಮದರಾಸಿನ ಕಾಲೇಜಿನಲ್ಲಿ ಭಾಷೆಯ ಅಧ್ಯಾಪಕರಾಗಿದ್ದವರು. ತಂದೆಯ ಹೆಸರು ಸಿದ್ಧಾಂತಿ ಶಿವಶಂಕರ ಶಾಸ್ತ್ರಿ, ಮಗನ ಹೆಸರು ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿ. ಈ ಶಾಸ್ತ್ರಿಗಳು ಏಕಾಂಗಿಯಾಗಿದ್ದರು ಎಂದು ಕಾಣುತ್ತದೆ ಕೆಲವು ದಿನ ನಮ್ಮ ವಿಸ್ತರಣದಲ್ಲಿ, ಬದಿಯ ಬಸವನಗುಡಿಯ ಬೀದಿಗಳಲ್ಲಿ, ಕಾಣಿಸಿಕೊಳ್ಳುತ್ತಿದ್ದ ಇವರು ಕೊನೆಗೆ ಈ ಗುಡ್ಡದಲ್ಲಿನ ರಾಯರ ವಿಲಾಸಮಂದಿರದ ಈ ಕಟ್ಟಡ ಬರಿದಾಗಿರುವುದನ್ನು ನೋಡಿ ತಾವು ಅಲ್ಲಿ ವಾಸಮಾಡತೊಡಗಿದರು. ಇವರ ಜೀವನದ ವಿಚಾರ ನನಗೇನೂ ತಿಳಿಯದು. ಆದರೆ ಇವರು ತುಂಬ ತೇಜಸ್ವಿಯಾಗಿ ಕಾಣುತ್ತಿದ್ದರು. ಕೊರಳ ಮೇಲೆ ಹಲವು ರುದ್ರಾಕ್ಷಿ ಮಾಲೆಗಳು, ಮುಖದ ತುಂಬ ವಿಭೂತಿ, ಹಣೆಯ ಮಧ್ಯೆ ದೊಡ್ಡ ಅಕ್ಷತೆ, ನೋಡುವುದಕ್ಕೆ ಪೂರ್ವಕಾಲದ ಒಬ್ಬ ಋಷಿ ಎಂಬಂತೆ ಕಾಣುವರು ಇವರು ನನ್ನ ಮನೆಯ ಪಕ್ಕದ ಮನೆಯ ಒಡೆಯರು ಶ್ರೀ ಶೇಷಗಿರಿರಾಯರನ್ನು ಆ ಮುನ್ನ ಕಂಡಿದ್ದರೆಂದು ತೋರುತ್ತದೆ. ಹಲವು ಸಲ ಬಂದು ರಾಯರನ್ನು ಮಾತನಾಡಿಸಿಕೊಂಡು ಹೋದಾಗ ನಾನು ಇವರನ್ನು ನೋಡಿದ್ದೆನು. ಕೆಲವು ದಿವಸದಲ್ಲಿ ನನ್ನ ಸಹಪಾಠಿ ನಾಗಪ್ಪನವರು "ಈ ಶಾಸ್ತ್ರಿಗಳು ತುಂಬ ಮಾತುಗಾರರು. ಏನೇನೋ ಸಾಧನೆಗಳನ್ನು ಮಾಡಿ ವಿಶೇಷ ಶಕ್ತಿಗಳನ್ನು ಪಡೆದಿದ್ದಾರ ಎಂದು ಕಾಣುತ್ತದೆ," ಎಂದು ಒಮ್ಮೆ ನನಗೆ ತಿಳಿಸಿದರು. ಆಮೇಲೆ ಒಂದು ದಿನ, "ಇವರು ಸುಬ್ರಹ್ಮಣ್ಯ ಸ್ವಾಮಿಯ ಉಪಾಸಕರು. ಇವರಿಗೆ ಸಿದ್ಧಿಗಳು ದೊರಕಿರುವುದು ಆ ದೇವರ ಅನುಗ್ರಹದಿಂದ, ಎಂದು ಹೇಳುತ್ತಾರೆ," ಎಂದು ತಿಳಿಸಿದರು. ಸಿದ್ಧಿಗಳಲ್ಲಿ ಒಂದು ಯಾವುದು ಎಂದರೆ ತಮ್ಮ ಭುಜದಷ್ಟ ಎತ್ತರದ ನಾಗಬೆತ್ತ ಒಂದನ್ನು ಇವರು ನೆಲದಮೇಲೆ ನಿಲ್ಲಿಸಿದರೆ ಅದು ಕೆಳಕ್ಕೆ ಬೀಳುತ್ತಿರಲಿಲ್ಲ, ನೇರವಾಗಿ ನಿಂತಿರುವುದು. ಈ ಪವಾಡದ ಮಾತು ಜನರಲ್ಲಿ ಹಬ್ಬಿ ಜನ ಇವರ ಬಳಿಗೆ ಅನುಗ್ರಹ ಬೇಡಿ ಬರುವುದು ಮೊದಲಾಯಿತು. ಮೆಲ್ಲನೆ ಹೀಗೆ ಬೆಳೆದ ಹೆಸರಿನ ಪ್ರಭಾವದಲ್ಲಿ ಇವರು ಈ ಗುಡ್ಡ ಸುಬ್ರಹ್ಮಣ್ಯ ಕ್ಷೇತ್ರ. ಇದನ್ನು ತಾನು ಸ್ಥಾಪಿಸಿದ್ದೇನೆ ಎಂದು ಹೇಳಿಕೊಂಡರು. ಹೀಗೆಂದು ಪ್ರಚಾರ ಸ್ವಲ್ಪ ನಡೆಯಿತು. ತಮಿಳುನಾಡಿನಿಂದ

ಬಂದು ನಗರದ ದಂಡಿನ ಪ್ರದೇಶದಲ್ಲಿ ಬಾಳುತ್ತಿರುವ ತಮಿಳ ಶೈವಭಕ್ತರು ಈ ಕ್ಷೇತ್ರಕ್ಕೆ ಬಂದರು. ತಮಿಳುನಾಡಿನ ಪಳನಿ ಕ್ಷೇತ್ರದಂತೆ ಇದು ಒಂದು ಕ್ಷೇತ್ರ ಎಂದು ಭಾವಿಸಿ ಶಾಸ್ತ್ರಿಗಳಿಗೆ ಶಿಷ್ಯರಾದರು. ಶಾಸ್ತ್ರಿಗಳು ಕ್ಷೇತ್ರವನ್ನು ವಡಪಳನಿ ಎಂದು ಕರೆದರು, ಎಂದರೆ ಉತ್ತರ ದಿಕ್ಕಿನ ಪಳನಿ. ನಮ್ಮಲ್ಲಿ ದಕ್ಷಿಣಕಾಶಿ, ಚಿಕ್ಕತಿರುಪತಿ ಮುಂತಾಗಿ ಪ್ರಸಿದ್ಧ ಕ್ಷೇತ್ರಗಳ ಪ್ರತಿನಿಧಿ ಕ್ಷೇತ್ರಗಳು ಇರುವುದು ಉಂಟಷ್ಟೆ, ದಕ್ಷಿಣಕಾಶಿ ಎಂಬಂತೆ ಇದು ಉತ್ತರ ಪಳನಿಯಾಯಿತು.

ತಮಿಳು ದೇಶದಲ್ಲಿ ಕಾರ್ತಿಕೇಯನ ಭಕ್ತರು ಅವನ ಜನ್ಮದ ದಿನ ಪಳನಿಗೆ ಯಾತ್ರೆ ಹೋಗುವುದು ವಾಡಿಕೆ. ಬೆಂಗಳೂರು ದಂಡಿನ ಕಾರ್ತಿಕೇಯ ಭಕ್ತ ಸಮುದಾಯ ಅಂದಿನಿಂದ ದೇವರ ಆ ಜನ್ಮದಿನ ಈ ಕ್ಷೇತ್ರಕ್ಕೆ ಯಾತ್ರೆಮಾಡಲು ಆರಂಭಿಸಿದರು. ಆ ಯಾತ್ರೆ ಈಗಲೂ ವರ್ಷ ವರ್ಷ ನಡೆಯುತ್ತದೆ. ಕ್ಷೇತ್ರ ಗಣ್ಯ ಕ್ಷೇತ್ರ ಆಗಿದೆ. ಆ ದಿನ ಇಲ್ಲಿ ನಡೆಯುವ ಪರಿಷೆ ಹತ್ತಿರ ಹತ್ತಿರ ಬಸವನ ಗುಡಿಯ ಕಡಲೇಕಾಯಿ ಪರಿಷೆಯಷ್ಟೇ ದೊಡ್ಡದಾಗಿದೆ, ಮುಖ್ಯವಾಗಿದೆ.

ಶಾಸ್ತ್ರಿಗಳು ಮೆರೆದ ಒಂದು ಪವಾಡದಿಂದ ಕ್ಷೇತ್ರಕ್ಕೆ ಗಣ್ಯತೆ ಬಂದಿತು ಎನ್ನುವುದು ಸ್ಪಷ್ಟ. ಇವರ ಮಾತು ಬಂದಾಗ ನಾಗಪ್ಪನವರು ಒಂದು ದಿನ, "ಶಾಸ್ತ್ರಿಗಳು ಮೆರೆಯುತ್ತಿರುವ ಪವಾಡ ದಿಟದಲ್ಲಿ ಪವಾಡ ಅಲ್ಲ. ನಾಗಬೆತ್ತದ ಬುಡದಲ್ಲಿ ದೊಡ್ಡದೊಂದು ಸೀಸದ ಗಟ್ಟಿಯ ಕಟ್ಟನ್ನು ಕಟ್ಟಿಸಿದ್ದಾರೆ. ಸೀಸದ ಭಾರದಿಂದ ಕೋಲು ನೇರವಾಗಿ ನಿಲ್ಲುತ್ತದೆ," ಎಂದು ನನಗೆ ಹೇಳಿದರು.

ಇದು ದಿಟ ಇರಬಹುದು. ಹೀಗಲ್ಲದೆ ಕೋಲು ಹೇಗೆ ನೇರವಾಗಿ ನಿಂತೀತು ? ಇರುತ್ತ ಯಾರೂ ಈ ವಿವರಣೆಯನ್ನು ಜನರಲ್ಲಿ ಪ್ರಸಾರ ಮಾಡ ಲಿಲ್ಲ. ಜನರ ನಂಬಿಕೆ ಭದ್ರವಾಗಿ ನಿಂತಿದೆ. ಇದಕ್ಕೆ ಸಾಧಕ ಸೂತ್ರ ಜನರನ್ನು ಕಾಪಾಡುವುದು ಕ್ಷೇತ್ರದ ಮಹಿಮೆ ಅಲ್ಲ, ಅದನ್ನು ಕುರಿತ ಅವರ ನಂಬಿಕೆ, ಎನ್ನುವುದು. ಯೇಸು ಕ್ರಿಸ್ತಗುರು ಒಮ್ಮೆ ಒಂದು ಕೂಟದಲ್ಲಿ ನಿಂತಿದ್ದಾಗ ಒಂದು ರೋಗದಿಂದ ಕಷ್ಟಪಡುತ್ತಿದ್ದ ಒಬ್ಬ ಹೆಂಗಸು, ಈ ದೈವೀ ಮಾನವ ನನ್ನು ಮುಟ್ಟಿದರೆ ತನ್ನ ವ್ಯಾಧಿ ವಾಸಿಯಾಗುತ್ತದೆ, ಎಂಬ ನಂಬಿಕೆಯಲ್ಲಿ ಆತನನ್ನು ಮುಟ್ಟಿದಳಂತೆ. ಅವಳ ವ್ಯಾಧಿ ವಾಸಿ ಆಯಿತು. ಇದು ತಿಳಿದು ಕ್ರಿಸ್ತ ಗುರು ಅವಳಿಗೆ, "Woman! Thy faith has made thee whole," ಎಂದನಂತೆ. "ಅವ್ವ, ನಿನ್ನ ನಂಬಿಕೆಯಿಂದ ವ್ಯಾಧಿ ಗುಣ

ಆಯಿತು ” ನಂಬಿಕೆ ತರುವ ಮನೋದಾರ್ಢ್ಯದ ಪ್ರಭಾವದಿಂದ ದೇಹದಲ್ಲಿ ಹಲವು ಶಕ್ತಿ ಮೂಡುತ್ತವೆ ಎನ್ನುವುದು ಬಹು ಜನರ ಅನುಭವಕ್ಕೆ ಬಂದಿರುವ ಸತ್ಯ. ಕ್ಷೇತ್ರದ ಸ್ಥಾಪಕ ಶಾಸ್ತ್ರಿಗಳ ಪವಾಡ ಪವಾಡವೇ ಅಲ್ಲವೇ ಎನ್ನುವುದು ದೊಡ್ಡ ಸಂಗತಿಯಲ್ಲ. ಭಕ್ತರಾಗಿ ಬರುವ ಜನ ಕ್ಷೇತ್ರದಲ್ಲಿ ಸು ಬ್ರಹ್ಮಣ್ಯನ ದರ್ಶನ ಆಗುತ್ತದೆ ಎಂದು ನಂಬಿರುವುದು ಮುಖ್ಯ ಸಂಗತಿ.

ಪುಣ್ಯಕ್ಷೇತ್ರ ವಿಶೇಷಮಹಿಮೆಯ ಸ್ಥಳ ಎಂದು ಪ್ರಸಿದ್ಧವಾಗಿರುವ ಮತ್ತೊಂದು ಕ್ಷೇತ್ರದ ಕತೆಯನ್ನು ಇಲ್ಲಿ ಹೇಳುವುದು ಯುಕ್ತ. ಇದು ಆಂಧ್ರ ಪ್ರದೇಶದ ಮಂಗಳಗಿರಿಯ ನರಸಿಂಹದೇವರ ಮಂದಿರ ಇದರಲ್ಲಿ ಭಕ್ತರು ನರಸಿಂಹದೇವರಿಗೆ ಪಾನಕವನ್ನು ನೈವೇದ್ಯವಾಗಿ ಒಪ್ಪಿಸುತ್ತಾರೆ. ತುಂಬ ಪಾನಕ ಮಾಡಿ ದೇವರ ಬಾಯಲ್ಲಿ ಅರ್ಚಕರು ಅದನ್ನು ಮಂತ್ರ ಹೇಳುತ್ತ ಸಮರ್ಪಿಸುತ್ತಾರ. ಎಷ್ಟೋ ಒಂದು ಅಳತೆಯ ಪಾನಕ ಅರ್ಪಿಸಿದಂತೆ ಮೂರ್ತಿಯ ಒಳಕ್ಕೆ ಹೋಗುತ್ತದೆ. ಆ ಅಳತೆ ಮುಟ್ಟಿದಾಗ ಮೂರ್ತಿಯ ಬಾಯಲ್ಲಿ ಅರ್ಪಿಸಿದ ಪಾನಕ ಒಳಕ್ಕೆ ಹೋಗುವುದಿಲ್ಲ, ಹೊರಕ್ಕೆ ಬರುತ್ತದೆ ಆಗ ದೇವರಿಗೆ ಇಷ್ಟವಾದಷ್ಟು ಪಾನಕವನ್ನು ಅರ್ಪಿಸಿದ್ದಾಯಿತು ಎಂದು ಅರ್ಪಣ ಕಾರ್ಯವನ್ನು ನಿಲ್ಲಿಸುತ್ತಾರೆ ಪಾನಕ ಹೀಗೆ ಒಳಕ್ಕೆ ಹೋಗದೆ ನಿಲ್ಲುವುದು ದೇವರು ತನ್ನ ಇಚ್ಛೆಯನ್ನು ತಿಳಿಸುವ ಒಂದು ಕ್ರಮ ಎಂದು ಭಕ್ತರಾದವರು ಈಗಲೂ ನಂಬುತ್ತಾರೆ. ಭಕ್ತರಲ್ಲದವರು ಒಬ್ಬರು ನನಗೆ ಒಮ್ಮೆ ಈ ಮಾತನ್ನು ಹೇಳಿದರು. ಮೂರ್ತಿಯ ಗಂಟಲ ಸ್ಥಳದಲ್ಲಿ ಕಂಠದ ರಂಧ್ರಕ್ಕೆ ಅಡ್ಡಲಾಗಿ ಬರುವಂತೆ ಕೀಲುವುಳ್ಳ ಲೋಹದ ನಾಲಗೆ ಮೂರ್ತಿಯ ಕಂಠದ ಆ ಸ್ಥಳದಲ್ಲಿ ಇದೆ. ಪಾನಕ ಒಳಗೆ ತುಂಬಿದಂತೆ ಅದು ನಾಲಗೆಯನ್ನು ಎತ್ತುತ್ತ ಹೋಗುತ್ತದೆ. ಮೂರ್ತಿಯ ಒಳಭಾಗ ತುಂಬಿದಾಗ ನಾಲಗೆ ಪಾನಕದಮೇಲೆ ಕಂಠದಲ್ಲಿ ಸರಿಯಾಗಿ ನಿಂತು ರಂಧ್ರವನ್ನು ಮುಚ್ಚುತ್ತದ. ಆಮೇಲೆ ಅರ್ಪಿಸಿದ ಪಾನಕ ಒಳಕ್ಕೆ ಹೋಗುವಂತಿಲ್ಲ, ಹಿಂದಕ್ಕೆ ಬರುತ್ತದೆ

ಈ ವಿವರಣೆಯ ಮಾತು ನಿಜ ಎಂದು ತೋರುತ್ತದೆ ಆದರೆ ಇದನ್ನು ಪ್ರಮಾಣ ಮಾಡುವುದು ಹೇಗೆ? ಯಾವನೋ ಒಬ್ಬ ಮಾಡೋಣ ಎಂದ : ಕ್ಷೇತ್ರದ ಅಧಿಕಾರಿಗಳು ಅದಕ್ಕೆ ಒಪ್ಪುವರೇ ?

ಇಲ್ಲಿ ಸಹ ವಸ್ತು ಸ್ಥಿತಿ ಏನು ಎನ್ನುವುದು ಮುಖ್ಯವಲ್ಲ, ಜನರ ನಂಬಿಕೆಯೇ ಮುಖ್ಯ.

ಕ್ಷೇತ್ರಗಳು ಇರಬೇಕೇ ಬೇಡವೇ ಎನ್ನುವುದೇ ನಮ್ಮ ಧರ್ಮದಲ್ಲಿ ಒಂದು ಪ್ರಶ್ನೆಯಾಗಿ ನಿಂತಿದೆ. ನಮ್ಮ ಪೂರ್ವಿಕರು ಪುಣ್ಯಕ್ಷೇತ್ರವೆಂದು ಕರೆದ ಸ್ಥಾನಗಳು ನೂರಾರು ಇವೆ ಜನ ಈ ಸ್ಥಳಗಳನ್ನು ನಂಬಿ, ಎಷ್ಟೋ ದೂರದಿಂದ ಎಷ್ಟೋ ಕಷ್ಟಪಟ್ಟು ಪ್ರಯಾಣಮಾಡಿ ಮುಟ್ಟಿ, ಮೂರ್ತಿಗಳ ದರ್ಶನಮಾಡಿ, ಉತ್ಸವ ಗಳಲ್ಲಿ ಕಲೆತು ಜೊತೆಯ ಯಾತ್ರಿಕರೊಂದಿಗೆ ಬೆರೆತು, ಧನ್ಯಭಾವದಿಂದ ತಮ್ಮ ಸ್ಥಳಗಳಿಗೆ ಹಿಂತಿರುಗುತ್ತಾರೆ. ಹೀಗೆ ಮಾಡುವುದರಲ್ಲಿ ತಾವು ಹುಟ್ಟಿ ಬೆಳೆದ ಪ್ರದೇಶ ಅಷ್ಟೇ ಅಲ್ಲ ತಮ್ಮ ದೇಶ, ಹಿಮಗಿರಿಯಿಂದ ರಾಮಸೇತುವಿನ ವರೆಗಿನ ನೆಲವೆಲ್ಲ ತಮ್ಮ ತಾಯಿನೆಲ, ಎನ್ನುವ ಭಾವವನ್ನು ಅನುಭವಿಸುತ್ತಾರೆ ಇದು ಕ್ಷೇತ್ರಗಳು ನಮ್ಮ ಜನಕ್ಕೆ ಸಾಧಿಸಿಕೊಟ್ಟಿರುವ ದೊಡ್ಡ ಭಾಗ್ಯ. ಇಷ್ಟೇ ದಿಟವಾಗಿ ಕ್ಷೇತ್ರಯಾತ್ರೆಗಳು ಕೆಲವುವೇಳೆ ತುಂಬ ಪ್ರಯಾಸದ ವ್ಯಾಪಾರ ಆಗಿ ಯಾತ್ರಿಕರು ತುಂಬ ಕಷ್ಟಪಡುವುದು ಕಾಣುತ್ತದೆ. ಕೆಲವು ವೇಳೆ ಜನರ ಕೂಟ ಹೆಚ್ಚಿ ಆರೋಗ್ಯವನ್ನು ಕಾಪಾಡುವ ಕ್ರಮಗಳು ಸಾಲದೆ ಯಾತ್ರಾಸ್ಥಾನ ಮಾರಕಸ್ಥಾನ ಆಗುತ್ತದೆ.

ಭಕ್ತ ತನ್ನ ದೈವವನ್ನು ಹುಡುಕಿಕೊಂಡು ಕ್ಷೇತ್ರಕ್ಕೆ ಹೋಗುವುದು ತತ್ವತಃ ತಪ್ಪು, ಎಂದು ಸುಧಾರಕ ಗುರುಗಳು ನಮ್ಮಲ್ಲಿ ಎಂದಿನಿಂದಲೂ ಹೇಳುತ್ತಲೇ ಬಂದಿದ್ದಾರೆ. "ದೇವರು, ಹುಡುಕಿಕೊಂಡು ಹೋಗಿ ಕಾಣ ಬೇಕಾದ ತತ್ವ ಅಲ್ಲ. ಅವನು ನಿನ್ನ ಒಳಗೆ ಇದ್ದಾನೆ. ಅವನನ್ನು ಅಲ್ಲೇ ಕಾಣು," ಎನ್ನುವುದು ಈ ಉಪದೇಶದ ಭಾವ. ಇದು ತೀರ ಸಾಧು ಆದದ್ದು, ಅಡ್ಡಿ ಇಲ್ಲ. ಅಂತರಂಗದಲ್ಲಿ ಹರಿಯ ಕಾಣದವ ಹುಟ್ಟು ಕುರುಡ ಎನ್ನುತ್ತದೆ, ಪುರಂದರದಾಸರ ಹಾಡು. ಇರುತ್ತ ಕ್ಷೇತ್ರಯಾತ್ರೆಯಿಂದ ಬರುವ ಧನ್ಯಭಾವ, ದೇಶಭಕ್ತಿ, ಜನಜೀವನದಲ್ಲಿ ಹಿರಿಯ ಶುಭವನ್ನು ತರುವ ಮನಃಸ್ಥಿತಿಗಳು ಎನ್ನುವುದರಲ್ಲಿ ಸಂದೇಹವಿಲ್ಲ. ಮೇಲಾಗಿ ತಾನು ದೈವವನ್ನು ಒಳಗೆ ಕಂಡು ಸಂತೋಷಿಸುವಂತೆ ತನ್ನ ಜೊತೆಯ ಸಾವಿರಾರು ಜನ ದೇವರ ಹೆಸರಲ್ಲಿ ಒಂದು ಕಡೆ ನೇರಿ ದೇವರ ಹೆಸರಲ್ಲಿ ಸಂತೋಷಿಸುತ್ತಿರುವುದು ನೋಡಬೇಕಾದ ಭವ್ಯ ದೃಶ್ಯ. ಭಕ್ತರ ನೆರವಿ ಅತಿಯಾಗಿ ಮೂರ್ತಿಯ ದರ್ಶನ ಪಡೆಯಲಾರದೆ ಹೋದ

ಭಕ್ತರೊಬ್ಬರು ಒಮ್ಮೆ ದೇವರಿಗೆ, "ನಿನ್ನನ್ನು ನೋಡಲಿಲ್ಲ ಎಂದು ನನಗೆ ಮನಸ್ಸಿಗೆ ಕೊರೆಯಿಲ್ಲ ಇಷ್ಟು ಸಂಖ್ಯೆಯ ನಿನ್ನ ಭಕ್ತರನ್ನು ನೋಡಿದ್ದಾಯಿತು. ಇದೇ ನನ್ನ ಭಾಗ್ಯ," ಎಂದು ಹಾಡಿ ಹೇಳಿದ್ದುಂಟು. ದೇವರು ಉಂಟು ಎನ್ನುವುದು ಮನಸ್ಸಿಗೆ ಮುಟ್ಟುವುದು ಅತ್ಯಂತ ಶುಭ. ಇದನ್ನು ಸಾಧಿಸುವ ಕ್ಷೇತ್ರಯಾತ್ರೆ ಯೋಗ್ಯವ್ಯಾಪಾರ ಎನ್ನುವುದು ತಪ್ಪಾಗುವುದಿಲ್ಲ.

ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಕ್ಷೇತ್ರಗಳ ಪ್ರವರ್ತಕರು ತಮ್ಮ ಕ್ಷೇತ್ರಗಳಲ್ಲಿ ಯಾತ್ರಿಕರು ಕಷ್ಟಕ್ಕೀಡಾಗದಂತೆ ಎಲ್ಲ ಯತ್ನವನ್ನು ಮಾಡಬೇಕು. ಶ್ರೀರಂಗ ಕ್ಷೇತ್ರದಲ್ಲಿ ವೈಕುಂಠ ಏಕಾದಶಿ ದಿನ 'ಸ್ವರ್ಗದ ಬಾಗಿಲು ಎಂಬ ಒಂದು ದ್ವಾರದಲ್ಲಿ ಪ್ರವೇಶಿಸಲು ನೇರುವ ಜನರ ಕೂಟ ಅವ್ಯವಸ್ಥೆಯಿಂದ ನಡೆಯುವುದರಲ್ಲಿ ವರ್ಷ ವರ್ಷ ಹಲವು ಜನ ನಡೆಯುವವರ ತುಳಿತಕ್ಕೆ ಸಿಕ್ಕಿ ಸತ್ತರೆಂದು ವರದಿಯಾಗುತ್ತದೆ. ಕ್ಷೇತ್ರದ ಕಾರ್ಯಕರ್ತರು ಇಂಥ ಸಂದರ್ಭದಲ್ಲಿ ನೆರೆದ ಜನರನ್ನು ಹತ್ತಾರು ಪಂಗಡವಾಗಿ ವಿಭಾಗಿಸಿ, ಪಂಗಡವಾದಮೇಲೆ ಪಂಗಡ ನುಗ್ಗಾಟ ಇಲ್ಲದೆ ಸಮಾಧಾನದಿಂದ ಬಾಗಿಲನ್ನು ಹಾಯುವಂತೆ ಏರ್ಪಾಟುಮಾಡಿ ಇಂಥಾ ಅನಾಹುತಗಳು ನಡೆಯದಂತೆ ನೋಡಿಕೊಳ್ಳಬೇಕು. ಇದು ಇವರ ಕರ್ತವ್ಯ ಹೀಗೆ ಮಾಡದಿರುವುದು ಅಕ್ಷಮ್ಯ ಅಪರಾಧ, ಕರ್ತವ್ಯಲೋಪ. ಈ ಕರ್ತವ್ಯ ಲೋಪದಿಂದ ಧರ್ಮದ ಹೆಸರು ಕೆಡುತ್ತದೆ. "ನಿಮ್ಮ ಯಾತ್ರೆ, ನಿಮ್ಮ ಕ್ಷೇತ್ರ, ಇದು ಯಾವ ಯಾತ್ರೆ, ಯಾವ ಕ್ಷೇತ್ರ, ಜನರನ್ನು ಕೊಲ್ಲುವ ಏರ್ಪಾಡು ಅಷ್ಟೇ ಇದು" ಎಂಬ ಅವಿಶ್ವಾಸದ ನಿಂದೆಗೆ ಎಡೆ ಮಾಡುತ್ತವೆ.

## ಧರ್ಮ ರಾಷ್ಟ್ರೀಯ ಉದ್ಯಮ

ಧರ್ಮ ರಾಷ್ಟ್ರೀಯ ಉದ್ಯಮ ಒಂದು. ಒಂದು ಜನಾಂಗ ಚೆನ್ನಾಗಿ ಬಾಳಬೇಕಾದರೆ ಅದು ಒಟ್ಟಿನಲ್ಲಿ ಒಂದು ಧರ್ಮವನ್ನು ನಂಬಿ ಬಾಳಬೇಕು. ಆ ಧರ್ಮ ಆದಷ್ಟು ಉನ್ನತದ್ದಾಗಿರಬೇಕು. ಬಲ್ಲವನು ಒಬ್ಬ ತನ್ನ ತಿಳುವಳಿಕೆಯಿಂದ ಉದ್ಧಾರ ಆಗಬಹುದು . ಇಷ್ಟು ತಿಳುವಳಿಕೆ ಇಲ್ಲದ ಜನ ಬಲ್ಲವರ ತಿಳುವಳಿಕೆಯನ್ನು ತಮ್ಮದಾಗಿ ಸ್ವೀಕರಿಸಿ ಬದುಕನ್ನು ಚೆನ್ನ ಮಾಡಿಕೊಳ್ಳಬೇಕು. ಒಟ್ಟು ರಾಷ್ಟ್ರ ಹೀಗೆ ಬದುಕಬೇಕೆಂದರೆ ಜನ ಮನೆಮನೆಯಲ್ಲೂ

ದೇವರ ಪೂಜೆಯನ್ನು ಮಾಡುವಂತೆ ಸಮಾಜ ಕೇಂದ್ರಸ್ಥಾನಗಳಾದ ಆಲಯ ಗಳಲ್ಲಿಯೂ ಪೂಜೆ ಮಾಡಬೇಕು. ರಾಷ್ಟ್ರದ ಒಟ್ಟು ಜನ ಮೊತ್ತದಲ್ಲಿ ಧರ್ಮವನ್ನು ನಡೆಸುತ್ತಿದೆ, ಎನ್ನುವುದರ ಪ್ರಮಾಣವಾಗಿ ಒಂದೊಂದು ಪ್ರದೇಶದ ಜನವೂ ಉಳಿದ ಹತ್ತು ಪ್ರದೇಶಗಳಿಗೆ ಹೋಗಿ ಅಲ್ಲಿಯ ಕೇಂದ್ರಗಳಲ್ಲಿ ಪೂಜೆಮಾಡಿ, ಪೂಜೆ ನೋಡಿ, ಮನಸ್ಸಿನಲ್ಲಿ ಭಕ್ತಿಯನ್ನು ತುಂಬಿಕೊಂಡು ಶಾಂತ ತೃಪ್ತಚೇತನರಾಗಿ ಹಿಂತಿರುಗಬೇಕು ಇದನ್ನು ಬಹು ಹಿಂದೆಯೇ ಮನಗಂಡವರು ನಮ್ಮ ಹಿರಿಯರು ಕ್ಷೇತ್ರಯಾತ್ರೆಗಳ ಪದ್ಧತಿಯನ್ನು ನಿರ್ಮಿಸಿದರು.

ಕ್ಷೇತ್ರಗಳಲ್ಲದೆ ನಮ್ಮ ಧರ್ಮ ಅನೇಕ ನದಿ ಸರೋವರಗಳನ್ನು ಪುಣ್ಯ ತೀರ್ಥಗಳೆಂದು ಗಣಿಸಿದೆ. ನಮ್ಮ ಹಿರಿಯರು ದಿನವೂ ಸ್ನಾನದ ವೇಳೆ ತಮ್ಮ ಊರಿನ ಬಾವಿಯ ನೀರನ್ನು ಮೇಲೆ ಎಳೆದುಕೊಳ್ಳುತ್ತ, ಗಂಗೆ ಯಮುನೆ, ಗೋದಾವರಿ ಸರಸ್ವತಿ, ನರ್ಮದೆ, ಸಿಂಧು, ಕಾವೇರಿ, ಎಂಬ ತೀರ್ಥಗಳನ್ನು ನೆನೆಯುತ್ತಿದ್ದರು ಅವನ್ನು ಆಹ್ವಾನಿಸಿ, "ನನಗೆ ಈ ನೀರಿನಲ್ಲಿ ನಿಮ್ಮ ಸಾನ್ನಿಧ್ಯವನ್ನು ಅನುಗ್ರಹಿಸಿರಿ," ಎಂದು ಬೇಡುತ್ತಿದ್ದರು. ಕನ್ಯಾಕುಮಾರಿಯ ಸಮುದ್ರ ಜಲದಲ್ಲಿ ಸ್ನಾನಮಾಡುವುದು ಒಳ್ಳೆಯದು ಪುರಂದರದಾಸರ ಒಂದು ಹಾಡು ಹೇಳುವಂತೆ ಶ್ರೀರಂಗದಲ್ಲಿ ಚಂದ್ರಪುಷ್ಕರಣಿಯಲ್ಲಿ ಮಿಂದು, ಕಾವೇರಿ ರಂಗನನ್ನು ಪೂಜಿಸುವುದು ಪುಣ್ಯಕಾರ್ಯ ಒಟ್ಟಿನಲ್ಲಿ ಸಮುದ್ರ ಸ್ನಾನ ನದೀ ಸ್ನಾನ ಪುಣ್ಯಕರ್ಮಗಳು ವೈಷ್ಣವ ಮತದ ಸಂಪ್ರದಾಯದಲ್ಲಿ ಮಧ್ಯ ಭಾರತದ ಪುಷ್ಕರ ಸರೋವರ, ವಾರಣಾಸಿಯ ಮಣಿಕರ್ಣಿಕಾ, ಸರೋವರ ಪುಣ್ಯತೀರ್ಥಗಳು. ಹಾಗೆಯೇ ಗಂಗೋತ್ರಿ ಹರಿದ್ವಾರ, ವಾರಣಾಸಿ, ಪ್ರಯಾಗ, ಗಂಗಾಸಾಗರ, ಎಂದರೆ ಗಂಗೆ ಸಾಗರವನ್ನು ಸೇರುವ ಸ್ಥಾನ, ಪುಣ್ಯತೀರ್ಥಗಳು ಗಂಗಾಸಾಗರದಲ್ಲಿ ಮಾಡುವ ಸ್ನಾನ ಅತ್ಯುನ್ನತ ಪುಣ್ಯಕರ್ಮ. ಇದರಂತೆಯೇ ಅತ್ಯುನ್ನತ ಪುಣ್ಯಕರ್ಮ ಹಿಮಾಲಯದ ಕೈಲಾಸಗಿರಿಯ ಮಾನಸಸರೋವರದ ಸ್ನಾನ ಪೂರ್ವದಿಂದ ಬಂದಿರುವ ಒಂದು ಸಂಪ್ರದಾಯ ರಾಮಸೇತುವಿನ ಬಳಿ ಸಮುದ್ರ ಸ್ನಾನಮಾಡಿ ಒಂದು ಕಳಶದಲ್ಲಿ ಅಲ್ಲಿಯ ನೀರನ್ನು ತೆಗೆದುಕೊಂಡು ವಾರಣಾಸಿಗೆ ಹೋಗಿ ವಿಶ್ವೇಶ್ವರನ ಸನ್ನಿಧಿಯಲ್ಲಿ ಅಭಿಷೇಕ ಮಾಡುವುದು. ಇದು ಒಂದು ವ್ರತ. ಇಂಥದೇ ಒಂದು ನಂಬಿಕೆ, ಕಾಶೀಯಾತ್ರೆ ಹೋದರೆ ಅಲ್ಲಿಂದ

ಒಂದು ಪಾತ್ರದಲ್ಲಿ ತೀರ್ಥವನ್ನು ತಂದು ಮನೆಯಲ್ಲಿ ಪೂಜೆಯ ವಸ್ತುಗಳೊಂದಿಗೆ ಇರಿಸಿ ದಿನವೂ ಪೂಜೆ ಮಾಡುವುದು, ಆಗಾಗ ಅದರ ಒಂದು ತೊಟ್ಟು ನೀರಿಗೆ ಮತ್ತಷ್ಟು ನೀರು ಬೆರಸಿ ಗಂಗಾತೀರ್ಥ ಎಂದು ಅದನ್ನು ತೆಗೆದುಕೊಳ್ಳುವುದು, ವೃದ್ಧರಾದವರು ತೀರಿಕೊಳ್ಳುವ ವೇಳೆ ಗಂಗಾತೀರ್ಥ ಒಂದು ಉದ್ಧರಣೆಯನ್ನು ಅವರ ಬಾಯಿಗೆ ಕೊಡುವುದು.

ಈ ತೀರ್ಥಗಳಲ್ಲಿ ಹಲವು ಈಗ ಶೋಚನೀಯವಾದ ದುಃಸ್ಥಿತಿಗೆ ಬಂದಿವೆ. ಹಲವು ವರ್ಷಗಳ ಹಿಂದೆ ನಾನು ಶ್ರೀರಂಗಕ್ಕೆ ಹೋದಾಗ ಚಂದ್ರಪುಷ್ಕರಣಿಯಲ್ಲಿ ಸ್ನಾನಮಾಡೋಣ ಎಂದು ಯೋಚಿಸಿದೆನು ಸ್ಥಳದ ನಿವಾಸಿ ಮಿತ್ರರು ಪುಷ್ಕರಣಿ ಸರಿಯಾಗಿಲ್ಲ, ಅದರಲ್ಲಿ ಸ್ನಾನಮಾಡುವ ವಾಡಿಕೆ ತಪ್ಪಿಹೋಗಿದೆ ಎಂದರು ಇರಲಿ ಎಂದು ನಾನು ತೀರ್ಥಕ್ಕೆ ಹೋದೆ ಪೂರ್ವಕಾಲದ ಕೊಳ. ಅಡಿಯಲ್ಲಿ ಎಲ್ಲೋ ಸ್ವಲ್ಪ ನೀರು; ಕಲ್ಲುಕಟ್ಟಡದ ಮೆಟ್ಟಲು ಏನೇನೋ ಆಗಿದೆ ಅದೇನು ಒಂದು ತೀರ್ಥ ಎಂದು ಭಾವಿಸುವಂತಿರಲಿಲ್ಲ ಕಾಶಿಗೆ ಹೋದ ವೇಳೆ ಮಣಿಕರ್ಣಿಕೆಯಲ್ಲಿ ಸ್ನಾನಮಾಡುವ ಯೋಚನೆ. ಅಲ್ಲಿಯೂ ಇದೇ ಸ್ಥಿತಿ. ತೀರ ಸಾಮಾನ್ಯವಾದ ಕೊಳ, ಅಡಿಯಲ್ಲಿ ಸ್ವಲ್ಪ ನೀರು ಅದು ಶುಚಿಯಾಗಿಲ್ಲ. ದೂರದಿಂದ ಶ್ರದ್ಧೆಯಿಂದ ಬರುವ ಯಾತ್ರಿಕರು ಕಾಣುವ ತೀರ್ಥಗಳು ಕ್ಷೇತ್ರಗಳ ಕಾರ್ಯಕರ್ತರಿಗೆ ಯಾವ ಲೆಕ್ಕಕ್ಕೂ ಬಾರದ ನೀರು ಗುಂಡಿಗಳು. ಈ ಕಾರ್ಯಕರ್ತರ ಅಲಕ್ಷ್ಯ ಯಾತ್ರಿಕರ ಶ್ರದ್ಧೆಯನ್ನೂ ಇಂಗಿಸುವ ಮಟ್ಟವನ್ನು ಮುಟ್ಟಿದೆ

೭

## ನಮ್ಮ ಜಾತಿವ್ಯವಸ್ಥೆ

ನಮ್ಮ ಸಮಾಜದ ಶಾಂತಿಯನ್ನು ಸದ್ಯದಲ್ಲಿ ಕಲಕಿರುವ ಬಹು ಕ್ಲಿಷ್ಟವಾದ ಸಮಸ್ಯೆ ನಮ್ಮ ಧರ್ಮದ ಜಾತಿವ್ಯವಸ್ಥೆಯನ್ನು ಕುರಿತದ್ದು ಜಾತಿ ಪದವನ್ನು ಈಗ ನಾವು ನಮ್ಮ ಪೂರ್ವ ಸಾಹಿತ್ಯದ ವರ್ಣಶಬ್ದಕ್ಕೆ ಸಮಾನ ಎಂದು ಬಳಸುತ್ತಿದ್ದೇವೆ. ಇದು ಸರಿಯಲ್ಲ. ಪೂರ್ವದ ನಮ್ಮ ಸಾಹಿತ್ಯ

ವರ್ಣಗಳ ಸಂಖ್ಯೆ ನಾಲ್ಕು ಎಂದು ಹೇಳಿತು ಆರ್ಯರಲ್ಲಿ ನಾಲ್ಕು ವರ್ಣ. ಆರ್ಯಸಮುದಾಯಕ್ಕೆ ಸೇರದೆ ಇರುವ ಉಳಿದೆಲ್ಲ ಜನಸಮುದಾಯ ಬೇರೆಯದು. ಹೀಗೆ ಬೇರೆಯಾದವರಲ್ಲಿ ನಮ್ಮ ದೇಶದಲ್ಲಿದ್ದವರನ್ನು ಆರ್ಯರು ಪಂಚಮ ವರ್ಗ ಒಂದು ಎಂದು ಭಾವಿಸಿದಂತೆ ಕಾಣುತ್ತದೆ ಬೇರೆ ದೇಶಗಳ ಜನ ಮ್ಲೇಚ್ಛ, ಹೂಣ, ಇತ್ಯಾದಿ ಸಮುದಾಯಗಳು. ನಾಲ್ಕು ವರ್ಣಕ್ಕೆ ಆದಿ ಯಾವುದು ಎಂದು ವೇದ ಪುರುಷಸೂಕ್ತದಲ್ಲಿ ಹೇಳಿತು ವಿರಾಟ್‌ಪುರುಷನನ್ನು ಕುರಿತು ಈ ಸೂಕ್ತ "ಮುಖಂ ಕಿಮಸ್ಯ ಕೌ ಬಾಹೂ ಕಾ ಊರೂ ಪಾದಾವುಚ್ಯೇತೇ," ಎಂದು ಪ್ರಶ್ನೆ ಹಾಕಿ, "ಬ್ರಾಹ್ಮಣಃ ಅಸ್ಯ ಮುಖಂ ಆಸೀತ್ ಬಾಹೂ ರಾಜನ್ಯಃ ಕೃತಃ ಊರೂ ತದಸ್ಯ ಯದ್ವೈಶ್ಯೋ ಪದ್ಭ್ಯಾಂ ಶೂದ್ರೋ ಅಜಾಯತ" ಎಂದಿತು ಶ್ರುತಿ ಹೀಗೆಂದ ಕಾಲದಲ್ಲಿ ಇದು ತಪ್ಪು ಎಂದ ಜನ ಇದ್ದರೋ ಇಲ್ಲವೋ ನಮಗೆ ತಿಳಿಯದು ಬ್ರಾಹ್ಮಣ ಪರತತ್ವದ ಮುಖ ಆದ. ಬಾಹುಗಳು ಕ್ಷತ್ರಿಯರಾದವು ವೈಶ್ಯ ಅವನ ತೊಡೆಗಳು, ಶೂದ್ರರು ಅವನ ಪಾದಗಳಿಂದ ಹುಟ್ಟಿದರು ಈ ವ್ಯವಸ್ಥೆ ಬಹುಕಾಲ ಅಂಗೀಕೃತವಾಯಿತು ಎಂದು ತೋರುತ್ತದೆ. ರಾಮಾಯಣದಲ್ಲಿ ರಾಮರಾಜ್ಯದ "ಬ್ರಾಹ್ಮಣಾಃ ಕ್ಷತ್ರಿಯಾಃ ವೈಶ್ಯಾಃ ಶೂದ್ರಾ ಲೋಭ ವಿವರ್ಜಿತಾಃ ಸ್ವಕರ್ಮಸು ಪ್ರವರ್ತಂತೇ ತೃಪ್ತಾಸ್ಸ್ವೈರೇವ ಕರ್ಮಭಿಃ" ಎಂದು ಹೇಳಿದೆ. ಅಂದಿನ ಬ್ರಾಹ್ಮಣ ಹೇಗಿದ್ದ, ಈ ವಿವರ ನಮಗೆ ಅಷ್ಟಾಗಿ ತಿಳಿಯದು ವಸಿಷ್ಠ ಬ್ರಾಹ್ಮಣರಲ್ಲೇ ಉನ್ನತನಾದವನು. ಅವನು ರಾಜನ ಪುರೋಹಿತ. ಪುರೋಹಿತ ರಾಜಧಾನಿ ಯಲ್ಲಿ ವಾಸಮಾಡಲಿಲ್ಲ. ಅದರಿಂದ ಸ್ವಲ್ಪ ದೂರದಲ್ಲಿ ಒಂದು ಆಶ್ರಮ ಮಾಡಿಕೊಂಡು ಅಲ್ಲಿ ಬಾಳು ನಡೆಸಿದನು. ಅವನ ಮಗ ನಗರದಲ್ಲಿ ವಾಸ ಮಾಡಿದನು. ಅರಮನೆ ಅವನನ್ನು ಚೆನ್ನಾಗಿ ನೋಡಿಕೊಳ್ಳುತ್ತಿತ್ತು ಎಂದು ಕಾಣುತ್ತದೆ. ರಾಮಭದ್ರ ವನವಾಸಕ್ಕೆ ಹೊರಟಾಗ ತನ್ನ ಸಂಪತ್ತಿನ ಬಹು ಒಳ್ಳೆಯ ಭಾಗವನ್ನು ಅವನಿಗೆ ದಾನಮಾಡಿ ಹೊರಟನು. ಈ ಸಂದರ್ಭದಲ್ಲಿ ತ್ರಿಜಟ ಎಂಬ ವಿಪ್ರನ ಪ್ರಸಂಗವೂ ಬರುತ್ತದೆ. ಇವನು ವನದಲ್ಲಿ ವಾಸ ಮಾಡುತ್ತಿದ್ದನು. ಮನೆ ತುಂಬ ಮಕ್ಕಳು, ಊಟಕ್ಕೆ ಕಷ್ಟ. ರಾಮ ವನವಾಸಕ್ಕೆ ಹೊರಟವನು ದಾನ ಮಾಡುತ್ತಿದ್ದಾನೆಂದು ಕೇಳಿ ಇವನ ಹೆಂಡತಿ ಗಂಡನಿಗೆ "ರಾಮನ ಬಳಿ ಹೋಗಿ ಯಾಚನೆಮಾಡಿ ಏನನ್ನಾದರೂ ತೆಗೆದು

ಕೊಂಡು ಬಾ," ಎನ್ನುತ್ತಾಳೆ ಅವನು ಹೋಗಿ ರಾಮನಲ್ಲಿ ದಾನ ಬೇಡುತ್ತಾನೆ. ರಾಮ ಅವನಿಗೆ, "ಈ ಕೋಲನ್ನು ನಿನ್ನಿಂದ ಆದಷ್ಟು ದೂರ ಎಸೆ ಇಲ್ಲಿಂದ ಆ ಕೋಲು ಬೀಳುವ ಸ್ಥಳದವರೆಗೆ ನಿಲ್ಲುವಷ್ಟು ದನದ ಮಂದೆ ಒಂದನ್ನು ನಿನಗೆ ಕೊಡುತ್ತೇನೆ," ಎನ್ನುತ್ತಾನ ಬ್ರಾಹ್ಮಣ ಕೋಲನ್ನು ಎಸೆದು ದೊಡ್ಡದೊಂದು ದನದ ಮಂದೆಯನ್ನು ದಾನವಾಗಿ ಪಡೆಯುತ್ತಾನೆ. ಉಳಿದಂತೆ ರಾಮಾಯಣದಲ್ಲಿ ಬರುವ ಬ್ರಾಹ್ಮಣರು ಅಶ್ವಮೇಧದಲ್ಲಿ ಒಂದಲ್ಲ ಒಂದು ಕಾರ್ಯವನ್ನು ಒಪ್ಪಿಕೊಂಡು ಅದನ್ನು ನಡೆಸಿ ಯಜಮಾನನಿಂದ ದಕ್ಷಿಣೆ ಪಡೆಯುತ್ತಾರೆ ಅವನು ರಾಜ್ಯವನ್ನು ನಾಲ್ಕು ಭಾಗ ಮಾಡಿ ಅವರಿಗೆ ಒಪ್ಪಿಸುತ್ತಾನೆ. ಅವರು, "ರಾಜ್ಯವನ್ನು ನೀನು ನೋಡಿಕೊಳ್ಳಬಹುದು. ಅದು ನಮ್ಮಿಂದ ಆಗದ ಕೆಲಸ. ರಾಜ್ಯವನ್ನು ನೀನೇ ಇರಿಸಿಕೋ. ನಮಗೆ ಸ್ವಲ್ಪ ದಕ್ಷಿಣೆ ಕೊಡು," ಎನ್ನುತ್ತಾರೆ ದೊರೆ ಅವರಿಗೆ ತುಂಬ ದಕ್ಷಿಣೆ ಕೊಡುತ್ತಾನೆ ಉಳಿದ ಬ್ರಾಹ್ಮಣರಿಗೂ ತಕ್ಕಷ್ಟು ದಕ್ಷಿಣೆ ಸಿಕ್ಕಿರಬಹುದು ಆದರೆ ಅದು ಸಂಸಾರಗಳನ್ನು ಎಷ್ಟುಕಾಲ ನಡೆಸೀತು? ಇವರಲ್ಲದ ಬ್ರಾಹ್ಮಣರು, ರಾಮ ಅರಣ್ಯದಲ್ಲಿ ಕಂಡ ವೈಖಾನಸ, ವಾಲಖಿಲ್ಯ, ಇತ್ಯಾದಿ ಅನೇಕ ಬೇರೆ ಬೇರೆ ಸಮುದಾಯದ ತಾಪಸರು. ಇವರು ವನದಲ್ಲಿ ದೊರಕುವ ಹಣ್ಣು ಹಂಪಲಿಂದ ಜೀವಿಸುತ್ತಿದ್ದರು ಅವರ ವ್ರತಗಳಲ್ಲಿ ಬಹುಭಾಗ ಹಸಿವನ್ನು ಸಹಿಸುವುದು ಎನ್ನಬಹುದು ಮೇಲಾಗಿ ಇವರು ನ್ಯಸ್ತದಂಡರು ರಾಕ್ಷಸರು ಬಂದು ಇವರಿಗೆ ಕಷ್ಟಕೊಟ್ಟರೆ ಕಷ್ಟವನ್ನು ಉಂಡು, ಉಂಡಮೇಲೂ ಬದುಕಿದ್ದರೆ ಬೇರೆ ಕಡೆಗೆ ಓಡುವರು ಇಲ್ಲದಿದ್ದರೆ ವಿಶ್ವಾಮಿತ್ರನಂತೆ ರಾಕ್ಷಸರನ್ನು ತಡೆಯಲು ಸಹಾಯ ಕೊಡು ಎಂದು ರಾಷ್ಟ್ರದ ದೊರೆಯನ್ನು ಬೇಡುವರು. ಈ ಬ್ರಾಹ್ಮಣ ಜನ ಏನೇ ಆಗಿರಬಹುದು, ಈಗ ನಾವು ಪುಣ್ಯವಂತ ಆಸ್ತಿವಂತ ಎಂಬ ಮಾತುಗಳಿಂದ ವರ್ಣಿಸುವ ಜನ ಅಲ್ಲ. ಈಗ ಪುಣ್ಯವಂತ ಎನ್ನಿಸಿಕೊಳ್ಳುವ ಜನ ಹಿಂದೆ ಮಾಡಿದ ಪುಣ್ಯದ ಫಲವಾಗಿ ಈಗ ಹಣವೊಂದಿಗರಾಗಿ ಸುಖಜೀವನ ನಡೆಸುತ್ತಿರುವವರು. ರಾಮನ ಕಾಲದ ತಾಪಸ ಬ್ರಾಹ್ಮಣರಿಗೆ ಇದ್ದ ಪುಣ್ಯ ಬೇರೆ ತೆರನದು ಅದು ಹಣವೊಂದಿಗರಾಗಿರುವ ಪುಣ್ಯ ಅಲ್ಲ. ಬಡತನವನ್ನು ವರಿಸಿ ಬೆಳೆಸಿಕೊಂಡ ಸತ್ಯಜೀವನದ ಪುಣ್ಯ. ಎಷ್ಟೋ ಕಾಲ ಕಳೆದು ಬ್ರಾಹ್ಮಣರು ಈ ಸ್ಥಿತಿಯನ್ನು ಬಿಟ್ಟು

ವ್ಯವಹಾರ ಜೀವನದಲ್ಲಿ ಭಾಗವಹಿಸಿ ಇತರ ಜನರೊಂದಿಗೆ ಬಾಳುತ್ತ ಅಷ್ಟೇನೂ ಕಷ್ಟವಲ್ಲದ ಆದರೂ ಅಷ್ಟೇನೂ ಸುಖವಲ್ಲದ ಜೀವನವನ್ನು ನಡೆಸಿದರು. ಭಾರತದ ಕಾಲಕ್ಕೆ ಬ್ರಾಹ್ಮಣ ಬಹುವೇಳೆ ಬಡವನಾಗಿದ್ದರೂ ಕೆಲವು ವೇಳೆ ಅನುಕೂಲವಂತನಾಗಿದ್ದ. ದ್ರೋಣ ಸಹಪಾಠಿ ದ್ರುಪದನ ಸಹಾಯವನ್ನು ಬೇಡಿ, ಅವನು ಸ್ನೇಹವನ್ನು ಒಪ್ಪಿಕೊಳ್ಳದೆ ತಪ್ಪಿ ನಡೆದದ್ದರಿಂದ ಕೋಪಗೊಂಡು ಕ್ಷತ್ರಿಯ ಶಿಷ್ಯರಿಗೆ ಶಸ್ತ್ರವಿದ್ಯೆ ಕಲಿಸಲು ಭೀಷ್ಮನ ಬಳಿ ಸೇವೆಗೆ ಒಪ್ಪಿದಂತೆ ಒಪ್ಪುತ್ತಿದ್ದಿರಬೇಕು. ಉಳಿದವರು ವೇದಶಾಸ್ತ್ರಗಳ ಕಲಿಕೆಯಲ್ಲಿ, ಪ್ರವಚನದಲ್ಲಿ ತೊಡಗಿ ಸಮಾಜದ ಸೇವಕರಾಗಿ ನಡೆದುಕೊಂಡು ಆ ಸೇವೆಯಲ್ಲಿ ದೊರಕಿದ ದಕ್ಷಿಣೆಗಳಿಂದ ಬಾಳಿರಬೇಕು. ಹೀಗಿದ್ದೂ ಬ್ರಾಹ್ಮಣನಾದವನು ವೃತ್ತಿಯ ಕಾರಣದಿಂದ ಶ್ರೇಷ್ಠ, ವೃತ್ತಿಯ ಕಾರಣದಿಂದ ಕ್ಷತ್ರಿಯ ಅವನಿಗಿಂತ ಸ್ವಲ್ಪವೇನೋ ಕಡಿಮೆ ಎಂದರೂ ಹತ್ತಿರ ಹತ್ತಿರ ಅಷ್ಟೇ ಶ್ರೇಷ್ಠರಾಗಿರುತ್ತ ವೈಶ್ಯರು, ಶೂದ್ರರು ಇವರ ಕೆಳಗಿನ ಎರಡು ವರ್ಣ ಆಗಿ ಬಾಳುತ್ತಿದ್ದರು. ಮುಂದಿನ ಕಾಲಕ್ಕೆ ಬ್ರಾಹ್ಮಣ ಜಾತಿಯ ಜನ ವ್ಯವಹಾರದಲ್ಲಿ ಸಿಕ್ಕಿಕೊಂಡು, ಅದರ ಪರಿಣಾಮವಾಗಿ ತಮ್ಮ ಕೆಲವು ಗುಣಗಳನ್ನು ಕಳೆದುಕೊಂಡರು ; ಬ್ರಾಹ್ಮಣ್ಯ ಬರಿಯ ಹುಟ್ಟಿನಿಂದ ಬರತಕ್ಕದ್ದಲ್ಲ, ಶೀಲದಿಂದ ಉದಿಸುತ್ತದೆ, ಎಂಬ ಭಾವ ಬಲ್ಲವರಲ್ಲಿ ಮೂಡಿತು. ಮಹಾಭಾರತದಲ್ಲಿ ಇದು ಹಲವಾರು ಪ್ರಸಂಗಗಳಲ್ಲಿ ಪ್ರಕಟವಾಗಿದೆ. ಒಂದು ಸಂದರ್ಭದಲ್ಲಿ ಈ ಶ್ಲೋಕಗಳಿವೆ :

"ನ ವಿಶೇಷೋಽಸ್ತಿ ವರ್ಣಾನಾಂ ಸರ್ವಂ ಬ್ರಹ್ಮಮಯಂ ಜಗತ್
ನ ವೈ ಶೂದ್ರೋ ಭವೇತ್ ಶೂದ್ರೋ ಬ್ರಾಹ್ಮಣೋ ನ ಚ ಬ್ರಾಹ್ಮಣಃ
ಶೂದ್ರಯೋನೌ ಹಿ ಜಾತಸ್ಯ ಸದ್ಗುಣಾನುಪತಿಷ್ಠತಃ
ಆರ್ಜವೇ ವರ್ತಮಾನಸ್ಯ ಬ್ರಾಹ್ಮಣ್ಯಮಭಿಜಾಯತೇ
ಯಸ್ತು ಶೂದ್ರೋ ದಮೇ ಸತ್ಯೇ ಧರ್ಮೇ ಚ ಸತತೋತ್ಥಿತಃ
ತಂ ಬ್ರಾಹ್ಮಣಮಹಂ ಮನ್ಯೇ ವೃತ್ತೇನ ಹಿ ಭವೇತ್ ದ್ವಿಜಃ
ಬ್ರಾಹ್ಮಣಃ ಪತನೀಯೇಷು ವರ್ತಮಾನಃ ವಿಕರ್ಮಸು
ಡಾಂಭಿಕೋ ದುಷ್ಕೃತಪ್ರಾಯಃ ಶೂದ್ರೇಣ ಸದೃಶೋ ಭವೇತ್"

"ವರ್ಣಗಳಲ್ಲಿ ಬೇಧವಿಲ್ಲ, ಎಲ್ಲರೂ ಬ್ರಹ್ಮ ಸಂಬಂಧಿಗಳೇ. ಶೂದ್ರನು ಹುಟ್ಟು ಅಷ್ಟರಿಂದ ಶೂದ್ರನಾಗುವುದಿಲ್ಲ. ಬ್ರಾಹ್ಮಣ ಹುಟ್ಟಿನಿಂದ ಬ್ರಾಹ್ಮಣ

ನಾಗುವುದಿಲ್ಲ ಶೂದ್ರನಾಗಿ ಹುಟ್ಟಿದವನು ಸದ್ಗುಣಗಳನ್ನು ಉಪಾಸನೆಮಾಡಿ, ಋಜುಮಾರ್ಗದಲ್ಲಿ ನಡೆದರೆ ಉನ್ನತ ಬ್ರಾಹ್ಮಣ್ಯವನ್ನು ಸಾಧಿಸುತ್ತಾನೆ. ಸದಾ ದಮ, ಸತ್ಯ, ಧರ್ಮದಲ್ಲಿ ಬಾಳಿದರೆ ಅವನನ್ನು ನಾನು ಬ್ರಾಹ್ಮಣ ಎಂದು ಎಣಿಸುತ್ತೇನೆ ಅವನು ನಡತೆಯಿಂದ ಬ್ರಾಹ್ಮಣನಾಗುತ್ತಾನೆ. ಬ್ರಾಹ್ಮಣ ನೊಬ್ಬ ವರ್ಣಕ್ಕೆ ಸಲ್ಲದ ಪತನಕಾರಕ ಕರ್ಮದಲ್ಲಿ ತೊಡಗಿದರೆ ಆ ದುಷ್ಕೃತನು ನೋಟಕ್ಕಷ್ಟೇ ಬ್ರಾಹ್ಮಣನಾಗಿ ಕಾಣುತ್ತ ಶೂದ್ರನಿಗೆ ಸಮಾನನಾಗುತ್ತಾನೆ.” ಇದರಿಂದಲೇ ಧರ್ಮವ್ಯಾಧ ಪ್ರಸಂಗದಲ್ಲಿ, ತಂದೆತಾಯಿಗಳನ್ನು ಚೆನ್ನಾಗಿ ನೋಡಿ ಕೊಳ್ಳುತ್ತಿದ್ದ ವ್ಯಾಧ, ಹೀಗೆ ಮಾಡದೆ ಇದ್ದ ಒಬ್ಬ ಬ್ರಾಹ್ಮಣನಿಗೆ ನೀತಿಯನ್ನು ಕಲಿಸುವ ಪ್ರಸಕ್ತಿ ಒದಗಿತು ಕಲವುಕಾಲದಲ್ಲಿ ಈ ಭಾವನೆ ಕುಗ್ಗಿ, ಬ್ರಾಹ್ಮಣರು ಎಲ್ಲರಿಗಿಂತ ಶ್ರೇಷ್ಠರು ಎಂಬ ಭಾವನೆ ಬೆಳೆದು, ಭಾರತದಲ್ಲೇ ಅನುಶಾಸನ ಪರ್ವದಲ್ಲಿ ಬ್ರಾಹ್ಮಣ ಜಾತಿಯನ್ನು ಮೇಲಕ್ಕೆ ಏರಿಸಿದ ಅನೇಕ ಪ್ರಸಂಗಗಳು ಸ್ಥಾನ ಪಡೆದುವು. ಮನುಸ್ಮೃತಿಯಲ್ಲಿ ಈ ಭಾವನೆಯ ಶ್ಲೋಕಗಳಿವೆ. ಇರುತ್ತ ಅವು ಬ್ರಾಹ್ಮಣನಿಂದ ಬಹು ಉನ್ನತಮಟ್ಟದ ಬಾಳ್ವೆಯನ್ನು ನಿರೀಕ್ಷಿ ಸುತ್ತವೆ. ಈ ನಿರೀಕ್ಷೆ ಭಾರತದಿಂದ ಬಂದದ್ದೇ. “ಒಂದು ದಿನಕ್ಕಿಂತ ಹೆಚ್ಚಿನ ಆಹಾರ ದ್ರವ್ಯವನ್ನು ಮನೆಯಲ್ಲಿ ಇಟ್ಟುಕೊಂಡವನು ಬ್ರಾಹ್ಮಣನ ಉನ್ನತಿ ಯನ್ನು ಕಳೆದುಕೊಳ್ಳುತ್ತಾನೆ. ಮೂರು ದಿನಕ್ಕೆ ಹೆಚ್ಚಿನ ವಸ್ತುಚಯವನ್ನು ಇಟ್ಟುಕೊಂಡವನು ಬ್ರಾಹ್ಮಣ್ಯವನ್ನೇ ಕಳೆದುಕೊಳ್ಳುತ್ತಾನೆ.” ಈ ಅರ್ಥದಿಂದ ನೋಡಿದರೆ ಶ್ರೀರಾಮನಿಂದ ದಾನ ಪಡೆದ ವಸಿಷ್ಠಪುತ್ರ ಶತಾನಂದ ತ್ರಿಜಟರು ಆ ದಾನವನ್ನು ಪರಿಗ್ರಹಿಸಿ ಬ್ರಾಹ್ಮಣ್ಯವನ್ನು ತ್ಯಜಿಸಿದರು ಎಂದೇ ಹೇಳಬೇಕು. ಕಾಲಾನುಕ್ರಮದಿಂದ ರಾಜರ ಆಶ್ರಿತರಾಗಿ ನಿಂತು, ವಿದ್ಯಾವಂತರಾದ ಕಾರಣ ದಿಂದ ರಾಜ್ಯದ ವ್ಯವಹಾರದಲ್ಲಿ ಭಾಗವಹಿಸಿ ವೇತನಗಳನ್ನು ಪರಿಗ್ರಹಿಸಿ, ರಾಜಸೇವಕರಾಗುವುದು ಬ್ರಾಹ್ಮಣ ಜಾತಿಯಲ್ಲಿ ವಾಡಿಕೆಯೇ ಆಯಿತು. ಕಾಲ ಕ್ರಮದಲ್ಲಿ ಹೀಗೆ ಪರಮಾನಗಳಿಸಿದ ಜನರನ್ನು ಲೌಕಿಕರು ಎಂದು ಕರೆಯು ವುದು ಪದ್ಧತಿಯಾಯಿತು. ಲೌಕಿಕರಲ್ಲದ ಬ್ರಾಹ್ಮಣರು ವೈದಿಕರು. ಕ್ರಮೇಣ ಬ್ರಾಹ್ಮಣರು ರಾಜ್ಯದ ವ್ಯವಹಾರದಲ್ಲಲ್ಲದೆ ವ್ಯಾಪಾರದಲ್ಲಿಯೂ ತೊಡಗಿದರು ಎನ್ನುವುದು ಕಾಣುತ್ತದೆ. ಶ್ರೇಷ್ಠ ಹರಿದಾಸರಾದ ಪುರಂದರದಾಸರು ಆ ಹಿಂದೆ ರತ್ನಪಡಿ ವ್ಯಾಪಾರಿಯಾಗಿದ್ದವರು. ಆಮೇಲಿನ ಕಾಲದಲ್ಲಿ ಹೀಗೆ ಜೀವನ

ನಡೆಸುವುದೇ ಬಹುಸಂಖ್ಯಾತ ಬ್ರಾಹ್ಮಣರ ಕರ್ಮ ಆಯಿತು. ಮುದ್ರಾ ರಾಕ್ಷಸದ ಮಂತ್ರಿ ರಾಕ್ಷಸ ಇಂಥ ಒಬ್ಬ ಬ್ರಾಹ್ಮಣ ಇಂಥ ಜೀವನದಲ್ಲಿ ತೊಡಗಿ ಬ್ರಾಹ್ಮಣರು ಕೆಲವು ವೇಳೆ ತಮ್ಮ ಒಡೆಯರನ್ನು ಕಡೆಗಣಿಸಿ ತಾವೇ ಪ್ರಭು ಗಳಾದರು ಎಂದೂ ಕಾಣುತ್ತದೆ. ಮಹಾರಾಷ್ಟ್ರದ ಪೇಶ್ವೆಗಳು ಈ ರೀತಿಯ ಜನ. ಆಂಗ್ಲರು ನಮ್ಮ ದೇಶವನ್ನು ಆಕ್ರಮಿಸಿ ಆಳಿದ ದಿನಗಳಲ್ಲಿ ಇಲ್ಲಿಯ ಜನರ ನೆರವನ್ನು ಬಯಸಿ ಇಂಗ್ಲೀಷ್ ಭಾಷೆಯನ್ನು ಕಲಿತ ನಮ್ಮ ಜನರಿಗೆ ಸಂಬಳ ಕೊಟ್ಟು, ಅವರನ್ನು ಅಧಿಕಾರದಲ್ಲಿ ಸೇರಿಸಿಕೊಂಡರು ಈ ಏರ್ಪಾಡಿನಲ್ಲಿ ಕೆಲವರು ತಮ್ಮ ಒಡೆಯರಿಗೆ ಬುದ್ಧಿಯಿಂದಲೋ ಬೇರೆ ಕಾರಣದಿಂದಲೋ ಪ್ರಿಯರಾಗಿ ಉನ್ನತ ಸ್ಥಾನಗಳನ್ನು ಪಡೆದದ್ದೂ ಆಯಿತು ಇಂಥವರಿಗೆ ಸಂಬಳ ಹೆಚ್ಚು. ಇವರಲ್ಲಿ ಕೆಲವರಾದರೂ ತಮ್ಮ ಒಡೆಯರಂತೆಯೇ ವೇಷ ಧರಿಸಿ ಅವರಿಗೆ ಮತ್ತಷ್ಟು ಮಿತ್ರರಾಗಿ ತಮ್ಮ ಹುಟ್ಟಿನ ಜಾತಿಯ ಆಚಾರವನ್ನೇ ಬಿಡುವ ಪರಿಸ್ಥಿತಿ ಒದಗಿತು ಆಂಗ್ಲರ ವಿದ್ಯೆಯನ್ನು ಕಲಿತ ಅನೇಕರು ಆಡಳಿತದ ಸೇವೆಯಲ್ಲಿ ಅಲ್ಲದೆ ಇತರ ವೃತ್ತಿಗಳಲ್ಲಿ ಭಾಗವಹಿಸಿ ತುಂಬ ಪುಣ್ಯವಂತರಾಗು ವುದು ಸಾಧ್ಯವಾಯಿತು ವೈದ್ಯರಾಗಿ, ಲಾಯರಾಗಿ, ಬ್ರಾಹ್ಮಣ ಜನರು ಪುರಂದರದಾಸರ ಭಾಗ್ಯದಂಥ ಭಾಗ್ಯಗಳನ್ನು ಪಡೆದದ್ದು ಅದೆಷ್ಟು ಬಾರಿಯೋ ಹೀಗೆ ಭಾಗ್ಯ ಪಡೆದವರಲ್ಲಿ ಆಚಾರವನ್ನು ಬಿಟ್ಟು ಭ್ರಷ್ಟರಾದದ್ದು ಅದೆಷ್ಟು ಮಂದಿಯೋ. ಸ್ವಲ್ಪಕಾಲ ನಮ್ಮ ಜಾತಿಗಳ ವ್ಯವಹಾರ ಪ್ರಮುಖರ ಕೈಯಲ್ಲಿ ಇದ್ದಾಗ ಇಂಥ ಜನ ತಮ್ಮನ್ನು ಜಾತಿಯಿಂದ ಬಹಿಷ್ಕಾರ ಮಾಡಿ ಯಾರು ಎಂದು ಭಯ ಪಡುತ್ತಿದ್ದರು. ಜಾತಿ ಪ್ರಮುಖರ ಹಿಡಿತ ಕಾಲಕ್ರಮ ದಲ್ಲಿ ದುರ್ಬಲವಾಗಿ, ಬ್ರಾಹ್ಮಣರಾದವರು ಎಲ್ಲರೂ ಕಂಡಂತೆಯೇ ಆಚಾರಹೀನ ರಾದರೂ ಬ್ರಾಹ್ಮಣ ಸಮುದಾಯದಲ್ಲೇ ತಲೆ ಎತ್ತಿಕೊಂಡು ನಡೆಯುವುದು ವಾಡಿಕೆಯಾಯಿತು. ಅಧಿಕಾರಿ ವರ್ಗದ ಬ್ರಾಹ್ಮಣ ಒಬ್ಬ ಮುಖದ ತುಂಬ ವಿಭೂತಿ ಬಳಿದುಕೊಂಡು, ಇಲ್ಲ ನಾಮ ಹಚ್ಚಿಕೊಂಡು, ಇಲ್ಲ ಮುದ್ರೆ ಒತ್ತಿ ಕೊಂಡು, ತನ್ನ ಸಮುದಾಯದ ಮಠಗಳ ಸಂನ್ಯಾಸಿ ಸ್ವಾಮಿಗಳ ಸನ್ನಿಧಿಯಲ್ಲಿ ಕೈಕಟ್ಟಿಕೊಂಡು ನಿಂತರೆ ಆಯಿತು ಅವನು ಬ್ರಾಹ್ಮಣನೇ, ಎಂದಮೇಲೆ ಶ್ರೇಷ್ಠನೇ. ಇವರಂತೆಯೇ ಆಂಗ್ಲವಿದ್ಯೆ ಕಲಿತು ಆಡಳಿತದಲ್ಲಿ ಅಧಿಕಾರಗಳನ್ನು ಪಡೆದು ಅಥವಾ ವೈದ್ಯ ಲಾಯರ್ ಇತ್ಯಾದಿ ವೃತ್ತಿಗಳಲ್ಲಿ ದಕ್ಷರಾದ

ಬ್ರಾಹ್ಮಣೇತರಜನರಿಗೂ ಹಿರಿಯವರಮಾನ ಹೀಗೆಯೇ ವಾಡಿಕೆಯಾಗಿ ಅವರೂ ಅಗ್ರಜರಾದ ಬ್ರಾಹ್ಮಣರಂತೆ ಸಮುದಾಯದ ಆಚಾರವನ್ನು ತೊರೆಯುವುದು ಒಂದು ಕ್ರಮ ಆಯಿತು. ಈ ಶತಮಾನದ ಆರಂಭದ ಈ ಸ್ಥಿತಿಯಲ್ಲಿ ಇಂಗ್ಲೀಷ್ ವಿದ್ಯೆ ಕಲಿತ ಬೇರ ಜಾತಿಯ ಜನರು ಕೆಲವರಲ್ಲಿಯಾದರೂ ಬ್ರಾಹ್ಮಣರನ್ನು ಮೇಲಿನ ಜಾತಿಯವರೆಂದು ಏಕೆ ಕಾಣಬೇಕು, ಎಂದು ಪ್ರಶ್ನೆ ಮಾಡುವುದು ಸಹಜವಾಯಿತು ಪ್ರಶ್ನೆಗೇನು ಉತ್ತರ ? ಹಾಗೆ ಕಾಣಬೇಕಾದ ಕಾರಣ ಇಲ್ಲ.

## ಆಂಗ್ಲರ ಭೇದೋಪಾಯ

ಪೂರ್ವದಿಂದಲೂ ವಿದ್ಯೆಯಲ್ಲಿ ತೊಡಗಿದ್ದ ಸಮುದಾಯಗಳಾದ ಕಾರಣ ನಮ್ಮ ದೇಶದ ಬ್ರಾಹ್ಮಣ ಸಮುದಾಯಗಳ ಜನರು ಇಂಗ್ಲೀಷ್ ಭಾಷೆಯಲ್ಲಿಯೂ ಶಕ್ತರಾಗಿ ಆಡಳಿತದ ದೊಡ್ಡ ಕೆಲಸಗಳಲ್ಲಿಯೇ ಅಲ್ಲದೆ ಕಡಿಮೆ ವರಮಾನದ ಸ್ಥಾನಗಳಲ್ಲಿಯೂ ವ್ಯಾಪಿಸಿದರು. ಸಣ್ಣ ಕೆಲಸದಲ್ಲಿ ಸೇರಿದವರ ಮಕ್ಕಳು ತಂದೆಗಿಂತ ಹೆಚ್ಚಿನ ವಿದ್ಯೆ ಪಡೆದು. ಬ್ರಾಹ್ಮಣ ಜಾತಿಯ ತಕ್ಕಷ್ಟು ಜಾಣರಾದ ಜನರು ಎಲ್ಲ ಕ್ಷೇತ್ರಗಳಲ್ಲಿಯೂ ತಕ್ಕಷ್ಟು ಗಣ್ಯವಾದ ಸ್ಥಾನಗಳನ್ನು ಪಡೆದರು. ರಾಜಕೀಯ ವ್ಯವಹಾರದಲ್ಲಿ ಪತ್ರಿಕೆಯ ಉದ್ಯೋಗದಲ್ಲಿ ತೊಡಗಿದ ಇಂಥಜನ,"ಆಂಗ್ಲರು ನಮ್ಮನ್ನು ಆಳಬೇಕಾದದ್ದೇನು, ಭರತವರ್ಷ ಇಂಗ್ಲೆಂಡಿಗೆ ಅಧೀನವಾಗಿರಬೇಕಾದದ್ದಿಲ್ಲ, ಭಾರತೀಯರು ಸ್ವಾತಂತ್ರವನ್ನು ಸಾಧಿಸಬೇಕು," ಎಂದು ಮನಸ್ಸು ಮಾಡಿದರು. ರಾಷ್ಟ್ರೀಯ ಕಾಂಗ್ರೆಸ್ ಎಂಬ ಸಂಸ್ಥೆ ಒಂದು ರೂಪಕ್ಕೆ ಬಂದು ಈ ಗುರಿಯನ್ನು ಸಾಧಿಸಲು ತೊಡಗಿತು. ಮೊದಮೊದಲಲ್ಲಿ ನಮ್ಮ ನಾಯಕರು ನಮ್ಮ ದೇಶದ ಆಡಳಿತದಲ್ಲಿ ನಮಗೂ ಸ್ಥಾನ ಇರಬೇಕು ಎಂದು ಬಯಸುತ್ತ, ದಿನ ಕಳೆದಂತೆ ತಕ್ಕಷ್ಟು ಸಂಖ್ಯೆಯ ತರುಣರು ರಾಷ್ಟ್ರಕ್ಕೆ ಪೂರ್ಣಸ್ವಾತಂತ್ರ್ಯವೇ ಬೇಕು ಎನ್ನುವ ಮಾತನ್ನು ಎತ್ತಿದರು. ಈ ವೇಳೆಗೆ ನಮ್ಮ ಆಂಗ್ಲ ಪ್ರಭುಗಳಿಗೆ ತಮ್ಮೊಂದಿಗೆ ಈ ವಾದವನ್ನು ಹೂಡಿದವರ ಮೇಲೆ ಅಸಮಾಧಾನ. ಇವರು ಬಹು ಮಂದಿ ಬ್ರಾಹ್ಮಣರು, ಇವರಿಗೆ ಇವರ ಧರ್ಮದ ಬೇರೆ ಜನರಿಗೆ, ಹಾಗೆಯೇ ಇವರಿಗೆ ಮತ್ತು ಇತರ ಧರ್ಮದ ಜನರಿಗೆ, ಮಧ್ಯೆ ಜಗಳ ಹುಟ್ಟಿಸಿ ಬದುಕಬೇಕು ಎಂದು ಕಂಡುಕೊಂಡರು , ಇದಕ್ಕಾಗಿ ಇವರು ಬ್ರಾಹ್ಮಣೇತರ ಹಿಂದೂ ನಾಯಕರಿಗೆ, "ನೋಡಿ ಬ್ರಾಹ್ಮಣರು ಆಡಳಿತದಲ್ಲಿ

ಎಲ್ಲಿ ಸ್ಥಾನಗಳಲ್ಲೂ ನಿಂತಿದ್ದಾರೆ ಸಂಖ್ಯೆಯಲ್ಲಿ ನೀವು ಎಷ್ಟು ಹೆಚ್ಚು, ನಿಮಗೆ ಆಡಳಿತದ ನೌಕರವರ್ಗದಲ್ಲಿ ತಕ್ಕಷ್ಟು ಪ್ರಾತಿನಿಧ್ಯ ಇಲ್ಲ, ನೀವು ಹಿಂದೆ ಬಿದ್ದಿದ್ದೀರಿ ಎಚ್ಚೆತ್ತುಕೊಳ್ಳಿ," ಎಂದು ಹೇಳಿದರು. ಈ ನಾಯಕರಿಗೆ ಈ ಮಾತು ರುಚಿಸಿತು ಆಂಗ್ಲಪ್ರಭು ಹೇಳಿದ ಮಾತನ್ನು ತಾವೂ ಹೇಳುತ್ತ ಇವರು ಬ್ರಾಹ್ಮಣೇತರ ಹಿಂದುಗಳ ಪಕ್ಷವೊಂದನ್ನು ಕಟ್ಟಿದರು. "ಎಲ್ಲ ಹೊತ್ತಿನಲ್ಲೂ ಬ್ರಾಹ್ಮಣ ಮುಂದಾಗಿಬಿಟ್ಟ. ಎಲ್ಲ ಒಳ್ಳೆಯದನ್ನೂ ತಾನೇ ಕಸಿದುಬಿಟ್ಟ, ಉಳಿದ ನಮಗೆ ಏನೂ ಇಲ್ಲದಂತೆ ಮಾಡಿದ," ಎಂದು ಬ್ರಾಹ್ಮಣ ಜಾತಿಯ ವಿಷಯದಲ್ಲೇ ದುಷ್ಟಭಾವನೆಯನ್ನು ಬೆಳೆಸಿಕೊಂಡರು. ಈ ಶತಮಾನದ ಎರಡನೇ ದಶಕದಲ್ಲಿ ಈ ಅರ್ಥದ ಚಳುವಳಿ ಮದ್ರಾಸ್ ಪ್ರಾಂತ್ಯದಲ್ಲಿ ಪ್ರಬಲವಾಗಿ ಬೆಳೆಯಿತು ಮೈಸೂರು ಮುಂಬೈ ಪ್ರಾಂತಗಳಲ್ಲಿಯೂ ತಲೆ ಎತ್ತಿತು ಬ್ರಾಹ್ಮಣ ಬ್ರಾಹ್ಮಣೇತರರ ಮಧ್ಯೆ ವಿರಸವನ್ನು ಬಿತ್ತಿದಂತೆ ಆಂಗ್ಲರು ಹಿಂದೂ ಮುಸಲ್ಮಾನರ ಮಧ್ಯೆಯೂ ವಿರಸವನ್ನು ಬಿತ್ತಿದರು. ಕಾಂಗ್ರೆಸ್ಸಿಗೆ ಎದುರಾಗಿ ಮುಸಲ್ಮಾನರು 'ಮುಸ್ಲಿಂ ಲೀಗ್' ಎಂಬ ಒಂದು ಸಂಸ್ಥೆಯನ್ನು ಕಟ್ಟಿಕೊಂಡರು. ಹೀಗೆ ಭಾರತೀಯರೆಲ್ಲ ಗುಂಪುಗುಂಪುಗಳಾಗಿ ಪರಸ್ಪರ ವೈಮನಸ್ಯವನ್ನು ಬೆಳೆಸಿಕೊಂಡು ಬಂದರು ಈ ವೈಮನಸ್ಯ ರಾಜಕೀಯದಲ್ಲಿ ಅಲ್ಲದೆ ಸಮಾಜ ಜೀವನದಲ್ಲೂ ತಲೆ ಇಕ್ಕಿತು ಹಿಂದೆ ಹಿಂದೂ ಸಮಾಜದ ಹತ್ತಾರು ಸಮುದಾಯಗಳು ತಮ್ಮ ತಮ್ಮ ಆಚಾರವನ್ನು ನಿಯಮಿಸಿಕೊಂಡು, ಊಟದಲ್ಲಿ ಮದುವೆಯಲ್ಲಿ ಬೇರೆಬೇರೆ ಪಂಗಡಗಳಾಗಿ ಬಾಳಿದರೂ ಸಮಾಜದ ಜೀವನದಲ್ಲಿ ಪರಸ್ಪರ ಗೌರವದಿಂದ ನಡೆದುಕೊಂಡು ಸಮರಸವಾಗಿ ಬಾಳುತ್ತಿದ್ದವು ಆ ಸ್ಥಿತಿ ಕೊನೆಗೊಂಡಿತು ಬೇರೆಬೇರೆ ಎಂದು ಹೇಳಿಕೊಳ್ಳುವುದೇ ಹಿರಿಮೆಯ ಗುರುತು ಎಂಬಂತೆ ಹಿಂದೂ ಸಮಾಜ ಛಿದ್ರಛಿದ್ರವಾಗಿ ಹೋದು ಹೋಯಿತು. ಈ ಹೊತ್ತು ಇದೇ ನಮ್ಮ ಪರಿಸ್ಥಿತಿ.

## ಇಂದಿನ ನಮ್ಮ ಶುಷ್ಕ ಆಚಾರ

ಜೊತೆಗೆ ಸಮಾಜದಲ್ಲಿ ಅರ್ಥಹೀನ, ವಿವೇಕಹೀನ, ವ್ಯವಹಾರ ತುಂಬ ಬೆಳೆದುಬಿಟ್ಟಿದೆ. ಬ್ರಾಹ್ಮಣ ಜನ ಆಚಾರವನ್ನು ತೊರೆದು ಮಾಂಸಾಹಾರಿಗಳಾಗಿ ಮದ್ಯ ಕುಡಿದರೂ ಜಾತಿ ಮಾತ್ರ ಬ್ರಾಹ್ಮಣ ಎಂದು ಬೇರೆಯಾಗಿ ಬಾಳುತ್ತಿದೆ.

ಆಚಾರವಂತ ಬ್ರಾಹ್ಮಣರ ಮನೆಗಳಲ್ಲಿ ಬೇರೆ ಜಾತಿಯ ಜನರೊಂದಿಗೆ ಕುಳಿತು ಊಟಮಾಡುವ ಕ್ರಮ ಈಗಲೂ ಬಂದಿಲ್ಲ. ಮನೆಯ ಯಜಮಾನ ಹೊಸ ಕಾಲದವನಾದರೆ ಪೂರ್ವದ ಆಚಾರವನ್ನು ತೀರ ತೊರೆದಿರುತ್ತಾನೆ. ತನ್ನ ತಂದೆ ಸ್ನಾನಮಾಡದೆ ಊಟಮಾಡುತ್ತಿರಲಿಲ್ಲ, ತಾನು ಈ ಕ್ರಮವನ್ನು ಬಿಟ್ಟಿದ್ದಾನೆ. ತಂದೆ ಸಂಧ್ಯಾವಂದನೆ ಮಾಡುತ್ತಿದ್ದ, ಇವನು ಮಾಡುವುದಿಲ್ಲ ತಂದೆ ದೇವರ ಪೂಜೆ ಮಾಡುತ್ತಿದ್ದ, ಇವನು ಮಾಡುವುದಿಲ್ಲ ಮನೆಯವರು ಹಬ್ಬ ಹುಣ್ಣಿಮೆಗಳಲ್ಲಿ ದೇವಸ್ಥಾನಕ್ಕೆ ಹೋಗಿ ಬರುತ್ತಿದ್ದರು ಇವನೂ ಇವನ ಮಕ್ಕಳೂ ಹೀಗೆ ಮಾಡುತ್ತಿಲ್ಲ. ತಾನು ಸಂಧ್ಯಾವಂದನೆ ಮಾಡದೇ ಇದ್ದರೂ ಇವನು ತನ್ನ ಮಗನಿಗೆ ಉಪನಯನ ಮಾಡುತ್ತಾನೆ ಅದನ್ನು ಒಂದು ಉತ್ಸವವನ್ನಾಗಿ ನಡೆಸಿ ತನ್ನ ಯೋಗ್ಯತೆಗೆ ತಕ್ಕಂತೆ ಸಾವಿರ ಎರಡು ಸಾವಿರ ರೂಪಾಯಿ ವೆಚ್ಚಮಾಡುತ್ತಾನೆ ಅಪ್ಪನಾದ ಇವನು ಚಿಕ್ಕಂದಿನಲ್ಲಿ ತನ್ನ ಉಪನಯನವಾದ ಬಳಿಕ ಸ್ವಲ್ಪಕಾಲವಾದರೂ ಸಂಧ್ಯಾವಂದನೆ ಮಾಡಿದ್ದಿರ ಬಹುದು. ಇವನ ಮಗ ಉಪನಯನ ಉತ್ಸವ ಮುಗಿದ ಮಾರನೆಯ ದಿನ ದಿಂದಲೇ ಸಂಧ್ಯಾವಂದನೆಯನ್ನು ಬಿಡುತ್ತಾನೆ. ಬ್ರಾಹ್ಮಣರ ಮನೆ ಮದುವೆ ಗಳಲ್ಲಿ ವೇದದ ಕಾಲದ ವಿವಾಹ ಕ್ರಮದೊಂದಿಗೆ ಬೇರೆಬೇರೆ ಕಾಲದ ಯಾವ ಯಾವುದೋ ವಾಡಿಕೆಗಳು ಸೇರಿಕೊಂಡು ಇಂದು ಮದುವೆ ಎನ್ನುವುದು ಎಷ್ಟೋ ಸಾಂಗ್ಯಗಳ ಒಂದು ಗೊಂದಲವಾಗಿದೆ. ಇವುಗಳಲ್ಲಿ ಒಂದು ಸಾಂಗ್ಯ 'ಕಾಶೀಯಾತ್ರೆ' ಎನ್ನುವುದು. ಬ್ರಾಹ್ಮಣ ತರುಣ ವಿದ್ಯೆ ಮುಗಿಸಿ ಕಾಶಿಗೆ ಮುಂದಿನ ವಿದ್ಯಾಭ್ಯಾಸಕ್ಕೆಂದೇ ಹೊರಟಿದ್ದಾನೆ. ಕನ್ಯಾಪಿತೃವೊಬ್ಬ ಮಾರ್ಗದಲ್ಲಿ ಇವನನ್ನು ಕಂಡು, "ನನಗೆ ಮದುವೆ ವಯಸ್ಸಿನ ಮಗಳೊಬ್ಬಳಿದ್ದಾಳೆ, ಅವಳನ್ನು ನೀನು ಮದುವೆಯಾಗು," ಎಂದು ಬೇಡುತ್ತಾನೆ, ತರುಣ ಒಪ್ಪು ತ್ತಾನೆ, ಕನ್ಯಾಪಿತೃ ಅವನನ್ನು ಪೂಜಿಸಿ ಮನೆಗೆ ಕರೆದುಕೊಂಡು ಬಂದು ಮಗಳನ್ನು ಕೊಟ್ಟು ಮದುವೆ ಮಾಡುತ್ತಾನೆ ಇದು ಈ ಕಾಶೀಯಾತ್ರೆಯ ಕಲ್ಪನೆ. ಕಾಶೀಯಾತ್ರೆಗೆ ಹೊರಟಿದ್ದ ಆ ಹಿಂದಿನ ದಿನದ ತರುಣ ಸಂಸ್ಕೃತ ವಿದ್ಯೆ ಮುಗಿಸಿದ್ದವನು. ಈ ಮದುವೆಯ ಆಟದ ಬ್ರಾಹ್ಮಣತರುಣನಿಗೆ ಸಂಸ್ಕೃತದ ಗಂಧ ಇರುವುದಿಲ್ಲ ಆದರೂ ಇವನು ಆ ಹಿಂದಿನ ದಿನದ ಸಂಸ್ಕೃತ ವಿದ್ಯಾವಂತ ತರುಣನ ವೇಷಭೂಷಣಗಳಿಂದ ಅಲಂಕೃತನಾಗಿ ಒಂದು ಪೀಠದಲ್ಲಿ ಕುಳಿತು

ಮಾವನಾಗುವವನ ಕೈಯಿಂದ ಕಾಲು ತೊಳೆಯಿಸಿಕೊಳ್ಳುತ್ತಾನೆ. ಅವನ ಪ್ರಾರ್ಥನೆಯನ್ನು ಸಲ್ಲಿಸುವ ನಾಟಕ ಆಡಿ ಅವನ ಮನೆಗೆ ಬಂದು ಹಸೆಯಲ್ಲಿ ಕುಳಿತು ಮದುವೆಯಾಗುತ್ತಾನೆ. ಮದುವೆಯ ಸಂದರ್ಭದಲ್ಲಿ ವರನ ತಂದೆ ತಾಯಿ ಬಂಧುಜನ ವಧುವಿನ ತಂದೆಯಿಂದ ವರಪೂಜೆಯ ದಕ್ಷಿಣೆ ಮುಂತಾದ ಹೆಸರಿಂದ ಆದಷ್ಟು ಹಣವನ್ನು ಸೆಳೆಯುವುದು ಇದೊಂದು ಕ್ರಮವೇ ಆಗಿದೆ. ಮದುವೆಯ ಅಂಗವಾಗಿ ಸಪ್ತಪದಿ, ಲಾಜಹೋಮ ಇತ್ಯಾದಿ ಕರ್ಮ ನಡೆಯುತ್ತದೆ. ವರನಿಗಾಗಲಿ ವಧುವಿಗಾಗಲಿ ಅದರ ಸ್ವರೂಪ ತಿಳಿಯದು. ಆ ಕರ್ಮಗಳನ್ನು ನಡೆಸುತ್ತಿರುವ ಪುರೋಹಿತನಿಗೇ ಅನೇಕವೇಳೆ ತಾನು ಹೇಳುತ್ತಿರುವ ಮಂತ್ರಗಳ ಅರ್ಥ ತಿಳಿದಿರುವುದಿಲ್ಲ. ಮದುವೆಯ ಒಂದು ಘಟ್ಟದಲ್ಲಿ ಹೆಣ್ಣಿನ ತಂದೆ ಅಳಿಯನಿಗೆ, "ನನ್ನ ಮಗಳು ನಿನ್ನ ಪತ್ನಿ, ಧರ್ಮೇಚ, ಅರ್ಥೇಚ, ಕಾಮೇಚ ನಾತಿಚರಿತವ್ಯಾ," ಎನ್ನುತ್ತಾನೆ. ಅಳಿಯ "ನಾತಿಚರಾಮಿ" ಎನ್ನುತ್ತಾನೆ. "ಧರ್ಮದಲ್ಲಿ, ಅರ್ಥದಲ್ಲಿ, ಕಾಮದಲ್ಲಿ ಇವಳು ನಿನ್ನ ಜೊತೆ ನೀನು ಈ ಮೂರರಲ್ಲಿ ಇವಳನ್ನು ಬಿಟ್ಟು ಚರಿಸಬಾರದು" ಮಾವನ ಮಾತು. "ಅತಿಚರಿಸುವುದಿಲ್ಲ:" ಅಳಿಯನ ಮಾತು. ಈ ಮಾತುಗಳನ್ನು ಅನೇಕ ವೇಳೆ ಈ ಮಾವ ಅಳಿಯ ಹೇಳುವುದಿಲ್ಲ, ಪುರೋಹಿತನೇ ಹೇಳುತ್ತಾನೆ. ಮಾವ ಅಳಿಯ ಹೇಳಿದರೂ ಅವನ ಮನಸ್ಸಿನಲ್ಲಿ ಅದರ ಅರ್ಥ ಇದೆ ಎಂದು ತಿಳಿಯಬೇಕಾದದ್ದಿಲ್ಲ. ಈ ಮಾತನ್ನು ಹೇಳಿದ ಆ ಪುರೋಹಿತನಿಗೂ ಅದರ ಅರ್ಥ ತಿಳಿಯದು ಎನ್ನುವುದು ಸಾಧ್ಯ. ಈಗ ಕೆಲವು ವರುಷಗಳ ಹಿಂದೆ ಬಾಲ್ಯ ವಿವಾಹ ವಾಡಿಕೆಯಾಗಿದ್ದಾಗ ಹೆಂಡತಿ ಪ್ರೌಢೆಯಾದ ಮೇಲೆ ಗಂಡ ಹೆಂಡಂದಿರು ದಾಂಪತ್ಯವನ್ನು ಆರಂಭಿಸಲು ಒಂದು ಕರ್ಮ ನಡೆಯುತ್ತಿತ್ತು. ಪ್ರೌಢ ವಿವಾಹ ತಪ್ಪು ಎನ್ನುತ್ತಿದ್ದ ಆ ಕಾಲ ಎಂದೋ ಮುಗಿಯಿತು. ಈಗ ಪ್ರಾಯಶಃ ಎಲ್ಲಾ ವಿವಾಹದಲ್ಲಿಯೂ ವಧು ಪ್ರೌಢೆ ಆದವಳೇ. ಆದ್ದರಿಂದ ಹಿಂದಿನ ಆ ಕರ್ಮಭಾಗ ಬೇರೆಯಾಗಿ ನಡೆಯುತ್ತಿಲ್ಲ. ಕನ್ಯೆ ಪ್ರೌಢೆಯಾಗಿಯೂ ಮದುವೆಯಾಗದಿದ್ದರೆ ಪೂರ್ವದಲ್ಲಿ ಸಮಾಜ ಅಂಥ ಸಂಸಾರವನ್ನು ಕಠಿಣವಾದ ಶಿಕ್ಷೆಗೆ ಗುರಿಮಾಡುತ್ತಿತ್ತು. ಜೀವನದ ಸಂದರ್ಭಗಳು ಬೇರೆಯಾಗಿ ಪ್ರೌಢಾ ವಿವಾಹವೇ ಈಗ ವಾಡಿಕೆ ಆಗಿರುವುದರಿಂದ ಈಗ ಯಾರೂ ಆ ಖಂಡನೆಯ ಮಾತನ್ನು ಎತ್ತುವುದಿಲ್ಲ. ಸಮಾಜ ಅಷ್ಟರಮಟ್ಟಿಗೆ ಸುಧಾರಣೆಯನ್ನು

ಮಾಡಿಕೊಂಡಿದೆ. ಇಷ್ಟೆಲ್ಲ ಮಾತಿನ ಅರ್ಥ, ಬ್ರಾಹ್ಮಣ ಸಮಾಜ ಹಿಂದಿನ ಶಾಸ್ತ್ರದ ವಿಧಿ ಕೆಲವನ್ನು ಅರ್ಥ ಮಾತ್ರ ಬರಿಯ ವಾಡಿಕೆಯಾಗಿ ಉಳಿಸಿ ಕೊಂಡು ತೋಳಲುತ್ತಿದೆ ಎನ್ನುವುದು.

ಉಪನಯನಕ್ಕೆಂದು ಮಾಡುವ ವೆಚ್ಚ ತಂದೆಯ ವರಮಾನಕ್ಕೆ ತಕ್ಕಂತೆ ಅವನಿಗೆ ಇಷ್ಟವಟ್ಟಷ್ಟು ಆಗಬಹುದಾದರೂ, ಮಗಳ ಮದುವೆಯ ವೆಚ್ಚ ಅವನ ವರಮಾನವನ್ನೂ ಅವನ ಇಷ್ಟವನ್ನೂ ಗಣಿಸುವುದು ಇಲ್ಲವೇ ಇಲ್ಲ ಉಳ್ಳವ ನಾಗಲಿ ಇಲ್ಲದವನಾಗಲಿ ಒಂದುಮಟ್ಟದ ವೆಚ್ಚವನ್ನು ಮಾಡಲೇಬೇಕು. ಮನೆ, ನೆಲ, ಒಡವೆ, ಒತ್ತೆ ಇಡಬಹುದು, ಭೋಗ್ಯ ಮಾಡಬಹುದು ಅದನ್ನೆಲ್ಲ ಮಾರಿದರೂ ಸರಿಯೇ, ವೆಚ್ಚದಲ್ಲಿ ಯಾವುದೂ ಕಡಿಮೆಯಾಗುವಂತಿಲ್ಲ.

ಬ್ರಾಹ್ಮಣ ಸಮಾಜ ಬೆಳೆಸಿಕೊಂಡಿರುವ ಈ ಅರ್ಥಹೀನ ಅಸಾಧು ದುಷ್ಟ ಪದ್ಧತಿಗಳನ್ನು ಇವರಂತೆಯೇ ಒಳ್ಳೆಯ ವರಮಾನವನ್ನು ಪಡೆಯುತ್ತಿರುವ ಬೇರೆಯ ಜಾತಿಯ ಶ್ರೀಮಂತರೂ ಕಟ್ಟಿಕೊಂಡಿದ್ದಾರೆ ಇವರಲ್ಲಿಯೂ ಕಾಶೀ ಯಾತ್ರೆ, ವರದಕ್ಷಿಣೆ ವರಪೂಜೆ, ಉಡುಗೊರೆ, ಊಟದಡಬಡ್ಡಾಳಿಕೆ, ಬ್ರಾಹ್ಮಣ ಪುಣ್ಯವಂತ ಮನೆಗಳ ಪೂಜೆ ದಕ್ಷಿಣೆ, ಉಡುಗೊರೆ ಇವುಗಳಿಗೆ ಸರಿಸಮನಾಗಿ ನೆತ್ತಿಗೆ ಏರಿವೆ.

## ಜಾತಿ ವೈಷಮ್ಯ

ನಮ್ಮಲ್ಲಿ ಜಾತಿಗಳ ಮಧ್ಯೆ ಮೂಡಿದ ವಿರಸ, ಹೊಸಕಾಲದ ಆಡಳಿತದ ಕ್ರಮ, ರಾಜಕೀಯ, ಇವುಗಳಿಂದ ಸದ್ಯದಲ್ಲಿ ತುಂಬ ಕೇಡಿಗೆ ಕಾರಣವಾಗಿದೆ. ಸರಕಾರದ ಅಧಿಕಾರ ವರ್ಗದಲ್ಲಿ ಬ್ರಾಹ್ಮಣರ ಸಂಖ್ಯೆ ಬಹಳವಾಯಿತು, ಇತರರಿಗೆ ತಕ್ಕಷ್ಟು ಸಂಖ್ಯೆಯ ಸ್ಥಾನಗಳು ಸಿಕ್ಕಿಲ್ಲ, ಎಂಬ ಮಾತನ್ನು ಮುಂದುಮಾಡಿ ನಮ್ಮ ಆಂಗ್ಲ ಪ್ರಭುಗಳು ಇಂಥ ನಮ್ಮ ಜನರನ್ನು ಹಿಂದುಳಿದ ಜಾತಿಗಳು ಎಂದು ಕರೆದರು "ಹಿಂದುಳಿದ" ಎಂಬ ಗುಣವಾಚಕವನ್ನು ಮೊದಲು ಬಳಸಿದಾಗ ಇದರ ಅರ್ಥ "ತಮ್ಮ ಸಂಖ್ಯೆಗೆ ಅನುಗುಣವಾದ ಸಂಖ್ಯೆಯ ಅಧಿಕಾರ ಸ್ಥಾನಗಳನ್ನು ಪಡೆಯದ ಜನ" ಎಂದು ಇತ್ತು ಸರಕಾರದ ಕೆಲಸ ತಕ್ಕ ಸಂಖ್ಯೆಯಲ್ಲಿ ಇಲ್ಲದೆ ಇದ್ದರೂ ಈ ಜಾತಿಗಳೆಲ್ಲ ದಿಟದಲ್ಲಿ ಹಿಂದುಳಿದ ಜಾತಿಗಳೇನೂ ಅಲ್ಲ. ನಮ್ಮ ದೇಶದ ಒಕ್ಕಲುಮಕ್ಕಳು, ವೀರಶೈವರು,

ಹಿಂದುಳಿದ ಜನ ಎಂದು ಯಾರು ಹೇಳಿಯಾರು? ಏಕೆ ಹೇಳಿಯಾರು? ದೇಶದ ನೆಲದ ಬಹುಪಾಲು ಒಕ್ಕಲ ಮಕ್ಕಳ ಕೈಯಲ್ಲಿದೆ, ವ್ಯವಹಾರದ ಬಹುಪಾಲು ವೀರಶೈವರ ಕೈಯಲ್ಲಿದೆ. ಇಂಗ್ಲಿಷ್ ವಿದ್ಯೆ ಕಲಿತು ಸರಕಾರದ ಕೆಲಸದಲ್ಲಿ ಸೇರಿದ ಉಪಾಧ್ಯಾಯರು, ಲಾಯರು, ಡಾಕ್ಟರು ಆದ ಬ್ರಾಹ್ಮಣರನ್ನು ಹೊರತು ಉಳಿದ ಬ್ರಾಹ್ಮಣ ಜನರು ಬಹುಪಾಲು ಇತರ ಜಾತಿಯ ಜನರಂತೆಯೇ ಬಡವರಾಗಿದ್ದಾರೆ ಇಲ್ಲವೆ ಅವರ ಸ್ಥಿತಿಗಿಂತ ಕಡಿಮೆಯಾದ ಒಂದು ಪಾಡಿನಲ್ಲಿ ಬಾಳುತ್ತಿದ್ದಾರೆ ಎರಡು ಹೊತ್ತಿನ ಊಟ ಇದ್ದವನೇ ಪುಣ್ಯವಂತ ಎಂದು ಕೊಳ್ಳುವ ಈ ಬಹು ಜನ ಬ್ರಾಹ್ಮಣರು "Forward Class" ಮುಂದೆ ಹೋದ ಜನವೇ? ಮನೆಯಲ್ಲಿ ತಕ್ಕಷ್ಟು ಕಾಳು ಉಳ್ಳ, ತಕ್ಕಷ್ಟು ಕಾಸುಉಳ್ಳ, ಬಹುಸಂಖ್ಯೆಯ ಒಕ್ಕಲುಮಕ್ಕಳು, ವೀರಶೈವರು ಹಿಂದುಳಿದ ಜನವೇ? ನಮ್ಮ ಜನರಲ್ಲಿ ಪರಸ್ಪರ ವೈಷಮ್ಯ ಹುಟ್ಟಿಸಿ ತಮ್ಮ ಪ್ರಭುತ್ವವನ್ನು ಭದ್ರಪಡಿಸಿ ಕೊಳ್ಳಲು ಪರದೇಶಿ ಆಂಗ್ಲ ಮಾಡಿದ ಪ್ರಯತ್ನ ಫಲಿಸಿತು. ನಮ್ಮ ಜನ ಸರಕಾರದ ಅಧಿಕಾರಕ್ಕೆ ಸಾಧಕವಾದ ವಿದ್ಯೆಯನ್ನು ಪಡೆಯಲು ಸ್ಪರ್ಧಿಸಲು ತೊಡಗಿದರು. ಒಂದೊಂದು ಜಾತಿಯೂ ಈ ಉದ್ದೇಶ ಸಾಧನೆಗಾಗಿ ಸಂಘ ಗಳನ್ನು ಮಾಡಿಕೊಂಡಿತು ಒಕ್ಕಲಿಗರ ಸಂಘ, ಕುರುಬರ ಸಂಘ, ಇತ್ಯಾದಿ, ಇತ್ಯಾದಿ ಹಿಂದುಳಿದ ಜಾತಿಗಳೆಂಬ ಈ ಸಮುದಾಯಗಳ ಜನರು ಸಂಘಗಳನ್ನು ಮಾಡಿಕೊಂಡಂತೆ ಬ್ರಾಹ್ಮಣರು ತಮ್ಮ ಜಾತಿಯ ಕ್ಷೇಮವನ್ನು ಕಾಪಾಡು ವುದಕ್ಕೆ ಸಂಘಗಳನ್ನು ನಿರ್ಮಿಸುವ ಯೋಚನೆ ಮಾಡಬೇಕಾಯಿತು.

ಸರಕಾರದ ಸೇವೆಯಲ್ಲಿ ಅನೇಕ ಸ್ಥಾನವನ್ನು ಪಡೆದಿದ್ದ ಇವರು ಈಗ ಇರುವ ಅಧಿಕ ಸಂಖ್ಯೆಯ ಸ್ಥಾನಗಳನ್ನು ಉಳಿಸಿಕೊಳ್ಳಲು ಮಾಡುವ ಪ್ರಯತ್ನ ಇದು ಎಂದು ಇತರರಿಗೆ ಕಂಡದ್ದು ಸಹಜ ಸರಕಾರದ ಸೇವೆಯಲ್ಲಿ ಬ್ರಾಹ್ಮಣ ತನ್ನ ಪಾಲಿನವುಗಳ ಸಂಖ್ಯೆ ಕಡಿಮೆ ಆದಂತೆ ಬೇರೆ ವೃತ್ತಿಗಳನ್ನು ಪ್ರವೇಶಿಸಿದ. ಅವುಗಳಲ್ಲಿ ಇತರ ಜಾತಿಯ ಜನರೊಂದಿಗೆ ಸ್ಪರ್ಧಿಸತೊಡಗಿದ. ಇದೆಲ್ಲ ಜಾತಿ ಜಾತಿಯ ಮಧ್ಯದ ವೈಮನಸ್ಯವನ್ನು ಮತ್ತಷ್ಟು ಬೆಳೆಸಿತು. ಒಂದೊಂದು ಜಾತಿಯೂ ತನ್ನ ಜನರ ಕ್ಷೇಮವನ್ನಷ್ಟೇ ಸಾಧಿಸ ಹೊರಟರೆ 'ಹಿಂದೂ' ಎಂಬ ಹೆಸರಿನ ಒಟ್ಟು ಸಮುದಾಯದ ಕ್ಷೇಮವನ್ನು ನೋಡಿಕೊಳ್ಳುವವರು ಯಾರು? ಪ್ರಭುಗಳ ಪ್ರೇರಣೆಯಿಂದ ರಾಷ್ಟ್ರದ ಮಹಮ್ಮದೀಯ ಜನ, ರಾಷ್ಟ್ರದ ಕ್ರೈಸ್ತ

ಜನ, ತಮ್ಮ ತಮ್ಮ ಕ್ಷೇಮಕ್ಕಾಗಿ ಸಮ್ಮೇಳನಗಳನ್ನು ನಡೆಸಿದರು. ಹಿಂದೂ ಜನರ ಕ್ಷೇಮಕ್ಕಾಗಿ ರಾಷ್ಟ್ರದ ಮಟ್ಟದಲ್ಲಾಗಲೀ ದೇಶದ ಬೇರೆ ಬೇರೆ ಭಾಗ ಗಳಲ್ಲಾಗಲೀ ಪ್ರಯತ್ನಗಳಿಲ್ಲ. ಹೀಗಾಗಿ ಹಿಂದೂ ಸಮಾಜದ ಕ್ಷೇಮ ಎನ್ನುವುದು ಒಂದು ಗುರಿಯೇ ಅಲ್ಲದೆ ಹೋಯಿತು

ಕೆಲವು ವರ್ಷಗಳ ಹಿಂದೆ ಮೈಸೂರಿನಲ್ಲಿ ಬ್ರಾಹ್ಮಣ ಸಮಾಜ ಒಂದು ಏರ್ಪಟ್ಟಾಗ ಅದರ ಸದಸ್ಯರಲ್ಲಿ ನಾನು ಒಂದು ವಿಜ್ಞಾಪನೆಯನ್ನು ಮಾಡಿದೆನು. "ಬೇರೆ ಜಾತಿಗಳ ಜನರು ವಿದ್ಯೆಯಲ್ಲಿ, ಸರಕಾರದ ಅಧಿಕಾರದ ಶ್ರೇಣಿಯಲ್ಲಿ, ತಾವು ಹಿಂದಿರುವ ಕಾರಣದಿಂದ ಈ ದಿನಗಳಲ್ಲಿ ಮುಂದುವರಿಯುವುದಕ್ಕೆ ವಿಶಿಷ್ಟ ಯತ್ನಗಳನ್ನು ಕೈಗೊಳ್ಳುವುದು ಅವಶ್ಯಕವೆಂದು ಸಮಾಜಗಳನ್ನು ಮಾಡಿ ಕೊಂಡಿದ್ದಾರೆ. ಬ್ರಾಹ್ಮಣ ಜಾತಿ, ಈ ಎರಡು ವಿಷಯಗಳಲ್ಲಿ ವಿಶೇಷ ಯತ್ನ ಮಾಡಬೇಕಾದ ಕಾರಣವಿಲ್ಲ ಬ್ರಾಹ್ಮಣ ನಮ್ಮ ಹಿಂದೂ ಸಮಾಜದ ಜಾತಿ ಗಳಲ್ಲಿ ಅಣ್ಣ ಆದ ಜಾತಿ. ಇತರರಂತೆ ತಾನು ತನ್ನ ಕ್ಷೇಮವನ್ನು ಮಾತ್ರ ನೋಡಿಕೊಳ್ಳುವುದು ಅಣ್ಣನ ನಡತೆ ಆಗುವುದಿಲ್ಲ. ನಮ್ಮ ಧರ್ಮ ಉಳಿಯ ಬೇಕಾದರೆ ಈ ಜಾತಿಯ ಬಲ್ಲ ಜನ ಬ್ರಾಹ್ಮಣರ ಕ್ಷೇಮ ಮಾತ್ರ ಅಲ್ಲ, ಎಲ್ಲ ಜಾತಿಗಳ ಕ್ಷೇಮವೂ ತಮ್ಮ ಹೊಣೆ ಎಂದು ಮನಗಾಣಬೇಕು " ಈಗಲೂ ನನ್ನ ಮನಸ್ಸು ಹೀಗೆಯೇ ಹರಿಯುತ್ತ ಇದೆ. ಎಲ್ಲ ಜಾತಿಗಳ ಹೊಣೆ ತನ್ನದೆಂದು ಮನಗಾಣುವಂತೆ ಬ್ರಾಹ್ಮಣ ಜಾತಿ ಉಳಿದ ಜಾತಿಗಳಿಗೆ ಒಂದೊಂದಕ್ಕೂ, ನೀನು ನಿನ್ನ ಜನರ ಕ್ಷೇಮವನ್ನು ಮಾತ್ರ ನೋಡಿಕೊಂಡರೆ ಸಾಲದು, ಹಿಂದೂ ಸಮಾಜದ ಎಲ್ಲ ಜನರ ಕ್ಷೇಮವೂ ನಿನ್ನ ಹೊಣೆ ಎನ್ನು ವುದನ್ನು ಮನಗಾಣಬೇಕು" ಎಂದು ಸಹ ತಿಳಿಸಬೇಕಾಗಿದೆ. ಹಿಂದೂ ಧರ್ಮ ಬೆಳೆಸಿಕೊಂಡು ಬಂದಿರುವ ವಾಡಿಕೆಗಳಲ್ಲಿ ಒಳ್ಳೆಯವಾದುವನ್ನು ಉಳಿಸುವ ಹೊಣೆ ಹಿಂದೂ ಆದ ಎಲ್ಲ ಜನರನ್ನೂ ಸೇರಿದೆ. ಈ ಹೊಣೆಯನ್ನು ಹೇಗೆ ನಿರ್ವಹಿಸುವುದು ಎಂದು ಹಿಂದೂ ಸಮಾಜದ ನೂರು ಜಾತಿಗಳ ಬಲ್ಲ ಜನ ಒಂದು ಕಡೆ ಸೇರಿ ನಿಶ್ಚಯಿಸಬೇಕಾಗಿದೆ.

## ವೈಷಮ್ಯದ ವಿಕಾರರೂಪ

ಇಂಗ್ಲರು ಸ್ವಾರ್ಥದ ದೃಷ್ಟಿಯಿಂದ ನಮ್ಮಲ್ಲಿ ಒಳಜಗಳಗಳನ್ನು ಮೊದಲು

ಮದರಾಸ್ ಪ್ರಾಂತ್ಯದಲ್ಲಿ ಮೂಡಿಸಿದರು ಬ್ರಾಹ್ಮಣ ಬ್ರಾಹ್ಮಣೇತರ ಸ್ಪರ್ಧೆ ತಮಿಳುನಾಡಿನಲ್ಲಿ ಬೆಳೆದ ರೀತಿ ನಮಗೆಲ್ಲ ತಿಳಿದಿದೆ ಆಂಗ್ಲ ಪ್ರಭುವಾಗಿದ್ದ ದಿನದಲ್ಲಿ ಬ್ರಾಹ್ಮಣರನ್ನು ವಿರೋಧಿಸುವುದಕ್ಕೆಂದೇ ಬ್ರಾಹ್ಮಣೇತರರ ರಾಜಕೀಯ ಪಕ್ಷವೊಂದು ನಿರ್ಮಾಣ ಆಯಿತು ಇದರ ಹೆಸರು ಜಸ್ಟಿಸ್ ಪಾರ್ಟಿ (Justice Party) ಎಂದರೆ ಬ್ರಾಹ್ಮಣರು ಅಲ್ಲದ ಜನರಿಗೆ ನ್ಯಾಯವನ್ನು ದೊರಕಿಸಿ ಕೊಡುವ ಪಕ್ಷ ಮೂಲತಃ ಇದರ ಗುರಿ ಸರ್ಕಾರದ ಕೆಲಸಗಾರರ ಸ್ಥಾನದಲ್ಲಿ ಬ್ರಾಹ್ಮಣೇತರರಿಗೆ ಅವರ ಸಂಖ್ಯೆಗೆ ಯುಕ್ತವಾದ ಹಾಳತದಲ್ಲಿ ಹೆಚ್ಚು ಸಂಖ್ಯೆಯ ಸ್ಥಾನಗಳನ್ನು ಕೊಡಿಸುವುದು. ಇದನ್ನು ತಪ್ಪು ಎಂದು ಯಾರೂ ಹೇಳುವಂತಿಲ್ಲ ವಿದ್ಯಾವಂತರಾಗಿ ಆಯಾ ಸ್ಥಾನದ ಕೆಲಸವನ್ನು ಸರಿಯಾಗಿ ಮಾಡಬಲ್ಲ ಬ್ರಾಹ್ಮಣೇತರ ಪ್ರಜೆಗಳಿಗೆ ಆ ಸ್ಥಾನ ದೊರೆಯ ಬೇಕೆಂಬುದು ನ್ಯಾಯವೇ. ಇರುತ್ತ, ಇಂಥ ಭಾವನೆ ಹೀಗೆ ಸಮಾಧಾನವಾಗಿ ನಿಲ್ಲುವುದಿಲ್ಲ ಜನ ಜನರ ಮಧ್ಯೆ ವೈಷಮ್ಯವನ್ನು ಮೂಡಿಸುತ್ತದೆ, ಬೆಳೆಸುತ್ತದೆ. ಜಸ್ಟಿಸ್ ಪಾರ್ಟಿಯ ನಾಯಕರಾಗಿದ್ದ ಹಿರಿಯರು ಆ ಕಾಲದಲ್ಲಿ ಬ್ರಾಹ್ಮಣರನ್ನು ಕುರಿತು ಹಳಿವಿನ ಮಾತನಾಡುವುದನ್ನು ಒಂದು ಕ್ರಮ ಮಾಡಿ ಕೊಂಡರು. ತಾನು ಆಧುನಿಕ ಎಂದು ಸಮುದಾಯದ ಆಚಾರವನ್ನು ತೊರೆದು ಮದ್ಯವನ್ನು ಕುಡಿದ ಬ್ರಾಹ್ಮಣರನ್ನು ಹಳಿಯಲು ಇವರು ಮದ್ಯವನ್ನು 'ಬ್ರಾಹ್ಮಣರ ಸೋಡಾ' ಎಂದದ್ದುಂಟು. ಸರ್ಕಾರದ ಅಧಿಕಾರದಲ್ಲಿ ಮಾತ್ರ ವಲ್ಲ, ಸಮಾಜದ ಯಾವುದೇ ವ್ಯವಹಾರದಲ್ಲಿ ಬ್ರಾಹ್ಮಣ ಜಾತಿಯ ಒಬ್ಬ ವ್ಯಕ್ತಿ ಮುಂದಾಗುವುದು ಇವರಿಗೆ ಒಲ್ಲದೆ ಹೋಯಿತು.

ಸ್ವಾತಂತ್ರ್ಯವನ್ನು ಗಳಿಸಲು ರಾಷ್ಟ್ರದ ಕಾಂಗ್ರೆಸ್ ಆರಂಭಿಸಿದ ಕಾರ್ಯಕ್ರಮದಲ್ಲಿ ಅನೇಕ ಪ್ರಮುಖರು ಅನೇಕ ಕೆಲಸಗಾರರು ಪಾತ್ರವಹಿಸಿದ್ದರಿಂದ ಈ ಹೋರಾಟದಲ್ಲಿ ಬ್ರಾಹ್ಮಣ ಬ್ರಾಹ್ಮಣೇತರರ ಮಧ್ಯದ ವೈಷಮ್ಯ ಹಿಂದೆ ಬಿತ್ತು. ಒಟ್ಟು ಜನತೆಯೇ ಕಾದಿ ಸ್ವಾತಂತ್ರ್ಯವನ್ನು ಗಳಿಸುವುದರಲ್ಲಿ ಕಷ್ಟ ನಿಷ್ಠುರವನ್ನು ಹರ್ಷದಿಂದ ಒಪ್ಪಿಕೊಂಡಿತು, ಕ್ಲೇಶಕ್ಕೆ ಈಡಾಯಿತು. ಸ್ವಾತಂತ್ರ್ಯ ದೊರೆತೀತು ಎಂಬ ಭಾವ ಬೆಳೆದು, ನಮ್ಮ ಜನವೇ ಅರ್ಧ ಸ್ವಾತಂತ್ರ್ಯದ "Diarchy" ಮದರಾಸ್ ಸರ್ಕಾರವನ್ನು ಕಟ್ಟಿದಾಗ ಒಬ್ಬ ಬ್ರಾಹ್ಮಣ ಸರ್ಕಾರದ ಮುಖ್ಯಮಂತ್ರಿಯಾದ. ಸ್ವಾತಂತ್ರ್ಯಸಂಗ್ರಾಮ

ಮುಂದರಿದು ಹತ್ತು ವರುಷದಲ್ಲಿ ರಾಷ್ಟ್ರ ಸ್ವತಂತ್ರವೇ ಆಯಿತು ಆಗಲೂ ಕಾಂಗ್ರೆಸ್ ಮುಖ್ಯ ಪಕ್ಷ ಆಗಿದ್ದು ಅದರಲ್ಲಿ ಪ್ರಮುಖರಾಗಿದ್ದವರು ಪ್ರತಿ ಸರ್ಕಾರದಲ್ಲಿಯೂ ಮಂತ್ರಿ ಪದವಿಗಳನ್ನು ಪಡೆದರು ಜಾತಿಯ ಮಾತು ಮುಖ್ಯ ಆಗಲಿಲ್ಲ ಆದರೆ ಇದು ಬಹುದಿನ ನಡೆಯಲಿಲ್ಲ. ಜಸ್ಟಿಸ್ ಪಾರ್ಟಿಯ ಪಕ್ಷ ಹೆಸರಷ್ಟಕ್ಕೆ ಉಳಿಯಿತು ಅದರ ಬಹುಜನ ಕಾಂಗ್ರೆಸ್‌ನಲ್ಲಿ ಸೇರಿದ ಕಾರಣ ಕಾಂಗ್ರೆಸಿಗೆ ಸೇರಿದ್ದ ಆ ಜನ ಜಾತಿಯ ಮಾತನ್ನೆತ್ತಿದರು. ಕೆಲವು ವರ್ಷದಲ್ಲಿ ಆಯ್ಕೆಗಳು ನಡೆದಾಗ ತಾವು ಬಹುಸಂಖ್ಯೆಯ ಸ್ಥಾನಗಳನ್ನು ಪಡೆದು ಸರಕಾರಗಳನ್ನು ಕಟ್ಟಿದರು ಇವುಗಳಲ್ಲಿ ಮೊದಲನೆಯದರಲ್ಲಿ ಒಬ್ಬ ಇಬ್ಬರು ಬ್ರಾಹ್ಮಣರಿಗೆ ಸ್ಥಾನ ದೊರೆಯಿತು. ಆ ಬಳಿಕ ಬ್ರಾಹ್ಮಣ ಒಬ್ಬನೂ ಇಲ್ಲದ ಮಂತ್ರಿಮಂಡಲವೊಂದು ನಿರ್ಮಾಣ ಆಯಿತು. ಬ್ರಾಹ್ಮಣೇತರ ನಾಯಕರೊಬ್ಬರು, "ಸದ್ಯ ಒಂದು ಬ್ರಾಹ್ಮಣಪಿಳ್ಳೆ ಇಲ್ಲದ ಸರಕಾರ ನಿರ್ಮಾಣ ಆದದ್ದು ಜನತೆಯ ಭಾಗ್ಯ" ಎಂದು ಸಂತೋಷದಿಂದ ಘೋಷಿಸಿದರು

ಹೀಗೆ ಘೋಷಿಸಿದ ನಾಯಕರು ರಾಮಸ್ವಾಮಿ ನಾಯಕರ್ ಎಂಬ ಪ್ರಖ್ಯಾತ ರಾಜಕಾರಣಿ. ಇವರು ಚಕ್ರವರ್ತಿ ರಾಜಗೋಪಾಲಾಚಾರ್ಯರ ಗೆಳೆಯರಾಗಿದ್ದವರು. ಬ್ರಾಹ್ಮಣ ಜನರು ಬ್ರಾಹ್ಮಣೇತರರನ್ನು ಸಮಾಜದಲ್ಲಿ ನಡೆಸಿಕೊಳ್ಳುವ ರೀತಿಯಿಂದ ಮನನೊಂದು ಇವರು ಬ್ರಾಹ್ಮಣ ಸಮುದಾಯಕ್ಕೆ ವಿರೋಧಿಯಾಗಿ ನಿಂತರು, ಆ ಮುನ್ನ ಮಿತ್ರರಾಗಿದ್ದ ಆಚಾರ್ಯರೊಂದಿಗೆ ಸ್ನೇಹವನ್ನು ತೊರೆದರು. ಈ ನಾಯಕರ ರಾಜಕೀಯ ಪಕ್ಷ 'ದ್ರಾವಿಡಕಳಗಂ.' ಕೆಲವು ವರ್ಷ ನಡೆದು ಈ ಪಕ್ಷದಲ್ಲಿ ಅಭಿಪ್ರಾಯ ಭೇದಗಳು ಹುಟ್ಟಿ ಬಹುಜನ ರಾಮಸ್ವಾಮಿ ನಾಯಕರ ನಾಯಕತ್ವವನ್ನು ಒಪ್ಪದೆ ಬೇರೆಯಾಗಿ ನಿಂತರು. ತಮ್ಮ ಪಕ್ಷಕ್ಕೆ 'ದ್ರಾವಿಡ ಮುನ್ನೇತ್ರ ಕಳಗಂ' ಎಂದು ಹೆಸರು ಕೊಟ್ಟರು. ಹೊಸ ಪಕ್ಷ ಯಾವ ವಿವರಗಳಲ್ಲಿ ದ್ರಾವಿಡ ಕಳಗಂ ಪಕ್ಷದಿಂದ ಬೇರೆ ಆದರೂ ಬ್ರಾಹ್ಮಣರನ್ನು ತಮ್ಮೊಂದಿಗೆ ಸೇರಿಸಿಕೊಂಡು ಬಾಳುವ ಮನಸ್ಸಿನ ಜನ ಅಲ್ಲ. ಇದರಲ್ಲಿ ಕೆಲವರು ದ್ರಾವಿಡ ದೇಶ ಭರತವರ್ಷದ ಒಂದು ಭಾಗವಾಗಿ ಇರ ಬೇಕಾದದ್ದಿಲ್ಲ ಎನ್ನುವವರು. ಇವರ ಗುರಿ ಭರತವರ್ಷದ ದಕ್ಷಿಣ ಭಾಗವನ್ನು ಬೇರೆ ರಾಷ್ಟ್ರವಾಗಿ ಮಾಡುವುದು. "ದ್ರಾವಿಡಸ್ಥಾನದ ಸಂಸ್ಕೃತಿ ತಮಿಳು ಸಂಸ್ಕೃತಿ. ಇಲ್ಲಿ ಬ್ರಾಹ್ಮಣರಿಗೆ ಸ್ಥಳವಿಲ್ಲ, ಸಂಸ್ಕೃತ ಭಾಷೆಗೆ ಸ್ಥಳವಿಲ್ಲ.

ಬ್ರಾಹ್ಮಣರು ಆರ್ಯರು; ದ್ರಾವಿಡ ಭೂಮಿಯಲ್ಲಿ ಇವರು ಇರಕೂಡದು. ಸಂಸ್ಕೃತ ಉತ್ತರದ ಭಾಷೆ ದಕ್ಷಿಣದಲ್ಲಿ ಅದು ಇರಬೇಕಾದದಿಲ್ಲ"

ಇದೊಂದು ಉಗ್ರ ಪಕ್ಷ. ಇದರ ನಾಯಕರು ಇದರ ಮಾತನ್ನು ಎತ್ತಿಯೂ ಎತ್ತಿದರು. ಕೇಂದ್ರ ಸರ್ಕಾರ, "ಇಂಥ ಮಾತು ರಾಷ್ಟ್ರದ್ರೋಹ, ಇದನ್ನು ಎತ್ತುವುದು ದಂಡನೆಗೆ ಗುರಿಯಾಗುವ ಅಕೃತ್ಯ," ಎಂದು ಶಾಸನ ಮಾಡಿದ್ದಾದಮೇಲೆ ಈ ಧೋರಣೆ ಹಿಂದೆ ಬಿತ್ತು. ಆದರೂ ಇದರ ಕ್ರೂರ ಮನೋಧರ್ಮ ಇವರ ಜೀವನದ ಮಧ್ಯದಲ್ಲಿ ಇನ್ನೂ ನಿಂತಿದೆ.

ಆರ್ಯರನ್ನು ಅವರ ಧರ್ಮವನ್ನು ಹಳಿಯುವುದಕ್ಕೆ ಈ ಮನೋಧರ್ಮದ ಒಬ್ಬ ಲೇಖಕ ರಾಮಾಯಣವನ್ನು ಅಣಕಿಸಿ 'ಕೀಮಾಯಣ' ಎಂಬ ಒಂದು ನಾಟಕವನ್ನು ರಚಿಸಿದನು. ಇದು ಹತ್ತಾರು ಕಡೆ ಹತ್ತಾರು ಸಲ ರಂಗದ ಮೇಲೆ ಕಂಡಿತು. ಬ್ರಾಹ್ಮಣೇತರರೇ ಇತರರು ಇದನ್ನು ವಿರೋಧಿಸಿದರು ಇದರ ಮಾತು ಈಚೆಗೆ ಅಷ್ಟಾಗಿ ಕೇಳಿಬರುತ್ತಿಲ್ಲ. ಇರುತ್ತ ಆರ್ಯರ ಮನಸ್ಸಿಗೆ ನೋವು ಮಾಡುವುದು ಒಂದು ಕರ್ತವ್ಯ ಎಂಬ ಭಾವನೆಯಿಂದ ಈ ಮನೋಧರ್ಮದ ಜನ ಮದರಾಸ್ ನಗರದಲ್ಲಿ, ಮುಖ್ಯವಾಗಿ ಬ್ರಾಹ್ಮಣರು ಹತ್ತು ಜನ ಬಾಳುವ ಸ್ಥಳಗಳಲ್ಲಿ, ಬ್ರಾಹ್ಮಣ ಸಮುದಾಯವನ್ನು ಹಳಿಯುವ ಭಾಷಣಗಳನ್ನು ಮಾಡಿದರು; ಬ್ರಾಹ್ಮಣರನ್ನು ದೂಷಿಸಿ ಗೋಡೆಗಳ ಮೇಲೆ, ಬಾಗಿಲುಗಳ ಮೇಲೆ, ವಾಕ್ಯಗಳನ್ನು ಬರೆದರು. ನಾನು ಒಮ್ಮೆ ಮದರಾಸಿಗೆ ಹೋಗಿದ್ದಾಗ ರೈಲು ಗಾಡಿಯ ಬಾಗಿಲುಗಳ ಮೇಲೆ ಇಂಥ ಒಂದು ವಾಕ್ಯ ಬರೆದಿದ್ದುದನ್ನು ಓದಿದ್ದುಂಟು.

ರಾಮಸ್ವಾಮಿನಾಯಕರು ಕೆಲವು ವರುಷಗಳ ಹಿಂದೆ ತೀರಿಕೊಂಡರು. ಆದರೆ ಅವರು ಬಿತ್ತಿದ ದ್ವೇಷದ ಮನೋಧರ್ಮ ಬೆಳೆಯುತ್ತಲೇ ಇದೆ ಕೆಲವು ವರುಷಗಳ ಹಿಂದೆ ಈ ಪಕ್ಷದ ಜನರು ಸೇಲಂ ನಗರದಲ್ಲಿ ಒಂದು ಉತ್ಸವ ನಡೆಸಿದರು ಉತ್ಸವದ ಕೂಟದ ಮಧ್ಯೆ ತೇರಿನ ಮೇಲೆ ಶ್ರೀರಾಮನ ಮೂರ್ತಿ. ಅದರ ಕೊರಳಿನ ಮೇಲೆ ಕೆರಗಳ ಒಂದು ಹಾರ. ಉತ್ಸವದ ಕೂಟ ರಾಮ ಮೂರ್ತಿಯ ತೇರನ್ನು ಪಟ್ಟಣದ ಹತ್ತು ಬೀದಿಯಲ್ಲಿ ಮೆರೆಯಿಸಿತು ಇದು ಕೂಡದು ಎಂದು ನಗರದ ಕೆಲವು ಜನ ಅಡ್ಡಿ ಮಾಡಿದಂತೆ ಕಾಣುತ್ತದೆ. ಆದರೆ ಯಾರೂ ಒಂದು ಗುಂಪಾಗಿ ಉತ್ಸವವನ್ನು ನಡೆಸುವವರ ಎದುರು

ನಿಲ್ಲಲಿಲ್ಲ, ಉತ್ಸವವನ್ನು ನಿಲ್ಲಿಸಲು ಯತ್ನ ಮಾಡಲಿಲ್ಲ. ಇಂಥ ಉತ್ಸವವನ್ನು ನಡೆಸುವ ಜನಕ್ಕೆ ಹಿಂದೂ ಧರ್ಮ ಒಂದು ಧರ್ಮ ಅಲ್ಲ ಆದರೂ ಇವರು ಹಿಂದೂ ಸಮಾಜದಲ್ಲಿ ಸೇರಿದ್ದಾರೆ ಇವರ ನಡತೆ ಆತ್ಮಹನನ ಇದನ್ನು ಒಪ್ಪದ ಹಿಂದೂ ಜನರು ಇಂಥ ಉತ್ಸವವನ್ನು ಹೇಗೆ ಸಹಿಸಿಕೊಂಡರೋ ಹೊರಗಿರುವ ನಮಗೆ ತಿಳಿಯುವುದಿಲ್ಲ. ಹಿಂದೂ ಸಮುದಾಯದ ಸಮಾಜದ ನರ ಸತ್ತಿದೆ. ಆದ್ದರಿಂದಲೇ ಅದರಲ್ಲಿ ಕೆಲವರು ಇಂಥ ಉತ್ಸವವನ್ನು ನಡೆಸಿದಾಗ ಉಳಿದವರು ಅಡ್ಡಿಮಾಡದೆ ಸುಮ್ಮನಿರುತ್ತಾರೆ.

ಈಚೆಗೆ ಜಾತಿ ವೈಷಮ್ಯದ ಈ ಬುದ್ಧಿ ಮತ್ತಷ್ಟು ಕ್ರೂರವಾದ ರೂಪ ತಳೆದಂತೆ ಪತ್ರಿಕೆಗಳಲ್ಲಿ ವರದಿ ಆಯಿತು. ದ್ರಾವಿಡ ಕಳಗದ ಅನುಯಾಯಿಗಳು ಕುಂಭಕೋಣದಲ್ಲಿ ತಿರುಚಿರಪಳ್ಳಿಯ ಬಳಿ ಇತರ ಕೆಲವು ಪಟ್ಟಣಗಳಲ್ಲಿ ಬ್ರಾಹ್ಮಣರ ಕೇರಿಗಳಿಗೆ ಹೋಗಿ ಮನೆಗಳಿಗೆ ನುಗ್ಗಿ ಅಸಹಾಯರಾದ ಬ್ರಾಹ್ಮಣರನ್ನು ಹೊಡೆದು ಬಡಿದು ಬ್ರಾಹ್ಮಣ ಹೆಂಗಸರನ್ನು ಕೆಣಕಿ ಬೈದು, ತಮ್ಮ ಹಗೆಯನ್ನು ತೀರಿಸಿಕೊಂಡರಂತೆ ಪತ್ರಿಕೆಗಳಲ್ಲಿ ಇದು ವರದಿಯಾದಾಗ ಕಳಗದ ನಾಯಕರು "ಇದು ನಮ್ಮ ಜನ ಮಾಡಿದ್ದಲ್ಲ ಎಂದರು," ಎಂದು ವರದಿ ಆಯಿತು. ಯಾರೇ ಆಗಲಿ ಹತ್ತು ಜನ ಬೇರೆ ಮೂರು ಜನದ ಮೇಲೆ ಹೀಗೆ ಕ್ರೂರವಾಗಿ ನಡೆದುಕೊಂಡಾಗ ಸರಕಾರ ಇವರನ್ನು ತಡೆಯಲು ಅಥವಾ ಇವರನ್ನು ದಂಡಿಸಲು ಏನಾದರೂ ಕ್ರಮ ತೆಗೆದುಕೊಂಡಿತೇ ಇದು ವರದಿಗಳಲ್ಲಿ ಕಾಣಲಿಲ್ಲ. ಮದರಾಸ್ ಸರ್ಕಾರ ದ್ರಾವಿಡ ಕಳಗದ ಕ್ರೌರ್ಯವನ್ನು ಒಪ್ಪುವ ಸರಕಾರ ಎಂದು ಎಣಿಸಬೇಕಾಗಿಲ್ಲ ಆದರೆ ಇದು ಪ್ರಾಂತದ ಪ್ರಜೆಗಳ ಒಂದು ಸಮುದಾಯವನ್ನು ಒಲ್ಲದ ಜನ ಹಿಂಸಿಸಿದಾಗ ಹಿಂಸೆಗೆ ಒಳಗಾದವರನ್ನು ರಕ್ಷಿಸುವ ಕರ್ತವ್ಯವನ್ನು ನಡೆಸದ ಸರ್ಕಾರ ಎಂದು ಹೇಳಬೇಕಾಗುತ್ತದೆ ಜಾತಿ ದ್ವೇಷವನ್ನು ಈ ಮಟ್ಟಕ್ಕೆ ಬೆಳೆಸುವವರೂ, ಹೀಗೆ ಬೆಳೆಸುವುದನ್ನು ಇದು ಬೇಡಪ್ಪಾ ಎಂದು ಬೇಡಿಯೋ ಕಾಡಿಯೋ ತಡೆಯದ ಇತರ ಜನರೂ ಸರ್ಕಾರವೂ ಹಿಂದೂ ಸಮಾಜ ಉಳಿಯುವುದು ಹೇಗೆ ಎಂದು ಯೋಚಿಸಬೇಕಾಗಿದೆ.

೭

## ನಮ್ಮ ಹರಿಜನ ಸಮಸ್ಯೆ

ಈಗ ನಮ್ಮಲ್ಲಿ ಹರಿಜನರ ಸಮಸ್ಯೆ ಒಂದು ದೊಡ್ಡ ತೊಡಕಾಗಿ ನಿಂತಿದೆ. ಸಂಪ್ರದಾಯ ಯಾವುದೋ ಕಾಲದಲ್ಲಿ ಒಂದು ಸಮುದಾಯವನ್ನು ಅಸ್ಪೃಶ್ಯ ಎಂದು ಎಣಿಸಿತು ಹೀಗೆ ಎಣಿಸುವುದಕ್ಕೆ ಆಗ ಕಾರಣಗಳು ಇದ್ದಿರಬೇಕು ಲೋಕದ ವ್ಯವಹಾರದ ಪ್ರತಿಯೊಂದು ಸೂತ್ರಕ್ಕೂ ಇತಿಹಾಸದ ಹಿನ್ನೆಲೆ ಒಂದು ಇರುತ್ತದೆ. ಹಿನ್ನೆಲೆ ಮರೆಯಾಗಿ, ಅಂದು ಸರಿ ಎಂದು ಕಂಡ ವ್ಯವಹಾರ ಈಗ ತಪ್ಪು ಎಂದು ಕಾಣುತ್ತದೆ ಅವನ್ನು ಈಗ ಬಿಡುವುದು ಒಳ್ಳೆಯದು. ಆರೋಗ್ಯವಂತ ಸಮಾಜ ಒಳಿತಾದ ಒಂದು ಪದ್ಧತಿಯನ್ನು ಈ ರೀತಿಯಲ್ಲಿ ಸಹಜವಾಗಿ ಎತ್ತಿಕೊಳ್ಳುತ್ತದೆ ಹರಿಜನರನ್ನು ಕುರಿತ ಸಮಸ್ಯೆ ನಮ್ಮಲ್ಲಿ ಹಿಂದೆ ಒಂದುರೀತಿಯಲ್ಲಿ ಪರಿಹಾರಕ್ಕೆ ಬಂದಿತು ಶಂಕರಾಚಾರ್ಯರು 'ಆತ್ಮಜ್ಞಾನ ಉಳ್ಳವನು ಚಂಡಾಲನೇ ಆದರೂ ನನಗೆ ಗುರು' ಎಂದರು ರಾಮಾನುಜಾ ಚಾರ್ಯರು ಮೇಲುಕೋಟೆ ದೇವಾಲಯದಲ್ಲಿ ಹರಿಜನರು ಒಂದು ನೆಲೆಯವರೆಗೆ ಒಳಕ್ಕೆ ಬರಬಹುದು ಎಂದು ಒಂದು ಏರ್ಪಾಟನ್ನು ಮಾಡಿದರು ಬಸವಣ್ಣ ನವರು ಹರಿಜನರು ವೀರಶೈವರಾದರೆ ಬೇರೆ ಜಾತಿಯ ಜನರಂತೆ ಒಂದು ಕುಟುಂಬದ ಪರಸ್ಪರ ಸಮಾನವ್ಯಕ್ತಿಗಳಾಗುತ್ತಾರೆ ಎಂದರು ಇದೆಲ್ಲ ಬಲ್ಲ ಜನರ ಮಾತು ಈ ಹಿರಿಯರ ಈ ಘೋಷಣೆ ಈ ಸುಧಾರಣೆ ಅವರ ದಿನದ ಈಚೆಗೆ ವಿಸ್ತಾರ ಆಗಿಲ್ಲ. ಅಸ್ಪೃಶ್ಯ ಆ ವಿಷಯವನ್ನು ಯೋಚಿಸದೆ ಹೀನಾಯ ದಲ್ಲಿ ಬೆಳೆಯುತ್ತ ಬಂದಿರಲು ಮಹಾತ್ಮಾ ಗಾಂಧಿಯವರು ಅಸ್ಪೃಶ್ಯತೆ ಸನಾತನ ಧರ್ಮಕ್ಕೆ ವಿರುದ್ಧವಾದ ಒಂದು ಆಚಾರ ಎಂದು ಅದನ್ನು ವಿರೋಧಿಸಿದರು, ಆ ಸಮುದಾಯಕ್ಕೆ ಆ ಮುನ್ನ ಇದ್ದ ಕೀಳುತನವನ್ನು ಸೂಚಿಸುವ ಹೆಸರುಗಳನ್ನು ಅಳಿಸಿ ಅವರನ್ನೆಲ್ಲ 'ಹರಿಜನ' ಎಂದು ಕರೆದರು. ಈ ಜನರನ್ನು ನಮ್ಮ ಸಮಾಜದ ಮೇಲಿನವೆಂಬ ಜಾತಿಯ ಜನರು ಇಷ್ಟರಾಗಿ ಕಾಣಬೇಕು ಎಂದರು. ಗಾಂಧಿಯುಗದ ಈ ವಿಷಯದ ಚಳವಳಿಯ ಇತಿಹಾಸ ವನ್ನು ಇಲ್ಲಿ ಬರೆಯಬೇಕಾಗಿಲ್ಲ. ಹರಿಜನರಲ್ಲಿ ಹುಟ್ಟಿ ಬೆಳೆದ ಅಂಬೇಡ್ಕರ್ ಎಂಬ ನಾಯಕರು ತನ್ನ ಜನ ಹಿಂದೂ ಸಮಾಜದಲ್ಲಿ ಸೇರಿಲ್ಲ ಎಂಬ ರೀತಿಯಲ್ಲಿ

ನಡೆಯಲು ಬಯಸಿದಾಗ ಗಾಂಧೀಜಿ ಈ ಭಾವವನ್ನು ಒಪ್ಪದೆ ಸತ್ಯಾಗ್ರಹಮಾಡಿ ಈ ನಾಯಕರನ್ನು ತಮ್ಮ ಜೊತೆಗೆ ಸೇರಿಸಿಕೊಂಡರು ರಾಜಕೀಯವಾಗಿ ಆ ಸಂದರ್ಭದಲ್ಲಿ ಒದಗಿದ ತೊಂದರೆ ಹರಿದರೂ ಸಮಾಜದಲ್ಲಿ ಹಳೆಯ ಆಚಾರವೇ ನಡೆಯುತ್ತಾ ಬಂದದ್ದರಿಂದ ಆ ನಾಯಕರು ತಮ್ಮ ಕಡೆಯ ದಿನಗಳಲ್ಲಿ, ಹರಿಜನರು ಹಿಂದೂ ಧರ್ಮವನ್ನು ತೊರೆದು ಬೌದ್ಧರಾಗಲಿ, ಎಂದರು ಈ ನಿಶ್ಚಯವನ್ನು ಒಪ್ಪಿ ಅಂಬೇಡ್ಕರ್‌ರವರ ಅನುಯಾಯಿಗಳನೇಕರು ಅವರ ದಿನದಲ್ಲಿ ಬೌದ್ಧಮತವನ್ನು ಸೇರಿದರು ಈಚೆಗೆ ಅಲ್ಲಲ್ಲಿ ಕೆಲವು ಕಡೆ ಹರಿಜನರ ಗುಂಪುಗಳು ಹಿಂದೂ ಧರ್ಮದಲ್ಲಿ ತಮಗೆ ಸರಿಯಾದ ಸ್ಥಾನವಿಲ್ಲ ಎಂದು ಕ್ರೈಸ್ತ ಮಹಮದೀಯ ಆಗಿ ಮಾರ್ಪುಗೊಂಡದ್ದು ವರದಿ ಆಗಿದೆ ಯಾವನೇ ಒಬ್ಬನು ತನಗೆ ಇಷ್ಟವಾದ ಧರ್ಮವನ್ನು ಸೇರುವುದಕ್ಕೆ ಅಡ್ಡಿ ಇರಬಾರದು. ಆದರೆ ಈ ಸೇರುವುದು ಎನ್ನುವುದರ ಅರ್ಥ ಅವನಿಗೆ ಸ್ಪಷ್ಟವಾಗಿರಬೇಕು. ಹಿಂದೂ ಧರ್ಮ ಬೇಡ, ಬೌದ್ಧ ಧರ್ಮ ಇರಲಿ, ಎನ್ನುವವನು ಈ ಧರ್ಮಗಳು ಬೇರೆ ಎನ್ನುವುದನ್ನು ಕಂಡವನಾಗಿರಬೇಕು. ಹಿಂದೂ ಧರ್ಮ ಏನು ಹೇಳುತ್ತದೆ, ಬೌದ್ಧ ಧರ್ಮ ಏನು ಹೇಳುತ್ತದೆ ಎನ್ನುವುದನ್ನು ತಿಳಿದಿರಬೇಕು. ಈ ತಿಳಿವಿನಿಂದ ಅವನು ತನ್ನ ಬುದ್ಧಿಯನ್ನು ಬಳಸಿ ಹಿಂದೂ ಧರ್ಮ ಹೇಳುವ ಮಾತು ಸರಿಯಲ್ಲ, ಬೌದ್ಧ ಧರ್ಮ ಹೇಳುವುದು ಸರಿ ಎನ್ನುವ ನಿರ್ಣಯಕ್ಕೆ ಬರಬೇಕು ಆಮೇಲೆ ಈ ಅನ್ಯಮತ ಸ್ವೀಕರಣ ನಡೆಯಬೇಕು ಇದು ಒಬ್ಬೊಬ್ಬನೂ ವ್ಯಕ್ತಿಯಾಗಿ ಹಿಡಿಯಬೇಕಾದ ಮಾರ್ಗ. ಸಮುದಾಯ ಸಮುದಾಯವಾಗಿ ಅನ್ಯಮತವನ್ನು ಸ್ವೀಕರಿಸುವುದು ದಿಟದಲ್ಲಿ ಮತದ ಸ್ವೀಕರಣ ಅಲ್ಲ ಇಂಥ ಸ್ವೀಕರಣದಲ್ಲಿ ಮತ ಪ್ರಸಕ್ತ ಆಗಿಯೇ ಇಲ್ಲ ಹಿಂದೂ ಜನರು ನಮ್ಮನ್ನು ಸರಿಯಾಗಿ ಕಾಣುತ್ತಿಲ್ಲ, ಆದ್ದರಿಂದ ನಾವು ಬೌದ್ಧರಾಗುತ್ತೇವೆ, ಎನ್ನುವುದು ಮತವನ್ನು ಕುರಿತ ವ್ಯವಹಾರ ಅಲ್ಲವೇ ಅಲ್ಲ. ಬರಿಯ ಒಂದು ಸಾಮಾಜಿಕ ವ್ಯವಹಾರ ಇದೇ ಮಾತು ಕ್ರೈಸ್ತರಾಗುವವೆನ್ನುವ, ಮುಸ್ಲಿಮರಾಗುವ ವೆನ್ನುವ ಹರಿಜನರಿಗೂ ಅನ್ವಯಿಸುತ್ತದೆ. ಧರ್ಮದ ದೃಷ್ಟಿಯಿಂದಲ್ಲ, ಬರಿಯ ಸಾಮಾಜಿಕ ನಡತೆಯ ದೃಷ್ಟಿಯಿಂದ, ಅನ್ಯಮತ ಸ್ವೀಕಾರಮಾಡುವುದು ವ್ಯರ್ಥ ವ್ಯಾಪಾರ. ನಮ್ಮ ಸಮಾಜದಲ್ಲಿ ಇರುವ ಹರಿಜನರು ಇಂಥ ವ್ಯರ್ಥ ವ್ಯಾಪಾರ ದಲ್ಲಿ ತೊಡಗದಂತೆ ನೋಡಿಕೊಳ್ಳುವುದು ಉಳಿದ ಹಿಂದೂ ಜನರ ಹೊಣೆ.

೮

# ಗುರುಗಳು, ಗುರುಪೀಠಗಳು

## ಗುರುಗಳ ಆಯ್ಕೆಯ ಸಂಪ್ರದಾಯ

ನಮ್ಮ ಸಮಾಜಗಳ ಜೀವನದ ಎಲ್ಲ ವಿವರದಲ್ಲಿಯೂ ಧರ್ಮದ ಪ್ರಭಾವಕ್ಕೆ ಎಡೆ ಇರುವುದರಿಂದ ಧರ್ಮದ ರಕ್ಷಕರಾಗಿ ಗುರುಪೀಠಗಳನ್ನು ಅಲಂಕರಿಸುವ ಗುರುಗಳು ಜನತೆಯ ಜೀವನದಲ್ಲಿ ತುಂಬ ಪ್ರಭಾವ ಬೀರಿದ್ದು ತೀರ ಸಹಜ. ವಂಶದ ಗುರುಗಳು ಎಂಬ ಭಾವದಿಂದ ಮನೆತನದ ಗುರುಪೀಠಗಳ ಹಿರಿಯರನ್ನು ನಮ್ಮ ಜನ ಅತ್ಯಂತ ಗೌರವದಿಂದ ಪೂಜಿಸುತ್ತಿದ್ದರು. ಇತ್ತೀಚೆಗೆ ಇಂಥ ಭಾವ ಕಡಿಮೆ ಆಗಿ, ಈಗಿನ ನಮಗೆ ಒಂದು ಕಾಲದಲ್ಲಿ ಅದು ಎಷ್ಟು ಬಲವಾಗಿತ್ತು ಎಂಬುದರ ಕಲ್ಪನೆಯೇ ಇಲ್ಲವಾಗಿದೆ.

ನಮ್ಮ ಇಂದಿನ ಗುರುಪೀಠಗಳಲ್ಲಿ ಅತ್ಯಂತ ಪ್ರಾಚೀನ ಆದದ್ದು ಶೃಂಗೇರಿಯ ಮಠ ಎಂದು ಕಾಣುತ್ತದೆ. ಇದರ ಆದಿಗುರು ಶಂಕರಾಚಾರ್ಯ ರಿಂದ ಸಂನ್ಯಾಸ ಪಡೆದು ಶೃಂಗೇರಿ ಪೀಠವನ್ನು ಮೊದಲು ಅಲಂಕರಿಸಿದ ಸುರೇಶ್ವರಾಚಾರ್ಯ ಎನ್ನುವುದು ಪ್ರತೀತಿ. ಆದರ ಈಚಿನ ಗುರುಗಳ ಹೆಸರಲ್ಲಿ ಬಹು ದೊಡ್ಡದು ವಿದ್ಯಾರಣ್ಯರದು. ವಿದ್ಯಾರಣ್ಯರ ಬಳಿಕ ಪೀಠಕ್ಕೆ ಬಂದ ಗುರುಗಳ ಹೆಸರುಗಳು ಲೋಕಕ್ಕೆ ಅಷ್ಟಾಗಿ ತಿಳಿದವಲ್ಲ. ಈಚಿನ ಗುರು ಗಳಲ್ಲಿ ತುಂಬ ಕೀರ್ತಿವಂತರಾದವರು ಈ ಶತಮಾನದ ಆರಂಭದಲ್ಲಿ ಪೀಠ ವನ್ನಲಂಕರಿಸಿದ್ದ ಶ್ರೀ ಅಭಿನವ ನರಸಿಂಹ ಭಾರತಿ ಸ್ವಾಮಿಗಳು.

ಈ ಪೀಠದ ಗುರುಗಳು ಬಾಲಸಂನ್ಯಾಸಿಗಳು. ಆದಿಗುರು ಶಂಕರಾ ಚಾರ್ಯರು ತಮ್ಮದೇ ಪ್ರೇರಣೆಯಿಂದ ಬಾಲ್ಯದಲ್ಲಿ ಸಂನ್ಯಾಸ ಸ್ವೀಕರಿಸಿದರು. ಈ ಕಾರಣದಿಂದ ಇರಬೇಕು ಈ ಮಠ ಪೀಠಕ್ಕೆ ಬರುವ ಅಧಿಕಾರ ಬಾಲ ಸಂನ್ಯಾಸಿಗಳಿಗೆ ಮೀಸಲು ಎಂಬ ಸಂಪ್ರದಾಯವನ್ನು ಬೆಳೆಸಿದೆ.

ತಾವಾಗಿ ಸಂನ್ಯಾಸವನ್ನು ಬಯಸಿದ ಮಾನ್ಯರು ಸಂನ್ಯಾಸದ ನೇಮ ಗಳನ್ನು ಪಾಲಿಸಿಯಾರು ಎಂದು ನಿರೀಕ್ಷಿಸಬಹುದು. ಒಬ್ಬೊಬ್ಬ ಗುರುವೂ ತಾನೇ ಬಾಲ್ಯದಲ್ಲಿ ಬಯಸಿ ಸಂನ್ಯಾಸಿ ಆದರು ಎಂದು ಹೇಳಲಾಗುವುದಿಲ್ಲ.

ಎಂದು ಕಾಣುತ್ತದೆ ನಮ್ಮ ದಿನಗಳಲ್ಲಿ ನಾವು ಕಂಡಂತೆ ಗುರುಗಳಾದವರು ಹಿಂದಿನ ಗುರುಗಳ, ಮಠದ ಪ್ರಮುಖ ಶಿಷ್ಯರ, ಅಪೇಕ್ಷೆಯ ಕಾರಣ ಸಂನ್ಯಾಸ ಸ್ವೀಕಾರ ಮಾಡಿದರು.

ಇಂಥ ಸಂದರ್ಭದಲ್ಲಿ ಸಂನ್ಯಾಸಧರ್ಮದ ನಿಷ್ಠುರವಾದ ಪಾಲನ ಎಷ್ಟು ಕಷ್ಟ ಆಗಬಹುದು, ಇದನ್ನು ಹೇಳುವಂತಿಲ್ಲ ಇದ್ದೂ ಶೃಂಗೇರಿ ಗುರುಪೀಠದ ಪರಂಪರೆಯಲ್ಲಿ ಯಾವ ಗುರುವಾದರೂ ತಪ್ಪಿ ನಡೆದು ಹೆಸರು ಕೆಡಿಸಿಕೊಂಡ ಮಾತು ಕೇಳಿಬರಲಿಲ್ಲ ಇದು ಆ ಗುರುಪೀಠದ ಅಸಾಧಾರಣ ಭಾಗ್ಯ.

ಆದಿಗುರು ಶಂಕರರು ನಂಬೂದಿರಿ ಬ್ರಾಹ್ಮಣ ಪಂಗಡದವರು. ಪೀಠದ ಮೊದಲ ಗುರು ಯಾವ ಪಂಗಡದ ಬ್ರಾಹ್ಮಣರೋ. ವಿದ್ಯಾರಣ್ಯ ಗುರು ಈಗ ನಾವು ಹೊಯ್ಸಳ ಕರ್ನಾಟಕ ಎಂದು ಹೆಸರಿಸುವ ಸ್ಮಾರ್ತ ಬ್ರಾಹ್ಮಣ ಸಮುದಾಯದವರೆಂದು ಇವರಲ್ಲಿ ಬಲ್ಲವರು ಹೇಳಿದ್ದನ್ನು ನಾನು ಕೇಳಿದ್ದೇನೆ. ಇರುತ್ತ ಇತ್ತೀಚೆಗೆ ಎಷ್ಟೋ ತಲೆಮಾರಿನ ಗುರುಗಳು ಮುಲುಕುನಾಡು ಸ್ಮಾರ್ತರು ಎನ್ನುವ ಸಮುದಾಯದವರಾಗಿ ಇದ್ದಿದ್ದಾರೆ ಯಾರೋ ಒಬ್ಬರು ಈ ಪಂಗಡದ ಹಿರಿಯರು ಎಂದೋ ಸ್ವಾಮಿಯಾಗಿ ತಮ್ಮ ಒಳಿಕ ತಮ್ಮ ಪೂರ್ವಾಶ್ರಮದ ಪಂಗಡದ ಒಬ್ಬರನ್ನು ಉತ್ತರಾಧಿಕಾರಿಯಾಗಿ ನೇಮಿಸಿ ಆ ಬಳಿಕ ಬಂದ ಸ್ವಾಮಿಗಳು ಈ ಕ್ರಮವನ್ನು ಅನುಸರಿಸುತ್ತ ಬಂದದ್ದರಿಂದ ಹೀಗಾಯಿತು ಎಂದು ಕಾಣುತ್ತದೆ ಇತರ ವಿಷಯಗಳಲ್ಲಿ ಪೂರ್ಣ ಸಂನ್ಯಾಸ ಸಿದ್ಧಿಸಿದರೂ ಈ ವಿವರದಲ್ಲಿ ಗುರುಗಳು ಸ್ವಜನ ಪಕ್ಷಪಾತದಿಂದ ಬಿಡಿಸಿಕೊಳ್ಳಲು ಆಗದ್ದು ಇದರ ಕಾರಣ ಇರಬಹುದು ಇದ್ದೂ ಈ ಬಾರಿ ಈಗ ಇರುವ ಹಿರಿಯ ಗುರುಗಳು ಉತ್ತರಾಧಿಕಾರಿಯಾಗಿ ಒಬ್ಬರನ್ನು ನೇಮಿಸುವಲ್ಲಿ ಈ ತೊಡಕಿನಿಂದ ಬಿಡಿಸಿಕೊಂಡಂತೆ ತೋರುತ್ತದೆ ಇದು ಸಂತೋಷದ ಸಂಗತಿ.

ಸ್ಮಾರ್ತ ಮಠಗಳಲ್ಲಿ ಶಂಕರಾಚಾರ್ಯರು ನಾಲ್ಕು ಮಠಗಳನ್ನು ಸ್ಥಾಪಿಸಿದರು ಎಂಬ ಗ್ರಹಿಕೆ ಇದೆ. ದ್ವಾರಕಾ, ವಾರಣಾಸಿ, ಜಗನ್ನಾಥಪುರಿ, ಇವು ಶೃಂಗೇರಿ ಮಠದ ಜೊತೆಯ ಮಠಗಳು. ಕಾಂಚೀಪುರದ ಕಾಮಕೋಟಿ ಪೀಠವೂ ಆದಿಶಂಕರರು ಸ್ಥಾಪಿಸಿದ ಮಠ ಎಂದು ಆ ಪೀಠದ ಗುರುಗಳು ನಂಬಿದ್ದಾರೆ. ಶೃಂಗೇರಿ ಮಠ ಇದನ್ನು ಒಪ್ಪುವುದಿಲ್ಲವಂತೆ ಇರುತ್ತ ಕಾಂಚೀಪುರದ ಮಠದ ಈಗಿನ ಹಿರಿಯ ಗುರುಗಳು ತಮ್ಮ ಚರಿತದಿಂದ ಪೀಠಕ್ಕೆ ತುಂಬ

ಗೌರವವನ್ನು ಸಂಪಾದಿಸಿದ್ದಾರೆ. ಈ ಪೀಠದ ಸಂಪ್ರದಾಯದಲ್ಲಿ ಈಚಿನ ಹಲವು ಗುರುಗಳು ಹೊಯ್ಸಳ ಕರ್ಣಾಟಕ ಎಂಬ ಹೆಸರಿನ ಕನ್ನಡನಾಡ ಸ್ಮಾರ್ತ ಬ್ರಾಹ್ಮಣರ ಸಮುದಾಯದವರಾಗಿದ್ದಿದ್ದಾರೆ ಇರುತ್ತ ಹಿರಿಯ ಸ್ವಾಮಿಗಳು ಈ ಬಾರಿ ಸ್ವಜನ ಪ್ರೇಮದ ತೊಡಕಿಗೆ ನೋಲದೆ ಬೇರೆ ಪಂಗಡದ ಶಿಷ್ಯವರ್ಗ ದಿಂದ ಉತ್ತರಾಧಿಕಾರಿಯನ್ನು ಆರಿಸಿಕೊಂಡಿದ್ದಾರೆ

## ಶ್ರೀವೈಷ್ಣವ ಗುರುಪೀಠಗಳು

ಶ್ರೀವೈಷ್ಣವ ಗುರುಪೀಠಗಳು ಹಲವಾರು ಇವೆ ಶ್ರೀವೈಷ್ಣವರಲ್ಲಿ ಎರಡು ಶಾಖೆ ಇರುವುದು ಎಲ್ಲರಿಗೂ ತಿಳಿದ ವಿಷಯ ಇವುಗಳ ಹೆಸರು ತೆಂಗಲೆ, ವಡಗಲೆ, ಎಂದರೆ ದಕ್ಷಿಣದ, ಉತ್ತರದ ಕಲೆಗಳು. ಇವುಗಳ ಮಧ್ಯೆ ಹದಿನೆಂಟು ವಿವರಗಳಲ್ಲಿ ಅಭಿಪ್ರಾಯಭೇದ ಇರುವುದರಿಂದ ಪಂಗಡಗಳಾಗ ಬೇಕಾಯಿತು ಊಟ ಉಪಚಾರ, ಕೊಡುವುದು ತೆಗೆಯುವುದರಲ್ಲಿ ಪರಸ್ಪರ ವೈಷಮ್ಯ ಕಾಣದಿದ್ದರೂ ತಾತ್ವಿಕವಾಗಿ ಈ ಪಂಗಡಗಳು ಎರಡು ವಿರೋಧಿ ಪಕ್ಷಗಳಾಗಿ ಕಾದುತ್ತ ಬಂದಿವೆ, ಈಗಲೂ ಕಾದುತ್ತಿವೆ

ಅಭಿಪ್ರಾಯಭೇದದ ಒಂದು ವಿವರ ಶ್ರೀವೈಷ್ಣವರು ಮುಖದ ಮೇಲೆ, ಮೈಯಮೇಲೆ, ಹಾಕಿಕೊಳ್ಳುವ ಲಾಂಛನ ಆದ ನಾಮಕ್ಕೆ ಸಂಬಂಧಿಸಿದ್ದು. ಮುಖದ ಮೇಲೆ ಧರಿಸುವ ನಾಮಕ್ಕೆ ಪೀಠವಾಗಿ ಮೂಗಿನ ದಿಂಡಿನ ಮೇಲೆ ಒಂದು ಗೆರೆ ಇರಬೇಕು ಎಂದು ತೆಂಗಲೆ ಸಂಪ್ರದಾಯ ಹೇಳುತ್ತದೆ ಈ ಪೀಠ ಅವಶ್ಯಕ ಇಲ್ಲ ಎನ್ನುವುದು ವಡಗಲೆ ಅಭಿಪ್ರಾಯ ಪುಂಡ್ರ, "ನಾಸಾಗ್ರಾತ್ ಕೇಶಪರ್ಯಂತಂ" ಇರಬೇಕು ಎಂದು ಶಾಸ್ತ್ರ. "ಮೂಗಿನ ತುದಿಯಿಂದ ಹಣೆಯ ಮೇಲಿನ ಕೂದಲ ಗೆರೆಯವರೆಗೆ" ಮೂಗಿನ ತುದಿ ಎಂದರೆ ಮೇಲಿನ ತುದಿಯೋ, ಕೆಳಗಿನ ತುದಿಯೋ? ಮೇಲಿನದು ಎನ್ನುವುದು ವಡಗಲೆ, ಕೆಳಗಿನದು ಎನ್ನುವುದು ತೆಂಗಲೆ. ಈ ನಾಮದ ಜಗಳ ಎಷ್ಟು ದೂರ ಹೋಗಿದೆ, ನೆನೆದರೆ ಆಶ್ಚರ್ಯ ಆಗುತ್ತದೆ. ಒಂದು ದೇವಸ್ಥಾನದ ಆನೆಯ ಮುಖದ ಮೇಲೆ ಬರೆಯುವ ನಾಮಕ್ಕೆ ಪೀಠ ಇರಬೇಕೆ ಬೇಡವೆ ಎನ್ನುವ ಪ್ರಶ್ನೆಯಲ್ಲಿ ತೀರ್ಮಾನ ಪಡೆಯಲು ತಮಿಳು ಶ್ರೀವೈಷ್ಣವ ಜನ ರಾಷ್ಟ್ರದ ಶ್ರೇಷ್ಠ ನ್ಯಾಯಾಲಯಗಳಲ್ಲಿಯೂ, ಆಂಗ್ಲರು ನಮ್ಮನ್ನು ಆಳಿದ ದಿನಗಳಲ್ಲಿ ಈ

ನ್ಯಾಯಾಲಯಕ್ಕೆ ಮೇಲ್ಪಟ್ಟ ಲಂಡನ್ನಿನ ನ್ಯಾಯಪೀಠದಲ್ಲಿಯೂ, ಕಟ್ಟಳೆಗಳನ್ನು ನಡೆಸಿದ್ದುಂಟು.

ನಮ್ಮ ದೇಶದ ಬ್ರಾಹ್ಮಣ ಸಮುದಾಯದಲ್ಲಿ ವಿಧವೆ ಆದ ಹೆಂಗಸು ಹೆರಳನ್ನು ಇಳಿಸಬೇಕು ಎಂಬ ಒಂದು ಕ್ರಮ ಉಂಟಷ್ಟೆ. ಶ್ರೀವೈಷ್ಣವರ ಜಾತಿಗಳಲ್ಲಿ ವಡಗಲೆ ಜನ ಈ ಕ್ರಮುವನ್ನು ನಡೆಸುತ್ತಾರೆ ತೆಂಗಲೆ ಜನ ಇದು ಆವಶ್ಯಕ ಅಲ್ಲ ಎಂದು ಎಂದೋ ತೀರ್ಮಾನಿಸಿಕೊಂಡರು. ಈ ಭೇದ ಈಗ ನಡವಳಿಕೆಯಲ್ಲಿದೆ. ಶಾಸ್ತ್ರವನ್ನು ಉಲ್ಲಂಘಿಸಿ ತೆಂಗಲೆ ಜನ ದೊಡ್ಡ ತಪ್ಪನ್ನು ಮಾಡಿದ್ದಾರೆ ಎನ್ನುವುದು ವಡಗಲೆ ವಾದ. ಆ ಪಂಗಡದ ಇಷ್ಟ ಹೇಗೆ ಅದು ಹಾಗೆ ನಡೆದುಕೊಳ್ಳಲಿ ಎಂದು ವಡಗಲೆ ಜನ ಹೇಳಿದರೆ, ವಿವಾದವೇ ಇಲ್ಲ. ಅವರು ಎಲ್ಲರೂ ಹಾಗೆ ಎನ್ನುವುದಿಲ್ಲ ಕೆಲವು ವರ್ಷದ ಹಿಂದೆ ಇವರಲ್ಲಿ ಯಾರೋ ಕೆಲವರು, "ನಾವು ಕ್ಷೌರಿಕನನ್ನು ಜೊತೆಗೆ ಕರೆದುಕೊಂಡು ಈ ಜನರ ಒಂದೊಂದು ಮನೆಗೂ ಹೋಗಿ ಅಲ್ಲಿರಬಹುದಾದ ವಿಧವೆ ಹೆಣ್ಣುಮಕ್ಕಳ ತಲೆಗಳನ್ನು ಹೆರೆಸುತ್ತೇವೆ," ಎಂದು ಒಂದು ಪತ್ರಿಕೆಯನ್ನು ಅಚ್ಚುಮಾಡಿಸಿ ಹಂಚಿದರು. ಸದ್ಯ ಈ ಯೋಚನೆ ಅಷ್ಟರಲ್ಲೇ ನಿಂತಿತು ಯಾರೂ ನಾಯಿಂದರೊಡನೆ ಯಾರ ಮನೆಗೂ ಹೋಗಲಿಲ್ಲ ಪತ್ರಿಕೆಯಲ್ಲಿ ಪ್ರಕಟಿಸಿದ ಅನರ್ಥ ಹೊರತು ಬೇರೆ ಯಾವ ಅನರ್ಥವೂ ಸಂಭವಿಸಲಿಲ್ಲ.

ಇಂಥ ಮಾತುಗಳು ಬಂದಾಗ ಗುರುಪೀಠಗಳ ಹಿರಿಯರ "ಈ ವಿವಾದಗಳು ಬೇಡ" ಎಂದು ತಮ್ಮ ಅನುಯಾಯಿಗಳಿಗೆ ಹೇಳಿ, ಸಮಾಜದಲ್ಲಿ ಬೆಳೆಯುತ್ತಿರುವ ವೈಷಮ್ಯಗಳನ್ನು ತಪ್ಪಿಸಬಹುದು. ಆದರೆ ಇವರು ಯಾರೂ ಈ ವಿಷಯಕ್ಕೆ ಮನಸ್ಸು ಕೊಡುತ್ತಿಲ್ಲ. ಹಳೆಯ ಗೋಪುರ ಬಿದ್ದು ಹೊಸ ಗೋಪುರ ಕಟ್ಟಿಸುವಾಗ ಹಿಂದೆ ಇದ್ದ ನಾಮವನ್ನು ತಪ್ಪಿಸಿ ಬೇರೆ ನಾಮ ಹಾಕಿಸಿದ್ದಾರೆ ಎಂದು, ದೇವರಿಗೆ ಆಭರಣಗಳನ್ನು ಮಾಡಿ ಒಪ್ಪಿಸುವಾಗ ಆಲಯದಲ್ಲಿ ವಾಡಿಕೆ ಆಗಿರುವ ನಾಮವನ್ನು ಬಿಟ್ಟು ಬೇರೆ ನಾಮ ಹಾಕಿದ್ದಾರೆ ಎಂದು, ಯಾವುದೇ ಮಾತನ್ನು ನೆಪಮಾಡಿಕೊಂಡು ಈ ಎರಡು ಬಣಗಳು ಕದನ ನಡೆಸುತ್ತಲೇ ಇವೆ. ಸ್ವಾಮಿಗಳಾದವರು ಇವನ್ನೆಲ್ಲ ನೋಡಿಕೊಂಡು ಸುಮ್ಮನೆ ಇದ್ದುಬಿಟ್ಟಿದ್ದಾರೆ

ಆಚಾರ್ಯ ರಾಮಾನುಜರು ಸ್ನಾನಕ್ಕೆ ಹೋಗುತ್ತಾ ಶಿಷ್ಯ ದಾಶರಥಿಯ

ಹೆಗಲಮೇಲೆ ಕೈ ಇಟ್ಟುಕೊಂಡು ಹೋಗಿ, ಸ್ನಾನ ಮುಗಿದ ಮೇಲೆ ತಾನೂ ಸ್ನಾನ ಮುಗಿಸಿ ದ್ವಾದಶ ಊರ್ಧ್ವ ಪುಂಡ್ರವನ್ನು ಧರಿಸಿ ಬಂದು ಪಕ್ಕದಲ್ಲಿ ನಿಂತ ಶೂದ್ರ ಧನುರ್ದಾಸನ ಭುಜದ ಮೇಲೆ ಕೈಹಾಕಿ, ದೇವಾಲಯಕ್ಕೆ ಬಂದು ಗೋಷ್ಠಿಯ ಹತ್ತಿರ ನಿಲ್ಲುತ್ತಿದ್ದರಂತೆ ಇದು ಸಂಪ್ರದಾಯದ ಕಥೆ ಇದೇನು ಹೀಗೆ ಎಂದು ಯಾರೋ ಕೇಳಿದ್ದಕ್ಕೆ, ಆಚಾರ್ಯರು, "ಧನುರ್ದಾಸ ತುಂಬ ಶ್ರೇಷ್ಠ ಜೀವ, ಅವನನ್ನು ಮುಟ್ಟಿದರೆ ಮಡಿ ಕೆಡುವುದಿಲ್ಲ," ಎಂದರಂತೆ. ಇಂಥ ಸಂಗತಿ ಸಂಪ್ರದಾಯದಲ್ಲಿ ಕಥೆಯಾಗಿ ಕೇಳಬರುತ್ತಿದೆ, ನಡತೆಯಾಗಿ ಕಾಣಬರುವುದಿಲ್ಲ

ಶ್ರೀವೈಷ್ಣವ ಸಂಪ್ರದಾಯದಲ್ಲಿ ಕಡಮೆ ಜಾತಿಯವನು ಎಂದು ಒಬ್ಬ ವೈಷ್ಣವನನ್ನು ದೂರ ನಿಲ್ಲಿಸುವುದು ಸಲ್ಲದು. ಹುಟ್ಟಿನಿಂದ ಶೂದ್ರನಾದ ಮಾರನೇರಿ ಎಂಬ ಒಬ್ಬ ಭಕ್ತಸಾಧು ತೀರಿಕೊಂಡಾಗ ಅವನ ದೇಹಕ್ಕೆ ಆಚಾರ್ಯರ ಹಿರಿಯರೇ ಅಂತಿಮಸಂಸ್ಕಾರಗಳನ್ನು ನಡೆಸಿದರೆಂದು ಸಂಪ್ರದಾಯ ಹೇಳುತ್ತದೆ ನಮ್ಮ ಗುರು ಒಬ್ಬರಿಗೆ ನಾನು ಈ ಔದಾರ್ಯದ ವಿಷಯವನ್ನು ಹೊಗಳಿ ಹೇಳಿ, ಗುರುಗಳು ಈಗಲೂ ಇಂಥ ವಿಷಯದಲ್ಲಿ ಜನಕ್ಕೆ ಒಳ್ಳೆಯದನ್ನು ಕಲಿಸಬೇಕು ಎಂದು ವಿಜ್ಞಾಪಿಸಿದೆನು. ಗುರು, "ಈಗ ಅಂಥ ಭಕ್ತಜನರೇ ಇಲ್ಲ" ಎಂದು ಅಪ್ಪಣೆ ಕೊಡಿಸಿದರು.

ಇನ್ನು ಸ್ವಾಮಿಗಳಲ್ಲಿ ಕೆಲವರು ಆಡುವ ಮಾತಿನ ರೀತಿ. ಬೆಂಗಳೂರು ನಗರದ ಒಂದು ವಿಸ್ತರಣದಲ್ಲಿ ಕೆಲವು ವರ್ಗಗಳಿಂದ ತುಂಬ ಹಿರಿಯರೆಂದು ಹೆಸರಾಗಿರುವ ಸ್ವಾಮಿಗಳು ಸಭೆಯಲ್ಲಿ ಹೇಳಿದ ಮಾತುಗಳನ್ನು ನನ್ನ ಬಂಧು ಶ್ರೀ ಡಿ ರಾಮಸ್ವಾಮಯ್ಯಂಗಾರರು ನನಗೆ ತಿಳಿಸಿದರು. ಸಭೆಯಲ್ಲಿ ತಕ್ಕಷ್ಟು ಜನ ನೇರಿದ್ದಾರೆ, ಅದರಲ್ಲಿ ಅರ್ಧ ಅಥವಾ ಇನ್ನೂ ಹೆಚ್ಚಾಗಿ ಸ್ತ್ರೀಯರು. ಪ್ರಸಂಗ ಯಾವುದೋ ಈಗ ನನಗೆ ಜ್ಞಾಪಕ ಇಲ್ಲ, ಅದರಲ್ಲಿ ಸ್ವಾಮಿ ಹೇಳಿದ ಒಂದು ಮಾತು ಇದು. "ಸಂನ್ಯಾಸಿಯಾದವನು ತನ್ನ ಶೀಲವನ್ನು ಬಹು ಕಷ್ಟದಿಂದ ಕಾಪಾಡಿಕೊಳ್ಳಬೇಕು. ಹತ್ತು ಜನರೊಂದಿಗೆ ಓಡಾಡುತ್ತ ಹತ್ತು ಸಭೆಗಳಲ್ಲಿ ಮಾತನಾಡುತ್ತ ರೂಪವಂತರಾದ ಸ್ತ್ರೀಯರು ಹಲವರನ್ನು ಅಲ್ಲಿ ನೋಡಬಹುದು ಬಾಲಸಂನ್ಯಾಸಿಯಾಗಿದ್ದರೆ ಒಂದು ರೀತಿಯ ಕಷ್ಟ. ಸಂಸಾರಿಯಾಗಿದ್ದು ಸಂನ್ಯಾಸ ತೆಗೆದುಕೊಂಡವನಾಗಿದ್ದರೆ ಅವನಿಗೆ ತನ್ನ ಸಂಸಾರ

ಸುಖದ ನೆನಪು ಬಂದುಬಿಡುತ್ತದೆ. ಆಸೆಯನ್ನು ತಡೆದುಕೊಳ್ಳುವುದು ತುಂಬ ಕಷ್ಟವಾಗುತ್ತದೆ."

ಈ ಸ್ವಾಮಿ ಒಂದು ಕಲೆಯುವರು. ಇನ್ನೊಂದು ಕಲೆಯ ಒಬ್ಬ ದೊಡ್ಡ ಮನುಷ್ಯರು ಇವರಲ್ಲಿ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದಾರೆ "ಎರಡು ಪಂಗಡಗಳ ಮಧ್ಯದ ವೈಷಮ್ಯವನ್ನು ಬಿಡಿಸಬೇಕು ನಿಮ್ಮ ಶಿಷ್ಯರಿಗೆ ತಾವು ಎರಡು ಬುದ್ಧಿ ಮಾತನ್ನು ಹೇಳಿದರ ಚೆನ್ನ ಆದೀತು," ಎಂದು ಈ ದೊಡ್ಡ ಮನುಷ್ಯರು ಸ್ವಾಮಿಗಳಿಗೆ ಸೂಚಿಸಿದರು. ಸ್ವಾಮಿಗಳು, "ಅಪ್ಪಾ, ನಿನ್ನ ಮಾತು ನನಗೆ ಒಪ್ಪಿಗೆ. ಆದರೆ ನಾನು ಈ ವಿಷಯದಲ್ಲಿ ನಮ್ಮ ಜನರಿಗೆ ಬುದ್ಧಿ ಹೇಳಹೋದರೆ, ಅವರು ನನ್ನನ್ನೇ ತೊರೆದಾರು, ನನ್ನನ್ನ ಸ್ವಾಮಿ ಎಂದು ಒಪ್ಪುವುದಿಲ್ಲ," ಎಂದರಂತೆ.

ತೆಂಗಲೆ, ವಡಗಲೆ ವೈಷಮ್ಯದ ಕಾರಣಗಳಲ್ಲಿ ಒಂದು, ಮತದ ಮೂಲ ಆಧಾರ ಗ್ರಂಥಗಳಾದ ತಮಿಳಿನ ಪ್ರಬಂಧಗಳಿಗೆ, ಸಂಸ್ಕೃತಕ್ಕೆ, ಎಷ್ಟು ಗೌರವ ಸಲ್ಲಬೇಕು, ಎನ್ನುವುದು ತೆಂಗಲೆ ಸಂಪ್ರದಾಯ ತಮಿಳ ಪ್ರಬಂಧ ಗ್ರಂಥ ಗಳನ್ನು ಸಂಸ್ಕೃತ ಗ್ರಂಥಗಳಿಗೆ ಸಮಸಮ, ಇಲ್ಲವೆ ಇನ್ನೂ ಹೆಚ್ಚು ಎಂದು ಗಣಿಸುತ್ತದೆ. ವಡಗಲೆ, ಆರ್ಯಧರ್ಮಕ್ಕೆ ಸಂಸ್ಕೃತ ಮೂಲ, ಅದು ಪ್ರಬಂಧ ಗಳಿಗಿಂತ ಹೆಚ್ಚು ಮುಖ್ಯ, ಎನ್ನುತ್ತದೆ. ಕಾಂಚೀಪುರದಲ್ಲಿ ಈ ಬಣಗಳ ಮಧ್ಯೆ ಹಲವು ವರ್ಷಗಳ ಹಿಂದೆ ಒಂದು ವಿವಾದ ಎದ್ದು ಬಣಗಳ ಹಿರಿಯರು ವಿವಾದ ವನ್ನು ಕೋರ್ಟಿಗೆ ಒಯ್ದು ಎರಡೂ ಪಕ್ಷದ ವಾದವನ್ನು ಕೇಳಿ ಕೋರ್ಟು, "ವರದರಾಜಸ್ವಾಮಿ ಉತ್ಸವಗಳಲ್ಲಿ ಪ್ರಬಂಧಗಳನ್ನು ಹಾಡುವುದು ತೆಂಗಲೆ ಯವರ ಅಧಿಕಾರ, ಸಂಸ್ಕೃತ ಸ್ತೋತ್ರ ಮಂತ್ರ ಪ್ರಾರ್ಥನೆಗಳನ್ನು ಹೇಳುವುದು ವಡಗಲೆಯವರ ಅಧಿಕಾರ, ತೆಂಗಲೆ ಸಮುದಾಯ ಪ್ರಬಂಧಗಳನ್ನು ಹಾಡು ತ್ತಿರುವಾಗ ವಡಗಲೆ ಜನ ಜೊತೆಗೆ ಸೇರಕೂಡದು, ವಡಗಲೆ ಸಮುದಾಯ ಸಂಸ್ಕೃತದ ಕೃತಿಗಳನ್ನು ಹಾಡುವಾಗ ತೆಂಗಲೆ ಜನ ಜೊತೆಗೆ ಸೇರಕೂಡದು," ಎಂದು ನಿರ್ಣಯ ಕೊಟ್ಟಿತು. ಈ ನಿರ್ಣಯ ಈಗಲೂ ನಡೆಯುತ್ತಿದೆ. ತೆಂಗಲೆ ಸಂಸ್ಕೃತ ಬೇಡ ಎಂದು ಹೇಳಲಿಲ್ಲ. ವಡಗಲೆ, ತಮಿಳು ಬೇಡ ಎಂದು ಹೇಳಲಿಲ್ಲ. ಆದರೆ ಈ ವಾದದ ಕಾರಣದಿಂದ ಕೋರ್ಟು ತೆಂಗಲೆಯನ್ನು ಸಂಸ್ಕೃತದ ವಿರೋಧಿ ಎಂದು, ವಡಗಲೆಯನ್ನು ತಮಿಳಿನ ವಿರೋಧಿ ಎಂದು,

ನಿರ್ಣಯಿಸಿತು. ಕೋರ್ಟಿನ ತೀರ್ಪು ವಿವೇಕದ ತೀರ್ಪಲ್ಲ. ಇದು ಸ್ಪಷ್ಟ. ಆದರೂ ಎರಡೂ ಪಕ್ಷ ಅದನ್ನು ಒಪ್ಪಿಕೊಂಡು ತೃಪ್ತವಾಗಿದೆ, ಈಗಲೂ ನಡೆಸುತ್ತಿದೆ.

## ಸ್ವಾಮಿಗಳ ಚರಿತ

ಸ್ವಾಮಿಗಳ, ಅವರ ಸಂಬಂಧಿಗಳ, ಚರಿತ್ರೆಯೂ ಬಹುವೇಳೆ ಜನರಿಗೆ ಬೇಸರ ತರುವ ತೆರನಾಗುತ್ತದೆ. ನಾನು ಕಂಡ ಕೆಲವು ಸಂಗತಿಗಳನ್ನು ಹೇಳುತ್ತೇನೆ ಮಠಗಳ ಹೆಸರು, ಸ್ಥಳಗಳ ಹೆಸರು, ಇವನ್ನು ನಾನು ಹೇಳುವುದಿಲ್ಲ. ಅವು ಯಾವುವು ಎಂದು ಓದುವವರು ಊಹಿಸಿಕೊಳ್ಳಲು ಸಾಧ್ಯ.

ನಾನು ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ ಒಂದು ಮಠದ ಸ್ವಾಮಿಗಳ ಹಿರಿಯ ಕುಮಾರರು ಮಠದ ವ್ಯವಹಾರವನ್ನು ನೋಡಿಕೊಳ್ಳುವ ಪ್ರಮುಖರಾಗಿದ್ದರು. ಇವರು ಬಹು ಕೆಳಗಿನದೆಂಬ ಒಂದು ಸಮುದಾಯದ ಒಬ್ಬ ಚೆಲುವೆಯೊಡನೆ ಸ್ನೇಹ ಬೆಳೆಸಿ ಬಾಳುತ್ತಿದ್ದರೆಂದು ಊರಿನಲ್ಲೆಲ್ಲ ಮಾತು. ಸ್ವಾಮಿಗಳ ಕುಮಾರರು, ಇತರರು ಈ ಮಾತನ್ನು ಎತ್ತುವಂತಿಲ್ಲ ಸಂಗತಿ ಸ್ವಾಮಿಗಳಿಗೆ ತಿಳಿಯಿತೋ ಇಲ್ಲವೋ ಹೇಳುವಂತಿಲ್ಲ, ಈ ತಪ್ಪು ಸಂಬಂಧ ನಡೆದೇ ಬಿಟ್ಟಿತು, ಕುಮಾರರು ಪ್ರಮುಖರಾಗಿ ಇದ್ದೇಬಿಟ್ಟರು.

ಆಮೇಲಿನ ದಿನದಲ್ಲಿ ಈ ಮಠದ ಸ್ವಾಮಿಗಳು ಅಷ್ಟರಲ್ಲೇ ದೇಹತ್ಯಾಗ ಮಾಡಿಯಾರೆಂದು ಕಂಡಾಗ, ಮುಂದಿನ ಸ್ವಾಮಿ ಪಟ್ಟಕ್ಕೆ ಯಾರನ್ನು ಆರಿಸುವುದು ಎಂಬ ಪ್ರಶ್ನೆ ಬಂದು, ಸ್ವಾಮಿಗಳ ಪೂರ್ವಾಶ್ರಮದ ಮಗಳು ತನ್ನ ಗಂಡ ಸ್ವಾಮಿ ಆಗಬೇಕೆಂದು ಹಠ ಮಾಡಿ, ಸ್ವಾಮಿ ಅವಳ ಅಭೀಷ್ಟವನ್ನು ಮೀರಲಾರದೆ, ಅಳಿಯನಿಗೆ ಸಂನ್ಯಾಸ ಕೊಟ್ಟರು.

ಇನ್ನೊಂದು ಪ್ರಸಂಗ. ಸಮುದಾಯದ ಸಮ್ಮತಿಯಿಂದ ಸಂನ್ಯಾಸಿ ಆಗಿ ಅದರ ಮಠದ ಗುರು ಆಗಿ, ಒಬ್ಬ ವಿದ್ವಾಂಸರು ದೇಶಯಾತ್ರೆಯಲ್ಲಿ ಶಿಷ್ಯರು ಕೊಟ್ಟ ಕಾಣಿಕೆಯ ಹಣಗಳನ್ನು ಮಠದ ಲೆಕ್ಕಕ್ಕೆ ಕೊಡದೆ ತಮ್ಮ ಕೈಯಲ್ಲೇ ಉಳಿಸಿಕೊಂಡು ಅವುಗಳ ವೆಚ್ಚದ ವಿಷಯ ಮಠದ ನಿರ್ವಾಹಕ ಸಮಿತಿಗೆ ತಿಳಿಸದೆ, ದುರುಪಯೋಗ ಮಾಡಿದರು ಎಂದು ಸಮಿತಿಯವರ ಆಕ್ಷೇಪಣೆ. ಸಮಿತಿಯ ಪ್ರಮುಖರು ಬೇಡಿದರು, ಕಾಡಿದರು, ಕೂಗಿದರು ಬೈದರು. ಸ್ವಾಮಿ

ಲಕ್ಷ್ಯ ಮಾಡಲಿಲ್ಲ ಸಮಿತಿ ಅವರನ್ನು ಮಠದ ಒಳಕ್ಕೆ ಬಿಡುವುದಿಲ್ಲ ಎಂದಿತು. ಸ್ವಾಮಿ ಮಠವನ್ನು ಬಿಟ್ಟರು ಬೆಂಗಳೂರಿನಲ್ಲಿ ಪೂರ್ವಾಶ್ರಮದ ಮಗನ ನೆರೆಯಲ್ಲಿ ಇದ್ದರು. ಸಮಿತಿಯ ಅಧ್ಯಕ್ಷರಿಗೆ ಇವರಿಗೆ ಮಧ್ಯೆ ದಿನವೂ ಕೆಟ್ಟ ಮಾತು ನಡೆಯಿತು. ಗ್ರಹಚಾರ, ಸಮಿತಿಯ ಅಧ್ಯಕ್ಷರ ಮಗ ತೀರಿಕೊಂಡ ಸ್ವಾಮಿ, "ಪಾಪಿ, ಗುರುದ್ರೋಹ ಮಾಡಿದ, ದೇವರು ಶಿಕ್ಷೆ ಕೊಟ್ಟರು ನೋಡಿ," ಎಂದರು.

ಒಂದು ಪುಣ್ಯಕ್ಷೇತ್ರ ನಾನು ಕನ್ನಡದ ಕೆಲಸಕ್ಕಾಗಿ ಅಲ್ಲಿಗೆ ಹೋಗಿದ್ದೇನೆ. ಅಲ್ಲಿ ಒಬ್ಬ ಸ್ವಾಮಿಗಳ ಮಾತು ಇವರು ಬಾಲಸಂನ್ಯಾಸಿಯಾಗಿ ಪೀಠಕ್ಕೆ ಬಂದಿದ್ದವರು ಊರು ಊರೇ ಕಂಡಂತೆ ಇವರು ಒಬ್ಬ ಹೆಂಗಸನ್ನು ಇಟ್ಟುಕೊಂಡಿದ್ದರು ಆಕೆ ಇವರ ಮಠದ ಹಿಂದುಗಡೆಯ ಮನೆಯಲ್ಲೇ ವಾಸ ಮಾಡುತ್ತಿದ್ದರು ಯಾವ ಸಂಕೋಚವೂ ಇಲ್ಲದೆ. ಮಠದ ಹಿಂದುಗಡೆಯ ಬಾಗಿಲಿಂದ ರಾತ್ರಿ ಮಠಕ್ಕೆ ಬಂದು ಹೋಗುವುದು ಕ್ರಮ. ಸಮುದಾಯದ ಹಿರಿಯರು, "ಈ ನಡತೆ ಮಠದ ಹೆಸರನ್ನು ಕೆಡಿಸುತ್ತದೆ. ದಯೆ ಮಾಡಿ ನಿಲ್ಲಿಸಿ," ಎಂದು ಗುರುವನ್ನು ಬೇಡಬೇಕು. ಇದು ಸಾಧ್ಯವೇ ?

ಬಹುದೊಡ್ಡ ಮಠದ ಒಬ್ಬ ಗುರುಗಳು ಬೆಂಗಳೂರಿನ ಅವರ ಬಿಡಾರದಿಂದ ಎಲ್ಲಿಗೋ ಹೋಗುವುದಕ್ಕೆ ಪ್ರವಾಸ ಹೊರಟಿದ್ದರು. ನಾನು ದಾರಿ ನಡೆಯುತ್ತ ನಾಲ್ಕೈದು ಮೋಟಾರು ಕಾರು ಒಂದರ ಹಿಂದೆ ಒಂದು ನಿಂತಿರುವುದನ್ನು ನೋಡಿ ಏನು ಸಂಗತಿ ಎಂದು ವಿಚಾರಿಸಿದೆ. ಅಲ್ಲಿದ್ದ ಒಬ್ಬರು, ಸ್ವಾಮಿಗಳು ಪ್ರವಾಸ ಹೊರಟಿದ್ದಾರೆ, ಎಂದರು. "ಇದೇನು ನಾಲ್ಕು ಕಾರು ತುಂಬ ಜನ ಹೋಗುತ್ತಾರೆಯೇ ?" ಎಂದು ನಾನು ಕೇಳಿದೆ. ಅವರು, "ಮೊದಲನೆಯ ಕಾರಿನಲ್ಲಿ ಸ್ವಾಮಿಗಳು, ಹಿಂದೆ ಒಂದರಲ್ಲಿ ಅವರ ಪೂರ್ವಾಶ್ರಮದ ಪತ್ನಿಯವರು, ಇನ್ನೆರಡರಲ್ಲಿ ಮ್ಯಾನೇಜರು, ಸೇವಕರು ನಾಲ್ಕು ಕಾರು ಬೇಕಾಗುತ್ತದೆ," ಎಂದರು.

ಬಹುದೊಡ್ಡ ಪುಣ್ಯಕ್ಷೇತ್ರ. ಅದರ ಸ್ವಾಮಿಗಳು ಒಳ್ಳೆಯವರೆಂದೇ ಹೆಸರು ಗಳಿಸಿದ್ದಾರೆ, ಆದರೆ ಅವರ ಹಿರಿಯ ಕುಮಾರರು ತಾನು ಸ್ವಾಮಿಗಳ ಮಗ ಎಂಬ ಕಾರಣದಿಂದ ಕ್ಷೇತ್ರದಲ್ಲಿ ತಾವೇ ಸ್ವಾಮಿ ಎಂಬಂತೆ ರೇಷ್ಮೆ ಜರತಾರಿ ವಸ್ತ್ರಗಳನ್ನು ಉಟ್ಟು ಹೊದೆದು ದರ್ಪದಿಂದ ನಡೆದಾಡುತ್ತಾರೆ. "ಸ್ವಾಮಿಗಳ

ಮಗ ಎಂತೆ ಉಳಿದವರು ಇದನ್ನು ಒಪ್ಪಿಕೊಂಡು ನಡೆಯುತ್ತಿದ್ದಾರೆ" ಎಂದು ಅಲ್ಲಿಗೆ ಹೋಗಿ ಬಂದವರ ಮಾತು

ನಿನ್ನ ಮಗ ಹೀಗೆ ಮಾಡುತ್ತಿದ್ದಾನೆ ಎಂದು ಸ್ವಾಮಿಗಳಿಗೆ ಹೇಳಬೇಕೆ? ಪ್ರಾಯಶಃ ಅವರಿಗ ತಿಳಿದೇ ಇದೆ. ತಿಳಿದೂ ಸುಮ್ಮನಿದ್ದಾರೆ

ನಮ್ಮ ಸ್ವಾಮಿಗಳಲ್ಲಿ ಕೆಲವರಿಗೆ ವ್ಯವಹಾರ ಜ್ಞಾನ ಸಾಲದು. ಇದಕ್ಕೆ ಒಂದು ಉದಾಹರಣೆ ೧೯೩೩–೩೪ರಲ್ಲಿ ನಾನು ಮಧುಗಿರಿಯಲ್ಲಿ ಸಬ್‌ಡಿವಿಷನ್ ಆಫೀಸರ್ ಆಗಿದ್ದಾಗ ನಡೆದ ಸಂಗತಿ, ಆಗ ಅಲ್ಲಿಗೆ ದಯಮಾಡಿಸಿದ ಸ್ವಾಮಿ ಒಬ್ಬರು ಒಂದು ಯಜ್ಞವನ್ನು ನಡೆಸಿದ ರೀತಿ. ಸ್ವಾಮಿ ತನಗೆ ಹಣದ ಅಪೇಕ್ಷೆ ಇಲ್ಲ ಎಂದು ತೋರಿಸುವುದಕ್ಕೆ ಶಿಷ್ಯರು ತನಗೆ ಒಪ್ಪಿಸಿದ ಕಾಣಿಕೆಯ ನೋಟು ಗಳನ್ನು ಯಜ್ಞದ ಕುಂಡದಲ್ಲಿ ಹಾಕುತ್ತಿದ್ದರಂತೆ. ಸ್ವಾಮಿಯನ್ನು ಹೊಗಳಿ ಭಕ್ತರೊಬ್ಬರು ಇದನ್ನು ನನಗೆ ಹೇಳಿದಾಗ ನಾನು, "ತನಗೆ ಹಣ ಬೇಡ ಎನ್ನುವುದನ್ನು ತೋರಿಸುವುದಕ್ಕೆ ಇದಕ್ಕಿಂತ ಒಳ್ಳೆಯ ದಾರಿ ಹತ್ತು ಇದೆ ಮಧುಗಿರಿಯಲ್ಲಿ ತಕ್ಕಷ್ಟು ಜನ ಬಡವರು ಇದ್ದಾರೆ. ಸ್ವಾಮಿಗಳ ದರ್ಶನಕ್ಕೆಂದು ಬರುವ ಜನರಲ್ಲೇ ಹಲವರು ತಕ್ಕಷ್ಟು ಬಡವರೇ ಇರಬೇಕು. ಬೆಂಕಿಗೆ ಹಾಕುವ ನೋಟುಗಳನ್ನು ಈ ಬಡವರಿಗೆ ಕೊಟ್ಟು, ಎರಡು ಹೊತ್ತು ಚೆನ್ನಾಗಿ ಊಟ ಮಾಡಿ, ಒಟ್ಟೆಬರೆ ಕೊಂಡುಕೊಳ್ಳಿರಿ, ಎಂದು ಹತ್ತು ಜನಕ್ಕೆ ಹಂಚಿದ್ದರೆ ಚೆನ್ನ ಆಗುತ್ತಿತ್ತು. ನೋಟನ್ನು ಸುಟ್ಟರೆ ಸರಕಾರಕ್ಕೆ ಕಾಸು ಉಳಿಸಿದಂತೆ ಆದೀತು ಅಷ್ಟೇ. ಸರಕಾರ ಬಡ ಅಲ್ಲ ಸ್ವಾಮಿಗಳ ಔದಾರ್ಯ ವ್ಯರ್ಥ ಆಗುತ್ತಿದೆ," ಎಂದೆನು. ನಾನು ಸ್ವಾಮಿಗಳ ಬಳಿಗೆ ಹೋಗಲಿಲ್ಲ, ನನ್ನ ಅಭಿಪ್ರಾಯವನ್ನು ತಿಳಿಸುವ ಸಂದರ್ಭ ಇರಲಿಲ್ಲ ಸ್ವಾಮಿಗಳು ಮಧುಗಿರಿಯಲ್ಲಿ ೧೫-೨೦ ದಿನ ಇದ್ದರೆಂದು ತೋರುತ್ತದೆ. ಇದ್ದಷ್ಟು ದಿನವೂ ಸರಕಾರದ ನೋಟುಗಳನ್ನು ಹೀಗ ವ್ಯರ್ಥವಾಗಿ ಸುಟ್ಟು ತೃಪ್ತಿ ಕಂಡರು.

ಯಜ್ಞಗಳ ಮಾತಿಗೆ ಇಲ್ಲಿ ಒಂದು ಸಂಗತಿಯನ್ನು ಅರಿಕ ಮಾಡಬಹುದು. ಈಗ ಹಲವು ವರ್ಷಗಳ ಹಿಂದ, ಬೆಂಗಳೂರಿಗೆ ಬೇಟ ನಾರಾಯಣ ಸದ್ಗುರು ಎಂಬ ಗುರುಗಳು ದಯಮಾಡಿಸಿದರು. ಅವರು ಯಾವುದೋ ಒಂದು ಒಳ್ಳೆಯ ಉದ್ದೇಶದಿಂದ ಒಂದು ಮಹಾಯಜ್ಞವನ್ನು ನಡೆಸಿದರು. ಆಸ್ತಿಕ ಮಹಾಜನರ ನೆರವನ್ನು ಅಪೇಕ್ಷಿಸಿದರು. ನೆರವು ತಕ್ಕಷ್ಟು ಬಂದಿತು. ಸ್ವಾಮಿ ಯಜ್ಞಶಾಲೆ

ಒಂದನ್ನು ನಿರ್ಮಿಸಲು ಏರ್ಪಡಿಸಿ ಯಜ್ಞವನ್ನು ಆರಂಭಿಸಿದರು. ನಾನು ಕೇಳಿದ್ದರಲ್ಲಿ ಮಹಾಯಜ್ಞದ ಕ್ರಮ ಹೀಗಿತ್ತು ನಾಲ್ಕೋ, ಐದೋ, ತಕ್ಕಷ್ಟು ಉದ್ದದ, ತಕ್ಕಷ್ಟೇ ಆಳದ ಹೊಂಡಗಳಲ್ಲಿ ಹೋಮ ನಡೆಯಬೇಕು. ಒಂದೊಂದು ಹೊಂಡದ ಬದಿಗೆ ಹತ್ತೋ ಇಪ್ಪತ್ತೋ ಬ್ರಾಹ್ಮಣರು ಕುಳಿತು, ಒಂದು ಮಂತ್ರವನ್ನು ಜಪಿಸಿ ಒಂದು ಚಮಚ ತುಪ್ಪವನ್ನು ಅಗ್ನಿಗೆ ಅರ್ಪಿಸ ಬೇಕು. ಇದು ಎಷ್ಟೋ ಲಕ್ಷ ಬಾರಿ ಆಗಬೇಕು. ಯಜ್ಞದ ಆರಂಭ ಚೆನ್ನಾಗಿಯೇ ಇತ್ತಂತೆ ಸ್ವಾಮಿಗಳಿಗೆ ದೇಹದಲ್ಲಿ ಏನೋ ಬಾಧೆ ಆದರೂ ಅವರು ಸ್ವತಃ ನಿಂತು ಆರಂಭವನ್ನು ನಡೆಸಿಕೊಟ್ಟರು. ಮುಂದರಿಸಿ ಎಂದು ಅಪ್ಪಣೆ ಮಾಡಿ ಬಿಡಾರಕ್ಕೆ ಹೋದರು.

ನಾನು ಕೇಳಿದ್ದರಲ್ಲಿ ಮೊದಲ ದಿನ ಯಜ್ಞ ಚೆನ್ನಾಗಿಯೇ ನಡೆಯಿತು. ಹೊಂಡಗಳಲ್ಲಿ ಉರಿ ಕಾಣುತ್ತಿತ್ತು ಹಾಕಿದ ತುಪ್ಪ ಹೊಗೆಯಾಗಿ ಯಜ್ಞ ಮಂಟಪವನ್ನು ತುಂಬಿತು. ಎರಡನೆಯ ದಿವಸ ಜ್ವಾಲೆಗಳು ಕಡಮೆಯಾದವು. ಅರ್ಪಿಸಿದ ತುಪ್ಪ ಎಲ್ಲ ಉರಿಯಲಿಲ್ಲ ಮಂತ್ರಗಳ ಉಚ್ಚಾರಣೆಯೂ ಮೊದಲ ದಿನದ ಧ್ವನಿಯಲ್ಲಿ ಆ ಶ್ರದ್ಧೆಯಿಂದ ಅಷ್ಟು ಸ್ಪಷ್ಟವಾಗಿ ಕೇಳಿಸಲಿಲ್ಲ. ಹೀಗಾಗಿ ನಾಲ್ಕನೆಯ ದಿನದ ವೇಳೆಗೆ ಹೇಳುವಷ್ಟು ಜನ ಹೇಗೋ ಮಂತ್ರ ಹೇಳಿ, ತುಪ್ಪವನ್ನು ಹುಯ್ದುದ್ದು ಕೆಂಡವೇ ಇಲ್ಲದ ಹೊಂಡಗಳಿಗೆ. ಇದನ್ನು ನೋಡಿದ ಯಾರೋ, "ಇದು ಅಪಲಕ್ಷಣ, ಇದರಿಂದ ಗುರುಗಳ ಉದ್ದೇಶ ಸಿದ್ಧಿಸುವುದಿಲ್ಲ, ಅದಕ್ಕೆ ಪ್ರತಿಯಾಗಿ ಏನೋ ಅನರ್ಥ ಸಂಭವಿಸುತ್ತದೆ," ಎಂದರಂತೆ. ಅದಕ್ಕೆ ತಕ್ಕಂತೆ ಆ ನಾಲ್ಕು ದಿನಗಳಲ್ಲಿ ಸ್ವಾಮಿಗಳ ಆರೋಗ್ಯ ಮತ್ತಷ್ಟು ಕೆಡುತ್ತ ಹೋಯಿತು. ಕೊನೆಯ ದಿವಸ ಅವರು ಸಮಾಧಿಸ್ಥರಾದರು, ಎಂದರೆ ತೀರಿ ಕೊಂಡರು ಯಜ್ಞದ ಮಾತು ಎತ್ತಲೋ ಹೋಯಿತು. ಸ್ವಾಮಿಗಳ ದೇಹವನ್ನು ಒಪ್ಪಮಾಡುವ ಕರ್ತವ್ಯ ದೊಡ್ಡದಾಯಿತು. ಯಜ್ಞದ ಸಲುವಾಗಿ ಸೇರಿಸಿದ ಹಣದಲ್ಲಿ ಉಳಿದ ಹಣದಿಂದಲೋ, ಇಲ್ಲ ಮತ್ತೆ ಸೇರಿಸಿದ ಬೇರೆ ಹಣದಿಂದಲೋ ಈ ಕರ್ತವ್ಯವನ್ನು ಭಕ್ತಮಂಡಲಿ ದುಃಖಪಡುತ್ತ ಗುರುಗಳ ವಿಷಯದ ಗೌರವದಿಂದ ಯುಕ್ತರೀತಿಯಲ್ಲಿ ನೆರವೇರಿಸಿತು ಈಗಲೂ ಕೆಂಪಾಂಬುಧಿ ಕೆರೆಯ ದಕ್ಷಿಣದ ಅಂಚಿನ ಮಾರ್ಗದಲ್ಲಿ ಸದ್ಗುರುಗಳ ಸಮಾಧಿ ಸ್ಥಾನ ಇದೆ.

ಸ್ವಾಮಿಗಳಾದವರು ತಮ್ಮ ಸ್ಥಾನಕ್ಕೆ ತಕ್ಕಂತೆ ನಡೆದುಕೊಳ್ಳದೆ ಜನರಲ್ಲಿ ಬೇಸರ ಮೂಡಿಸಿದ ಒಂದು ಸಂದರ್ಭ ನಾನು ಕಂಡುದನ್ನು ಇಲ್ಲಿ ಹೇಳಬಹುದು. ಶೃಂಗೇರಿ ಮಠದ ಒಂದು ಶಾಖೆಯಾಗಿ ಕೂಡಲಿ ಶೃಂಗೇರಿ ಮಠ ಎಂಬ ಹೆಸರಿನಿಂದ ಚಿತ್ರದುರ್ಗದಲ್ಲಿ ಒಂದು ಮಠ ಇದೆಯಷ್ಟೆ. ಇದರ ಒಬ್ಬ ಗುರು ಎಷ್ಟೋ ವರ್ಷದ ಹಿಂದೆ ಉತ್ತರಕ್ಕೆ ಯಾತ್ರೆ ಹೋದರಂತೆ ಎಷ್ಟೋ ವರ್ಷ ಕಳೆಯಿತು ; ಅವರು ಹಿಂದಕ್ಕೆ ಬರಲಿಲ್ಲ ಶಿಷ್ಯರು ಹೊಸ ಸ್ವಾಮಿ ಒಬ್ಬರನ್ನು ಪೀಠದಲ್ಲಿ ಕುಳ್ಳಿರಿಸಿದರು ಕೆಲವು ವರ್ಷ ಕಳೆದು ಹಿಂದಿನ ಸ್ವಾಮಿ ಮರಳಿ ಬಂದರು. "ಪೀಠ ನನ್ನದು, ಇದನ್ನು ನನಗೆ ಬಿಡು," ಎಂದು ಹೊಸ ಸ್ವಾಮಿಗೆ ಹೇಳಿದರು ಹೊಸ ಸ್ವಾಮಿ, "ನಾನು ಸ್ವಾಮಿ ಆದುದು ಆಯಿತಲ್ಲ, ಪೀಠವನ್ನು ಬಿಟ್ಟು ನಾನು ಏನು ಮಾಡುವುದು, ನೀವೂ ಜೊತೆಗೆ ಇರಿ," ಎಂದರು. ಹಿರಿಯರಿಗೆ ಇದು ಸಾಕು ಎನ್ನಿಸಲಿಲ್ಲ, ಅವರು ಹೊಸ ಸ್ವಾಮಿ ಎಲ್ಲಿಗೆ ಹೋದರೆ ಅಲ್ಲಿಗೆ ತಾವೂ ಹೋಗಿ, ಅವರನ್ನು ಯಾರೋ ಭಿಕ್ಷೆಗೆ ಕರೆದರೆ ಅವರ ಮನೆಗಳಿಗೆಲ್ಲ ಹೋಗಿ, "ಅವರು ಸ್ವಾಮಿಯಲ್ಲ, ನಾನೇ ಸ್ವಾಮಿ, ಭಿಕ್ಷೆ ನನಗೆ ನಡೆಸಿ," ಎಂದು ಹೇಳುತ್ತಾ, "ನಡೆಸದಿದ್ದರೆ ಶಾಪ ಕೊಡುತ್ತೇನೆ," ಎಂದು ಹೆದರಿಸುತ್ತಾ ನಡೆದರು. ನಾನು ಧಾರವಾಡಕ್ಕೆ ಒಮ್ಮೆ ಹೋಗಿದ್ದಾಗ ಈ ಸ್ವಾಮಿಗಳ ಈ ವಾದ ನಡೆಯುತ್ತಿತ್ತು. ಜನ ಯಾವ ಸ್ವಾಮಿಗೂ ಮನಸ್ಸು ಕೆಡದಂತೆ ಇಬ್ಬರನ್ನೂ ಹೇಗೋ ಉಪಾಯವಾಗಿ ನೋಡಿಕೊಳ್ಳುತ್ತಿದ್ದರು.

ಕೂಡಲಿಯ ಇತ್ತೀಚಿನ ಸ್ವಾಮಿಗಳ ದುರಂತದ ಕಥೆ ನಮ್ಮ ಜನಕ್ಕೆ ತಿಳಿದೇ ಇದೆ ಸ್ವಾಮಿಯ ಅಪ್ಪಣೆಯಿಂದ ಅವರ ಮಠದ ಕಟ್ಟಡದಲ್ಲಿ ಯಾರೋ ದುಷ್ಟರು ಕಳ್ಳನೋಟುಗಳನ್ನು ಅಚ್ಚುಮಾಡಿಸಿ ಚಲಾವಣೆಗೆ ತಂದರು ಎಂಬ ಆರೋಪ ಬಂದು ಸ್ವಾಮಿಗಳು ಒಂದು ಕೋರ್ಟಿನ ಎದುರಲ್ಲಿ ಒಬ್ಬ ಅಪರಾಧಿಯಾಗಿ ನಿಲ್ಲಬೇಕಾಯಿತು ಮೊದಲ ಕೋರ್ಟಿನಲ್ಲಿ ಮ್ಯಾಜಿಸ್ಟ್ರೇಟರು ಇವರು ಅಪರಾಧಿ ಅಲ್ಲ ಎಂದು ತೀರ್ಪು ಕೊಟ್ಟರು ಇದನ್ನು ಒಪ್ಪದೆ ಸರಕಾರ ಮೇಲಿನ ಕೋರ್ಟಿಗೆ ದೂರು ಹೊತ್ತಿತು. ಅಲ್ಲಿ ವಿಚಾರಣೆ ಮುಗಿಯುವ ಮೊದಲಲ್ಲೇ ಸ್ವಾಮಿ ತೀರಿಕೊಂಡರು. ಪ್ರಾಣ ಕಳೆದುಕೊಂಡರು ಎನ್ನುವುದು ಕೆಲವರ ತಿಳುವಳಿಕೆ. ಇದು ಸಾಧ್ಯ. ಹೀಗಲ್ಲದೆ ಯಾವುದೋ ವ್ಯಾಧಿಯಿಂದ ತೀರಿಕೊಂಡರು ಎನ್ನುವುದೂ ಸಾಧ್ಯ. ಆದರೆ ಇದು ಮುಖ್ಯವಲ್ಲ, ಜನತೆಯಲ್ಲಿ

ನೀತಿಯನ್ನು ಪೋಷಿಸಬೇಕಾದ ಸಂಸ್ಥೆಯ ಪ್ರಮುಖರ ಆಶ್ರಯದಲ್ಲಿ ನೀತಿ ಬಾಹಿರರಾದ ದುಷ್ಟರು ತಮ್ಮ ಅಕೃತ್ಯವನ್ನು ನಡೆಸುವುದು ಸಾಧ್ಯವಾಯಿತಲ್ಲಾ, ಇದು ನಮ್ಮ ಧರ್ಮಸಂಸ್ಥೆಗಳ ಕೀರ್ತಿಗೆ ಕಳಂಕವನ್ನು ತಂದಿತು. ಇದು ದುಃಖದ ಸಂಗತಿ.

ಗುರುಪೀಠಗಳ ನಮ್ಮ ಹಿರಿಯರು ತಮ್ಮ ಮಾತಿನಲ್ಲಿ ತುಂಬ ಎಚ್ಚರ ವಹಿಸಬೇಕು, ಎನ್ನುವುದನ್ನು ಸ್ಥಾಪಿಸುವ ಇನ್ನೊಂದು ಸಂಗತಿಯನ್ನು ಇಲ್ಲಿ ಹೇಳಬೇಕು ಮಾಧ್ವ ಗುರುಪೀಠದಲ್ಲಿ ಒಂದರ ಸ್ವಾಮಿಗಳಾದವರು ಮೈಸೂರಲ್ಲಿ ಕೆಲವು ವರ್ಷಗಳ ಹಿಂದೆ ಭಾಷಣ ಮಾಡುತ್ತ, "ಶ್ರೀರಾಮ ರಾವಣನನ್ನು ಸಂಹರಿಸಿದಾಗ ಈಶ್ವರದೇವರು ಯುದ್ಧರಂಗಕ್ಕೆ ಬಂದು, 'ನೀನು ನನ್ನ ಭಕ್ತನನ್ನು ಕೊಂದಿದ್ದೀಯೆ, ನಾನು ನಿನಗೆ ಶಿಕ್ಷೆ ಮಾಡಬೇಕು, ಬಾ, ನನ್ನೊಡನೆ ಕಾದು,' ಎಂದನು. ರಾಮ ಯುದ್ಧಕ್ಕೆ ಸಿದ್ಧನಾದ. ದೇವತೆಗಳು ಬಂದು ಈ ಜಗಳ ಬೇಡ ಎಂದು ಹೇಳಿ ಈಶ್ವರನಿಗೆ ಸಮಾಧಾನ ಹೇಳಿ ಕಳುಹಿಸಿಕೊಟ್ಟರು," ಎಂದು ಹೇಳಿದರಂತೆ ಲಿಂಗಪ್ಪಯ್ಯ ಎಂಬ ನನ್ನ ಸ್ನೇಹಿತರು ಸಭೆಯಲ್ಲಿ ಇದ್ದರು. ಈ ಮಾತು ಅವರಿಗೆ ಹೊಸದು ಎನ್ನಿಸಿತು. ಆಮೇಲೆ ಒಂದುದಿನ ನನ್ನನ್ನು ಕಂಡಾಗ ಸ್ವಾಮಿಗಳ ಹೆಸರನ್ನು ಹೇಳಿ ಇವರು, "ಸ್ವಾಮಿ ಬಹಿರಂಗ ಸಭೆಯೊಂದರಲ್ಲಿ ಹೀಗೆ ಹೇಳಿದರು, ಕಥೆ ರಾಮಾಯಣದ ಕೊನೆಯಲ್ಲಿ ಬರುತ್ತದೆಯೇ" ಎಂದು ಕೇಳಿದರು ನಾನು ಇಲ್ಲ, ಎಂದೆ. ಜನರ ಮಧ್ಯೆ ಸಮಾಧಾನವನ್ನು ಬೆಳೆಸಬೇಕಾದ ಈ ಗುರು ವೈಷಮ್ಯವನ್ನು ಬೆಳೆಸುವ ಇಂಥ ಮಾತನ್ನು ಏಕೆ ಆಡಿದರು ಎಂದು ವ್ಯಥೆಪಟ್ಟೆ ಸ್ವಲ್ಪಕಾಲದ ಬಳಿಕ ಬೆಂಗಳೂರಿನ ದಕ್ಷಿಣದ ಕೊನೆಯಲ್ಲಿ ಉಡುಪಿಯ ಪೇಜಾವರ ಮಠದ ಶ್ರೀ ಶ್ರೀಗಳವರು ಸ್ಥಾಪಿಸಿರುವ ವಿದ್ಯಾಪೀಠದ ಕ್ಷೇತ್ರದಲ್ಲಿ ಒಂದು ಸಾರ್ವಜನಿಕ ಸಭೆ. ಅದಕ್ಕೆ ನಾನೂ ಹೋಗಿದ್ದೇನೆ ಮೈಸೂರಿನಲ್ಲಿ ಆ ಕಥೆ ಹೇಳಿದ ಆ ಸ್ವಾಮಿಗಳು ದೈವವಶಾತ್ ಸಭೆಗೆ ದಯಮಾಡಿಸಿದ್ದರು. ಮತ್ತೆ ದೈವವಶಾತ್ ಅವರು ಸಭೆಯನ್ನು ಉದ್ದೇಶಿಸಿ ಒಂದು ಭಾಷಣವನ್ನು ಮಾಡಿದರು ಅದರಲ್ಲಿ ಅವರು ತಿಳಿಸಿದ್ದು ಮುಖ್ಯವಾಗಿ ಎರಡು ಸಂಗತಿ. "ಕ್ಷೀರಸಾಗರದ ಮಥನದಲ್ಲಿ ಹಾಲಾಹಲ ಉದಿಸಿದಾಗ ಶಿವ ಅದನ್ನು ಕುಡಿದ ಎಂದು ಪುರಾಣ ಹೇಳುತ್ತದೆಯಲ್ಲ. ಶಿವನಿಗೆ ಆ ವಿಷವನ್ನು ಸಹಿಸುವ ಶಕ್ತಿ ಸ್ವತಃ ಇರಲಿಲ್ಲ. ಅವನು

ವಾಯುದೇವರನ್ನು ನೆನೆದು, ಅವನ ಸಹಾಯವನ್ನು ಪಡೆದು, ಆ ವಿಷವನ್ನು ಸಹಿಸಿಕೊಂಡ". ಇದು ಒಂದು ಸಂಗತಿ. "ನಮ್ಮ ಧರ್ಮದಲ್ಲಿ ಮೂರು ಸಿದ್ಧಾಂತಗಳು ಇವೆಯಲ್ಲ, ಮೂರೂ ವೇದದಿಂದಲೇ ಬಂದಿವೆ, ಆದ್ದರಿಂದ ನಾವು ಮೂರನ್ನೂ ಒಪ್ಪಿಕೊಳ್ಳುವುದು ಸರಿ, ಎಂದು ಕೆಲವರು ವಾದಿಸುತ್ತಾರೆ. ಇದು ಯುಕ್ತವಲ್ಲ. ಕ್ಷೀರಸಾಗರ ಮಥನದಲ್ಲಿ ಮೊದಲು ಹಾಲಾಹಲ ಉದಿಸಿತು. ಆಮೇಲೆ ವಾರುಣಿ, ಆಮೇಲೆ ಅಮೃತ. ಮೂರೂ ಕ್ಷೀರ ಸಾಗರದಿಂದಲೇ ಉದಿಸಿದವು ಎಂದು ಮೂರನ್ನೂ ಒಪ್ಪಿಕೊಳ್ಳೋಣವೇ? ಅದ್ವೈತ ಹಾಲಾಹಲ, ವಿಶಿಷ್ಟಾದ್ವೈತ ವಾರುಣಿ; ದ್ವೈತಸಿದ್ಧಾಂತ ಅಮೃತ ಆ ಮೂರರಲ್ಲಿ ಅಮೃತ ಹೇಗೆ ಈ ಮೂರರಲ್ಲಿ ಹಾಗೆಯೇ ದ್ವೈತ ಮಾತ್ರ ಅಂಗೀಕಾರಕ್ಕೆ ಅರ್ಹ". ಸಭೆ ಕೇವಲ ಮಧ್ವ ಸಮುದಾಯದ ಒಂದು ಸಭೆ ಅಲ್ಲ. ನನ್ನಂತೆ ಇತರ ಜನ ಅನೇಕರಿದ್ದರು. ಎಲ್ಲರನ್ನೂ ಉದ್ದೇಶಿಸಿ ಈ ಸ್ವಾಮಿಗಳು ಸ್ವಲ್ಪವೂ ಹಿಂಜರಿಯದೆ ಈ ಮಾತನ್ನು ಆಡಿಬಿಟ್ಟರು. ಆಡುವುದರಲ್ಲಿ ಸ್ವಲ್ಪವಾದರೂ ಸಂಕೋಚ, ಹಿಡಿತ, ಇರಲಿಲ್ಲ. ವಿಶಿಷ್ಟಾದ್ವೈತವನ್ನು ಹಳಿದರು ಎಂದಲ್ಲ, ಸಮರಸವನ್ನು ಬೆಳೆಸಬೇಕಾದ ಹಿರಿಯರು ವೈಷಮ್ಯವನ್ನು ಬಿತ್ತುತ್ತಿದ್ದಾರಲ್ಲ ಎಂದು ನಾನು ಮತ್ತೆ ವ್ಯಥೆಪಟ್ಟೆನು.

## ಮಠಗಳ ಶ್ರೇಷ್ಠತೆ

ನಮ್ಮ ಸಂಪ್ರದಾಯದಲ್ಲಿ ಮಠಗಳ ಪ್ರತಿಷ್ಠೆಯ ಮಾತು ಮುಂದಾಗಿ ಹಲವು ಬಾರಿ ಮನಸ್ತಾಪಗಳು ಉಂಟಾದದ್ದು ಕಂಡಿದೆ. ನಮ್ಮ ಶೃಂಗೇರಿ ಮಠದ ಗುರುಗಳನ್ನು 'ಜಗದ್ಗುರು' ಎಂದು ಕರೆಯುವುದು ವಾಡಿಕೆ. ಇವರು ನಮ್ಮ ನಗರಗಳಿಗೆ ದಯಮಾಡಿಸಿದಾಗ ಅಡ್ಡಪಲ್ಲಕ್ಕಿಯಲ್ಲಿ ಕುಳಿತು ಮೆರವಣಿಗೆ ಹೋಗುವುದು ಒಂದು ಕ್ರಮ. ಬೀದಿಯಲ್ಲಿ ಹೋಗುತ್ತ ಅಡ್ಡಪಲ್ಲಕ್ಕಿಯಲ್ಲಿ ಹೋಗುವುದು ಒಂದು ವಿಶಿಷ್ಟ ಅಧಿಕಾರ ಎನ್ನುವುದು ಸಾಮಾನ್ಯ ಭಾವನೆ. ಈಚೆಗೆ ವೀರಶೈವ ಮಠಗಳು ಹಲವು ತಮ್ಮ ಗುರುಗಳನ್ನು ಸಹ ಜಗದ್ಗುರುಗಳೆಂದು ಕರೆಯುವುದು ಕಾಣುತ್ತದೆ ಈ ಗುರುಗಳೂ ಅಡ್ಡಪಲ್ಲಕ್ಕಿಯಲ್ಲಿ ಕುಳಿತು ಮೆರವಣಿಗೆ ಹೋಗಿದ್ದಾರೆ. ಒಬ್ಬರಿಗೆ ದೊರೆತ ಮರ್ಯಾದೆ ಇನ್ನೊಬ್ಬರಿಗೆ ದೊರಕಲಿಲ್ಲ ಎನ್ನುವ ಅತೃಪ್ತಿಗೆ ಎಡೆಕೊಡದೆ ನಮ್ಮ ಸಮಾಜದ

ಎಲ್ಲ ಸಮುದಾಯಗಳ ಗುರುಗಳೂ ತಾವು ನಗರಗಳಿಗೆ ಬಂದಾಗ ಹೀಗೆ ಮೆರವಣಿಗೆಯನ್ನು ನಡೆಸುವುದು ತುಂಬ ಯುಕ್ತ. ಇರುತ್ತ 'ಗುರುಗಳು, ಜಗದ್ಗುರು' ಎಂದು ಹೇಳುವ ಮಾತಿನ ಅರ್ಥವನ್ನು ನಾವು ಗ್ರಹಿಸುವುದು ಒಳ್ಳೆಯದು. ಕ್ರೈಸ್ತ ಧರ್ಮದಲ್ಲಿ ಮೂಲಪಂಗಡ ಆದ ಕ್ಯಾಥೊಲಿಕ್ ಸಮುದಾಯದಲ್ಲಿ ರೋಮ್ ನಗರದ ಕೇಂದ್ರ ಮಠದ ಗುರು ಆದ ಪೋಪ್ ಪ್ರಪಂಚದ ಎಲ್ಲ ರೋಮನ್ ಕ್ಯಾಥೊಲಿಕ್ ಕ್ರೈಸ್ತ ಜನರಿಗೆ ಏಕೈಕ ವರಿಷ್ಠ ಗುರು. ಕ್ರೈಸ್ತ ಧರ್ಮದಲ್ಲಿಯೇ ಕ್ಯಾಥೊಲಿಕ್ ಸಮುದಾಯಕ್ಕೆ ಪ್ರತಿಪಕ್ಷ ಆದ ಪ್ರಾಟೆಸ್ಟೆಂಟ್ ಶಾಖೆಯಲ್ಲಿ ಪ್ರಪಂಚದ ಎಲ್ಲ ಪ್ರಾಟೆಸ್ಟೆಂಟರಿಗೆ ಕೇಂದ್ರ ಗುರು ಆದ ಒಬ್ಬ ಗುರು ಇಲ್ಲ. ಪೋಪ್ ಗುರು ಸಹ ಒಂದು ಮಿತಿಯ ರೀತಿಯಲ್ಲಿ ಹೊರತು "ಜಗದ್ಗುರು" ಅಲ್ಲ. ಪ್ರಪಂಚದ ಬೇರೆ ಧರ್ಮಗಳ ಯಾವ ಗುರುವಿಗೂ ಜಗದ್ಗುರು ಶಬ್ದ ಇಷ್ಟು ಮಟ್ಟಿಗೂ ಅನ್ವಯಿಸುವುದಿಲ್ಲ ಶೃಂಗೇರಿ ಮಠದ ಗುರುಗಳು ಕೂಡ ಸನಾತನ ಧರ್ಮದ ಅನುಯಾಯಿಗಳಲ್ಲಿ ಬಹುಸಂಖ್ಯೆಯ ಜನಕ್ಕೆ ಕೇಂದ್ರ ಗುರು ಎನ್ನಲಾಗುವುದಿಲ್ಲ. ನಮ್ಮ ಗುರುಗಳಲ್ಲಿ ಇತರ ವಿಷಯಕ್ಕೆ ಇದೇ ಮಾತು ಸಲ್ಲುತ್ತದೆ. ಜಗತ್ತಿನಲ್ಲಿ ಒಂದು ಸಣ್ಣ ಭಾಗ ಆದ ಭರತವರ್ಷದಲ್ಲಿ ವಾಸಮಾಡುವ ಜನರಲ್ಲಿ ಬಹುಸಂಖ್ಯೆಯದಾದರೂ ಒಂದು ಭಾಗ ಮಾತ್ರ ಆದ ಹಿಂದೂ ಸಮಾಜದಲ್ಲಿ ಜೈನ ಬೌದ್ಧ ಸಿಖ್ ಸಮುದಾಯಗಳನ್ನು ಬಿಟ್ಟು ಉಳಿದ ಭಾಗದಲ್ಲಿ ಎಷ್ಟೇ ದೊಡ್ಡಭಾಗಕ್ಕೆ ಕೇಂದ್ರ ಗುರು ಆದರೂ ಅವರಿಗೆ ಜಗದ್ಗುರು ಶಬ್ದ ಅನ್ವಯಿಸಲಾರದು. ಈಗ ಈ ಶಬ್ದವನ್ನು ಬಳಸುವ ಗೃಹಸ್ಥರು, ಪೂಜ್ಯರಾದ ನಮ್ಮ ಗುರುಗಳು, ಇದನ್ನು ಮನಸ್ಸಿಗೆ ತಂದುಕೊಂಡು ಇನ್ನು ಮುಂದೆ ಈ ಹೆಸರು ಬೇಡ ಎಂದು ಅಪ್ಪಣೆ ಕೊಟ್ಟರೆ ಈಗ ಹೆಸರನ್ನು ಬಳಸುತ್ತಿರುವ ಹಲವು ಮಠಗಳ ಮಧ್ಯದ ವಿರಸ ಕೊನೆಗೊಂಡೀತು.

ಈ ಸಂದರ್ಭದಲ್ಲಿ ಜಗತ್ ಶಬ್ದದ ಅರ್ಥವನ್ನು ಕುರಿತೇ ಒಂದು ವಿವೇಚನೆ ಇದೆ ನಮ್ಮ ಮಲೆನಾಡು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಹದಿನಾಲ್ಕು ಗ್ರಾಮಗಳ ಸಮುದಾಯವನ್ನು ಜಗತ್ ಎಂದು ಕರೆಯುವ ವಾಡಿಕೆ. ನಮ್ಮ ರಾಜರ ಆಡಳಿತದಲ್ಲಿ ಜಗತ್ತು ಎನ್ನುವುದು ಈಗ ನಾವು ಒಂದು ಹೋಬಳಿ ಎಂದು ಕರೆಯುವ ಗ್ರಾಮ ಸಮುದಾಯದ ಹೆಸರು. ಮಲೆನಾಡಿನಲ್ಲಿ ಇದರಂತೆ

ವಾಡಿಕೆಯಲ್ಲಿರುವ ಇನ್ನೊಂದು ಪದ ಸೀಮೆ ಲಕ್ಯದ ಸೀಮೆ, ಬೆಳವಾಡಿ ಸೀಮೆ, ಇತ್ಯಾದಿ. ಶೃಂಗೇರಿ ಇಂಥ ಹದಿನಾಲ್ಕು ಗ್ರಾಮದ ಮಧ್ಯೆ ಮುಖ್ಯ ಗ್ರಾಮ. ಜಗತ್ತಿನ ಹೆಸರು ಶೃಂಗೇರಿ ಜಗತ್. ಜಗದ್ಗುರು ಎಂದರೆ ಆ ಜಗತ್ತಿನಲ್ಲಿ ವಾಸ ಮಾಡುವ ಗುರು ಎನ್ನುವುದು ಮೊದಲ ಅರ್ಥ ಆಗಿದ್ದಿರಲು ಸಾಧ್ಯ.

ಒಂದೇ ಪಂಗಡದ ಸ್ವಾಮಿ ಸ್ವಾಮಿಗಳ ಮಧ್ಯದ ಸಂಬಂಧವೂ ಹೀಗೆಯೇ ತಪ್ಪು ಜಾಡಿಗೆ ಹೋಗಿದೆ. ಮಾಧ್ವರಲ್ಲಿ ಹಲವು ಮಠ ಇವೆ ಇವುಗಳಲ್ಲಿ ಒಂದು ಮಠ ಮಿಕ್ಕ ಎಲ್ಲಕ್ಕಿಂತ ತಾನು ಶ್ರೇಷ್ಠ ಎಂದು ತಿಳಿದುಕೊಂಡಿದೆ. ಈಗ ಕೆಲವು ವರ್ಷಗಳ ಹಿಂದೆ ಬೇರೆ ಒಂದು ಮಠದ ಸ್ವಾಮಿಗಳು ಈ ಮಠದ ಸ್ವಾಮಿಗಳನ್ನು ಕಾಣಲು ಅಪೇಕ್ಷಿಸಿದಾಗ ಸ್ವಾಮಿ, ಅವಶ್ಯಕವಾಗಿ ಬನ್ನಿ, ಎಂದು ಉತ್ತರಕೊಟ್ಟರು ಆಮೇಲೆ ಶಿಷ್ಯರಲ್ಲಿ "ಆ ಸ್ವಾಮಿ ಬಂದಾಗ ಈ ಸ್ವಾಮಿ ಎದ್ದು ಅವರನ್ನು ಬರಮಾಡಿಕೊಳಬೇಕೇ, ಇಲ್ಲ ಕುಳಿತಿದ್ದೇ ಬರಮಾಡಿಕೊಂಡು ಪಕ್ಕದಲ್ಲಿ ಕುಳ್ಳಿರಿಸಬೇಕೇ" ಎಂಬ ಪ್ರಶ್ನೆಯನ್ನು ಎತ್ತಿದರು. ಉತ್ತರ ಸುಲಭದಲ್ಲಿ ಸಿಕ್ಕಲಿಲ್ಲ. ಇದು ಜಿಜ್ಞಾಸೆಯಲ್ಲಿರುವುದು ಆ ಇನ್ನೊಬ್ಬ ಸ್ವಾಮಿಗಳಿಗೆ ತಿಳಿಯಿತು ಅವರು, "ನಾವು ಬಂದು ನಿಮಗೆ ಇಷ್ಟೆಲ್ಲ ಆಯಾಸವನ್ನುಂಟು ಮಾಡುವುದು ಅನವಶ್ಯಕ ನಾವು ಬರುವುದಿಲ್ಲ, ಬಿಡಿ," ಎಂದು ಹೇಳಿ ಕಳುಹಿಸಿದರು ಆಮೇಲೆ ಇವರು, ಎದ್ದು ನಿಂತು ಅವರನ್ನು ಬರಮಾಡಿಕೊಳ್ಳಬಹುದು, ಎಂದು ನಿರ್ಣಯವಾಯಿತು. ಆಮೇಲೆ ಸ್ವಾಮಿಗಳ ಸಂದರ್ಶನ ನಡೆಯಿತು.

ಸುಮಾರು ಇಪ್ಪತ್ತು ವರ್ಷದ ಹಿಂದೆ ತಮಿಳುನಾಡ ವಾನಮಾಮಲೆಯ ಮಠದ ಸ್ವಾಮಿ ಮೈಸೂರಿಗೆ ದಯಮಾಡಿಸಿದರು. ಇವರು ತೆಂಗಲೆ ಸ್ವಾಮಿ ಸಂಪ್ರದಾಯ ಸ್ವಾಮಿಗಳನ್ನು ಜೀಯರ್ ಎಂದು ಕರೆಯುತ್ತದೆ ಆಗ ಮೈಸೂರಿನ ಪರಕಾಲಮಠದಲ್ಲಿ ಸ್ವಾಮಿಯಾಗಿದ್ದವರು ಪೂರ್ವಾಶ್ರಮದಲ್ಲಿ ಆತ್ಮಕೂರು ರಂಗಾಚಾರ್ ಎಂಬ ಘನವಿದ್ವಾಂಸರು. ವಾನಮಾಮಲೈ ಜೀಯರೂ ಈ ಸ್ವಾಮಿಗಳೂ ವ್ಯಾಸಂಗದ ದಿನಗಳಲ್ಲಿ ಸಹಪಾಠಿಗಳು. ತುಂಬ ಸ್ನೇಹದಿಂದ ಜೊತೆಗೆ ಬಾಳಿದ್ದವರು. ಪರಕಾಲಮಠ ವಡಗಲೈ ಮಠ. ಜೀಯರ್ ಮೈಸೂರಿಗೆ ಬರುತ್ತಾರೆಂದು ಸ್ವಾಮಿಗಳಿಗೆ ತಿಳಿಯಿತು. ಪರಕಾಲ ಮಠದ ಸ್ವಾಮಿ ಆ ನಗರದಲ್ಲಿಯೇ ಇರುವವರು. ಜೀಯರ್ ಇದನ್ನು ಬಲ್ಲರು.

ಇಬ್ಬರಿಗೂ ಒಬ್ಬರನ್ನೊಬ್ಬರು ನೋಡಬೇಕು ಎಂದು ಅಪೇಕ್ಷೆ. ಇವರು ಅವರಿಗೆ, ಅವರು ಇವರಿಗೆ, ತಮ್ಮ ಅಪೇಕ್ಷೆಯನ್ನು ತಿಳಿಸಿದ್ದಾಯಿತು ಮಠಕ್ಕೆ ದಯಮಾಡಿ ಎಂದು ಸ್ವಾಮಿ ಜೀಯರಿಗೆ ಕರೆಕೊಟ್ಟರು ಆ ಬಳಿಕ ಶಿಷ್ಯರಲ್ಲಿ ಸ್ವಾಮಿಗಳು ಒಬ್ಬರಲ್ಲೊಬ್ಬರು ಹೇಗೆ ನಡೆದುಕೊಳ್ಳಬೇಕು ಎಂಬ ಪ್ರಶ್ನೆ ಮೂಡಿತು ಇದು ಬಗೆಹರಿಯಲಿಲ್ಲ ಪ್ರಶ್ನೆ ಸ್ವಾಮಿ ಇಬ್ಬರ ಸನ್ನಿಧಿಗಳಿಗೆ ಹೋಯಿತು ತಾವು ಹೇಗೆ ನಡೆದುಕೊಂಡರೂ ಇಬ್ಬರಿಗೂ ಸಮಾಧಾನವೇ. ಆದರೆ ಶಿಷ್ಯರ ಎರಡು ತಂಡವನ್ನೂ ಒಪ್ಪಿಸುವುದು ಹೇಗೆ? ತಂಡಗಳ ಇಷ್ಟಕ್ಕೆ ವಿರೋಧವಾಗಿ ಸಾಮಿಗಳು ನಡೆಯುವಂತಿಲ್ಲ. ಕೊನೆಗೆ ಎದುರೆದುರು ಬಂದಾಗ ಹೇಗೆ ನಡೆದುಕೊಳ್ಳಬೇಕು ಎನ್ನುವುದು ನಿರ್ಣಯಕ್ಕೆ ಬಾರದ ಕಾರಣ ಸ್ವಾಮಿಗಳು ಒಬ್ಬರನ್ನೊಬ್ಬರು ನೋಡಲಿಲ್ಲ

ಒಮ್ಮೆ ಶ್ರೀವೈಷ್ಣವ ಪೀಠವೊಂದರ ಸ್ವಾಮಿ ಮೇಲುಕೋಟೆ ದೇವಾಲಯಕ್ಕೆ ದಯಮಾಡಿಸಿದರು. ಪೂಜ್ಯರು ಮತ್ತು ಸ್ವಾಮಿ ಎಂಬ ಕಾರಣದಿಂದ ಗೋಷ್ಠಿಯ ತಲೆಯಲ್ಲಿ ನಿಂತರು ಪೂಜೆಯ ಎಲ್ಲಾ ಕ್ರಮವೂ ನಡೆಯಿತು. ತೀರ್ಥ ಕೊಡಬೇಕು ಅರ್ಚಕರು ತೀರ್ಥದ ಪಾತ್ರೆಯೊಡನೆ ಗೋಷ್ಠಿಗೆ ಬಂದರು. ಅಲ್ಲಿ ಸ್ವಾಮಿಗಳ ಎದುರಲ್ಲಿ ಮೈಸೂರು ಪರಕಾಲಮಠದ ಪ್ರತಿನಿಧಿ ನಿಂತಿದ್ದರು. ಈ ದೇವಾಲಯದಲ್ಲಿ ಮೊದಲ ತೀರ್ಥ ಪರಕಾಲಮಠಕ್ಕೆ ಎನ್ನುವುದು ಕ್ರಮ ಪರಕಾಲಮಠದ ಶಿಷ್ಯರು, "ತಮ್ಮ ಪ್ರತಿನಿಧಿಗೆ ಮೊದಲ ತೀರ್ಥ, ಸ್ವಾಮಿಗಳಿಗೆ ಆಮೇಲೆ ಆಗಬೇಕು", ಎಂದರು. ಸ್ವಾಮಿ ಏನು ಹೇಳಿದರೊ. ಸ್ವಾಮಿಗಳ ಶಿಷ್ಯರು, "ಸ್ವಾಮಿ ಒಂದು ಗುರುಪೀಠದ ಹಿರಿಯರು, ಗುರುವೇ ಪ್ರತ್ಯಕ್ಷ ಎದುರಿಗೆ ಇರುತ್ತ, ಬೇರೆ ಮಠದ ಪ್ರತಿನಿಧಿ ಎಂಬ ಕಾರಣದಿಂದ ಬೇರ ಒಬ್ಬರಿಗೆ ಮೊದಲ ತೀರ್ಥ ಕೊಡುವುದು ಸರಿಯೇ? ಇದು ಗುರುಗಳ ವಿಷಯಕ್ಕೆ ಧಿಕ್ಕಾರವಲ್ಲವೆ?" ಎಂದು ಪ್ರಶ್ನೆ ಮಾಡಿದರು. ಇವರ ಮಾತು ಇವರದು. ಅವರ ಮಾತು ಅವರದು. ಎಷ್ಟು ಹೊತ್ತಾದರೂ ವಿವಾದ ಮುಗಿಯಲಿಲ್ಲ. ಕೊನೆಗೆ ದೇವಸ್ಥಾನದ ಮುಖ್ಯಾಧಿಕಾರಿ, ಮೈಸೂರಿಗೆ ಹೇಳಿಕಳುಹಿಸಿ, ಪರಕಾಲಸ್ವಾಮಿಗಳ ಅಪ್ಪಣೆ ಪಡೆದು, ಅವರು ಹೇಳಿದಂತೆ ನಡೆದುಕೊಳ್ಳುತ್ತೇನೆ ಎಂದರು ಒಂದು ಕಾರಿನಲ್ಲಿ ಒಬ್ಬ ಸೇವಕನನ್ನು ಮೈಸೂರಿಗೆ ಕಳುಹಿಸಿ, "ಮೊದಲ ತೀರ್ಥವನ್ನು ಅತಿಥಿ ಗುರುಗಳಿಗೆ ಕೊಡ

ಬಹುದು, ನಮ್ಮ ಪ್ರತಿಷ್ಠೆಗೆ ಆಪೇಲೆ ಕೊಡಿರಿ", ಎಂದು ಅಲ್ಲಿಂದ ಅಪ್ಪಣೆ ಬಂದಮೇಲೆ ಅದರಂತೆ ನಡೆದರು. ಒಂಪು ಕಾರು ಮೈಸೂರಿಗೆ ಹೋಗಿ ಹಿಂದಕ್ಕೆ ಬರುವಷ್ಟು ಹೊತ್ತೂ ಗೋಷ್ಠಿಯಲ್ಲಿ ಸಮ್ಮನೆ ನಿಂತಿತ್ತು. ಗೋಷ್ಠಿಯ ಮಾತೇನು, ತಿರುನಾರಾಯಣ ದೇವರ ಮೂರ್ತಿಯೇ ಸುಮ್ಮನೆ ನಿಂತಿತ್ತು.

ಇದಿಷ್ಟೂ ಬ್ರಾಹ್ಮಣ ಗುರುಪೀಠಗಳ ಮಾತು. ಶಿವಾಚಾರದವರ ಗುರು ಪೀಠಗಳಲ್ಲಿ ಇಂಥವೇ ಜಗಳಗಳಿವೆ. ಸ್ವಾಮಿಗಳಲ್ಲಿ ಕೆಲವರು ತಮ್ಮ ಸ್ಥಾನಗಳ ಗೌರವವನ್ನು ಪಾಲಿಸಿಕೊಂಡಿಲ್ಲ ಎಂಬ ಮಾತನ್ನು ಕೇಳಿದ್ದೇನೆ. ಆದರೆ ಈ ವಿಷಯದಲ್ಲಿ ನಾನು ಏನನ್ನಾದರೂ ಹೇಳಹೋಗುವುದಿಲ್ಲ. ವೀರಶೈವರಲ್ಲಿ ಜಾಣ ರಾದ ಜನ ಪರಿಸ್ಥಿತಿಯನ್ನು ಬಲ್ಲವರು ಅನೇಕರು ಇದ್ದಾರೆ. ಅವರಲ್ಲಿ ಕೆಲವರು ಅದನ್ನು ತಮ್ಮ ಕಥೆಗಳಲ್ಲಿ, ಇತರ ಬರಹಗಳಲ್ಲಿ, ವರ್ಣಿಸಿಯೂ ಇದ್ದಾರೆ.

ಮುಖ್ಯವಾಗಿ ನಮ್ಮ ಸಮಾಜ ಗ್ರಹಿಸಬೇಕಾದದ್ದು "ಸಂನ್ಯಾಸ ಸುಲಭವಲ್ಲ," ಎನ್ನುವುದು. ಈಗ ನಲವತ್ತು ವರ್ಷಗಳ ಹಿಂದೆ ಸ್ಮಾರ್ತ ಸಂಸಾರಿ ಒಬ್ಬರು ತನ್ನ ಹೆಂಡತಿ ಬೆಂಡೇಕಾಯಿ ಹುಳಿಯನ್ನು ಮಾಡಿ ಬಡಿಸಲಿಲ್ಲ ಎಂಬ ಕಾರಣದಿಂದ ಕೋಪಿಸಿಕೊಂಡು ಹೊರಟುಹೋಗಿ ಸಂನ್ಯಾಸಿಯಾಗಿ, ಕೆಲವೇ ಕಾಲದ ಬಳಿಕ ನೆಂಟರ ಮನೆಯಲ್ಲಿ ಆಕೆ ಆ ಹುಳಿಯನ್ನು ಮಾಡಿ ಬಡಿಸಿದಾಗ ಹಟಮಾಡಿದಾತ ದೊಡ್ಡವರ ಮಾತಿಗೆ ಕಟ್ಟುಬಿದ್ದು ಮತ್ತೆ ಸಂಸಾರಿಯಾದರು. ಇದನ್ನು ನಾನು ಕಥೆಯಾಗಿ ಬರೆದೆನು. ಅದಕ್ಕೆ 'ಸಂನ್ಯಾಸ ಅಲ್ಲದ ಸಂನ್ಯಾಸ' ಎಂದು ಹೆಸರುಕೊಟ್ಟೆನು. ಅದನ್ನು ಓದಿದ ಒಬ್ಬರು ಇದು ನಡೆದಿರಲಾರದು ಎಂಬ ಅರ್ಥದ ಒಂದು ಪತ್ರವನ್ನು ಬರೆದರು. ಅವರ ಶಂಕೆ ಸಹಜ, ಇರುತ್ತ ಸಂಗತಿ ನಡೆದದ್ದು ದಿಟ. ನನಗೆ ಅದನ್ನು ನನ್ನ ಲಾಯರ್ ಮಿತ್ರರು ಬಿ. ಎನ್. ರಾಘವಯ್ಯನವರು ಹೇಳಿದ್ದರು. ಹಿರಿಯರಾದ ಶ್ರೀ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳು ನನ್ನ ಸ್ನೇಹಿತರಾದ ಶ್ರೀ ತುರುವೇಕೆರೆ ವಿಠ್ಠಲ ನರಸಿಂಹಯ್ಯನವರಿಗೆ ಇದೇ ಸಂಗತಿಯನ್ನು ಹೇಳಿದ್ದರಂತೆ. ಅವರು ಸಹ ಸಂಗತಿಯನ್ನು ತಾವೂ ತಿಳಿದದ್ದುಂಟು ಎಂದು ಹೇಳಿ ಶ್ರೀ ರಾಘವಯ್ಯ ನವರ ಹೇಳಿಕೆಯನ್ನು ಸ್ಥಿರಪಡಿಸಿದರು.

ಸಂನ್ಯಾಸಿಗಳು ತಪ್ಪಿ ನಡೆದು, ಆಶ್ರಮಕ್ಕೆ ಕೆಟ್ಟ ಹೆಸರು ಬಂದಿರುವುದು ಒಮ್ಮೆ ಅಲ್ಲ, ಇಮ್ಮೆ ಇಲ್ಲ, ಇದು ತೀರ ಇಂದಿನ ಮಾತೂ ಅಲ್ಲ. ಈ ವಿಷಯ

ವಚನಗಳಲ್ಲಿ ಕಾಣುತ್ತದೆ. ನಿಷ್ಠುರವಾದಿಯಾಗಿದ್ದ ಚೆನ್ನಬಸವಣ್ಣನವರು ಆ ಹೊತ್ತಿನ ಜೀವನವನ್ನು ನೋಡಿ, "ನಿರಿ ನೋಕಿದೊಡ ಯತಿ ಇಲ್ಲ," ಎಂದರು ಆಶ್ರಯ ಇರಲೇಬೇಕು ಎನ್ನುವವರು ಈ ನಿತ್ಯಸತ್ಯವನ್ನು ಮನಸ್ಸಿನಲ್ಲಿ ಇಟ್ಟು ಕೊಂಡು ಆಶ್ರಮ ಸ್ವೀಕಾರವನ್ನು ಕುರಿತು ಯುಕ್ತವಾದ ಕ್ರಮಗಳನ್ನು ನಿಯಮಿಸಬೇಕು

ಗುರುಗಳಿಗೆ ಶಿಷ್ಯಮನೆತನಗಳು ಕೊಡಬೇಕಾದ ಕಾಣಿಕೆಯ ವಿಷಯ ಒಮ್ಮೆ ಚರ್ಚೆಗೆ ಬಂದದ್ದು ನನಗೆ ಜ್ಞಾಪಕವಿದೆ. ಆ ಬಾರಿ ಸ್ವಾಮಿ ಬೆಂಗಳೂರಿಗೆ ಬಂದಾಗ ಮರಮುದ್ರೆಯ ಹಿರಿಯರು ಸರಕಾರದ ಅಧಿಕಾರದಲ್ಲಿರುವ ಶಿಷ್ಯರು ಸ್ವಾಮಿಗಳಿಗೆ ಒಂದು ತಿಂಗಳ ಸಂಬಳವನ್ನು ಒಪ್ಪಿಸಿಬಿಡಬೇಕು ಎಂದು ಒಬ್ಬೊಬ್ಬರಿಗೂ ತಿಳಿಸಿದರಂತೆ ಕಡಮೆ ಸಂಬಳದ ಜನಕ್ಕಾದರೂ ಇದುಕಷ್ಟವೇ. ಇದರ ಮೇಲೆ ಸಂಬಳಕ್ಕೂ ಶಿಷ್ಯತನಕ್ಕೂ ಏನೂ ಸಂಬಂಧ ಇಲ್ಲ. ಶಿಷ್ಯರಲ್ಲಿ ಒಬ್ಬೊಬ್ಬರನ್ನು ಕುರಿತೂ ಅವರ ವರ್ಷದ ವರಮಾನ, ಅದರ ಹನ್ನೆರಡನೇ ಒಂದು ಭಾಗ, ಎಷ್ಟು ಎಂದು ಸ್ವಾಮಿಗಳು ನಿರ್ಧರಿಸುವುದು ಸಾಧ್ಯವೇ ? ದೊಡ್ಡ ಸಂಬಳದ ಅಧಿಕಾರಿಗಳು ಒಂದು ತಿಂಗಳ ಸಂಬಳವನ್ನು ಒಟ್ಟಿಗೆ ಒಪ್ಪಿಸು ವುದು ಸಾಧ್ಯವೇ ? ನಾನು ಕಂಡಂತೆ ಶ್ರೀ ಆರ್ ರಂಗರಾಯರು, "ಇಷ್ಟು ಹಣವನ್ನು ಸ್ವಾಮಿಗಳು ಕೇಳಬಾರದು, ನಮ್ಮಿಂದ ಆದಷ್ಟು ನಾವು ಒಪ್ಪಿಸು ತ್ತೇವೆ, ಭಕ್ತಿಯನ್ನು ಕಾಣಿಕೆಯಿಂದ ಅಳೆಯಬೇಡಿ," ಎಂದು ಬೇಡಿಕೆಯನ್ನು ಸಲ್ಲಿಸಿದರು ಮರಮುದ್ರೆಯ ಜನ ಬಡಪೆಟ್ಟಿಗೆ ಇದಕ್ಕೆ ಒಪ್ಪಲಿಲ್ಲ. "ಸ್ವಾಮಿಗಳ ಅಪ್ಪಣೆ, ಅದನ್ನು ವಿರೋಧಿಸಿ ಶಿಷ್ಯರು ಮಾತನಾಡುವುದೇ ? ಇದು ಹೇಗೆ ? ಸಲ್ಲ," ಎಂದರು. ಒಟ್ಟಿನಲ್ಲಿ ಸರಕಾರದಲ್ಲಿ ದೊಡ್ಡ ಅಧಿಕಾರದಲ್ಲಿದ್ದ ಒಂದು ಹತ್ತು ಜನ ಜೊತೆಯಾಗಿ ನಿಂತು, "ಆದದ್ದಾಗಲಿ, ಈ ಒಂದು ತಿಂಗಳ ಸಂಬಳದ ಮಾತು ನಮಗೆ ಒಪ್ಪಿಗೆ ಇಲ್ಲ," ಎಂದು ತಿಳಿಸಿಬಿಟ್ಟರು ಇದರಲ್ಲಿ ನನ್ನ ಹಿರಿಯ ಮಿತ್ರರು ನವರತ್ನ ರಾಮರಾಯರೂ ಒಬ್ಬರು, ನವರತ್ನ ಮನೆತನದ ಒಬ್ಬರು ಹಿರಿಯರು ಹಿಂದೆ ಮಠದ ಸ್ವಾಮಿಗಳಾಗಿದ್ದವರು. ಮಠ ಈ ಮನೆತನಕ್ಕೆ ವಿಶೇಷ ಮರ್ಯಾದೆ ತೋರಿಸುತ್ತಿತ್ತು. ಪ್ರಮುಖರಾದ ಹಲವು ಜನ ಅಡ್ಡಿ ಮಾಡಿದ್ದರಿಂದ ಸಂಬಳ ಎನ್ನುವ ಈ ಮಾತು ನಿಂತಿತು.

ಈ ಮಠವನ್ನು ಕುರಿತು ಆಮೇಲೆ ಸ್ವಲ್ಪ ಕಾಲದಲ್ಲಿ ಜನ ಬಹಳವಾಗಿ

ಹೇಳಿಕೊಂಡ ಒಂದು ಸಂಗತಿ ಸ್ವಾಮಿಗಳ ಉಪದೇಶವನ್ನು ಕೇಳಿ ಒಬ್ಬ ಅಯ್ಯಂಗಾರ್ ತರುಣ ವಿಶಿಷ್ಟಾದ್ವೈತವನ್ನು ಬಿಟ್ಟು ದ್ವೈತಿ ಆದ ಎನ್ನುವುದು. ಇದನ್ನು ಹೇಳುವವರು ಇದು ದ್ವೈತ ಸಿದ್ಧಾಂತದ ಬಹು ದೊಡ್ಡ ಒಂದು ವಿಜಯ ಎಂಬಂತೆ ಮಾತನಾಡುವರು ಆ ತರುಣ ವಿಶಿಷ್ಟಾದ್ವೈತ ಸಿದ್ಧಾಂತ ವನ್ನು ಎಷ್ಟು ತಿಳಿದಿದ್ದ, ದ್ವೈತ ಸಿದ್ಧಾಂತದಲ್ಲಿ ಎಷ್ಟನ್ನು ಗ್ರಹಿಸಿ ಇದಕ್ಕೆ ಬಂದಿದ್ದ, ಇದು ಯಾರಿಗೂ ತಿಳಿಯದು ಒಂದು ಕಾಲದಲ್ಲಿ ಒಂದು ಸಿದ್ಧಾಂತದ ಅನುಯಾಯಿಗಳು ಎಷ್ಟೋ ಜನ ಮತ್ತೊಂದು ಸಿದ್ಧಾಂತವನ್ನು ಒಪ್ಪಿಕೊಂಡಿರ ಬೇಕು. ಮತ ಅಷ್ಟು ಮುಖ್ಯವಲ್ಲವಾಗಿ ಇಂಥ ವ್ಯಾಪಾರ ಈಚೆಗೆ ನಿಂತು ಹೋಗಿದೆ. ಹಿಂದೂ ಧರ್ಮವನ್ನು ಬಿಟ್ಟು ಎಷ್ಟೋ ಸಂಖ್ಯೆಯ ಜನ ಕ್ರೈಸ್ತ ರಾಗುತ್ತಿರುವ ಕಾಲದಲ್ಲಿ ಒಬ್ಬ ವಿಶಿಷ್ಟಾದ್ವೈತಿ ದ್ವೈತಿ ಆದ ಎನ್ನುವುದು ನಮ್ಮ ಜನಕ್ಕೆ ಬಹಳ ಗಮನಾರ್ಹವಾದ ವ್ಯಾಪಾರ ಎಂದು ಕಂಡದ್ದು ಒಂದು ಸೋಜಿಗ

ಇಷ್ಟೆಲ್ಲ ಹೇಳಿದ ಮೇಲೆ ಒಂದು ಮಾತನ್ನು ಅವಶ್ಯ ಒಪ್ಪಿಕೊಳ್ಳಬೇಕು ಎಷ್ಟೋ ಕಷ್ಟವಾದ ನಿಯಮಗಳನ್ನು ಸಹಿಸಿ ಕೆಲವರು ಸ್ವಾಮಿಗಳು ಶುಚಿಯಾದ ಬಾಳನ್ನು ಬಾಳಿ ಸಮಾಜದ ಕ್ಷೇಮಕ್ಕೆ ಸಾಧಕವಾದ ಕಾರ್ಯಕ್ರಮಗಳನ್ನು ಕೈಗೊಂಡು ನಡೆಸಿ, ಆಶ್ರಮಕ್ಕೆ ಭೂಷಣರಾಗಿ ಬೆಳಗಿದ್ದಾರೆ ನನಗೆ ತಿಳಿದ ಇಬ್ಬರ ಹೆಸರನ್ನು ನಾನು ಹೊಗಳಬೇಕು. ಉಡುಪಿಯ ಪೇಜಾವರ ಶ್ರೀ ಶ್ರೀಗಳು, ಶ್ರೀ ವಿಶ್ವೇಶ್ವರತೀರ್ಥ ಶ್ರೀಪಾದಂಗಳವರು ಆದರ್ಶ ಸಂನ್ಯಾಸ ಜೀವನವನ್ನು ನಡೆಸಿ ಹಿಂದೂ ಸಮಾಜದ ಕ್ಷೇಮಕ್ಕಾಗಿ ಅಮೂಲ್ಯಸೇವೆಯನ್ನು ಸಲ್ಲಿಸುತ್ತಿದ್ದಾರೆ ಸಿದ್ಧಗಂಗೆಯ ಶ್ರೀ ಶಿವಕುಮಾರ ಸ್ವಾಮಿಗಳವರು ಶಿಷ್ಯರ ಜೀವನದಲ್ಲಿ ಪ್ರಭಾವವಂತರಾಗಿ ಬೆಳೆದು ತಮ್ಮ ಪೀಠದವರಮಾನವನ್ನು ನೂರು ಪಟ್ಟು ಹೆಚ್ಚಿಸಿ ಅದನ್ನು ಶಿಷ್ಯರ ಕ್ಷೇಮಕ್ಕಾಗಿ, ಎಲ್ಲ ರೀತಿಯ ವಿದ್ಯೆ ನೀಡುವ ಸಂಸ್ಥೆಗಳ ನಿರ್ಮಾಣಕ್ಕಾಗಿ, ಬಳಸಿ ಸಂನ್ಯಾಸಿ ಸಮುದಾಯಕ್ಕೆ ಮೇಲುಪಂಕ್ತಿ ಯಾಗಿದ್ದಾರೆ. ಇಂಥ ಸ್ವಾಮಿಗಳು ಇತರರೂ ಉಂಟು ಎಂದು ಕಾಣುತ್ತದೆ, ಕೆಟ್ಟಿದೆನ್ನುವ ಈ ಕಾಲದಲ್ಲಿ ಸಹ ಸನಾತನ ಧರ್ಮ ಇಂಥ ಶ್ರೇಷ್ಠ ಪುರುಷರನ್ನು ಪಡೆದಿದೆ ಎನ್ನುವುದು ಅದು ಈಗಲೂ ಜೀವಂತವಾಗಿದೆ ಎನ್ನುವುದನ್ನು ಸಿದ್ಧಾಂತ ಮಾಡುತ್ತದೆ.

ಇಲ್ಲಿ ಮುಖ್ಯ ವಿಷಯ ಆಶ್ರಮಗಳ ವ್ಯವಸ್ಥೆಯನ್ನು ನಿರ್ಮಿಸಿದ

ಹಿರಿಯರು ಆ ವ್ಯವಸ್ಥೆ ಹೇಗೆ ನಡೆಯಬೇಕು ಎಂದು ಅಪೇಕ್ಷಿಸಿದರೋ ಹಾಗೆ ಅದು ತೃಪ್ತಿಕರವಾಗಿ ನಡೆಯುತ್ತಿಲ್ಲ ಎನ್ನುವುದು ಇದು ವ್ಯವಸ್ಥೆ ಮಾಡಿದವರಿಗೆ ತೋಚಿರಲಿಲ್ಲ ಎಂದು ನಾವು ಎಣಿಸಬೇಕಾಗಿಲ್ಲ ಬುದ್ಧ ಗುರು ಆರಂಭದಲ್ಲಿ ಬೌದ್ಧ ದೀಕ್ಷೆ ಪುರುಷನಿಗೆ ಮಾತ್ರ ಕೊಡತಕ್ಕದ್ದು ಎಂದು ನಿರ್ಧರಿಸಿದ್ದು, ತಾಯಿ ಬೇಡಿಕೊಂಡ ಕಾರಣ ಸ್ತ್ರೀಯರಿಗೂ ಕೊಡಬಹುದು ಎಂದು ಒಪ್ಪಿದ್ದು, ಇತಿಹಾಸ. ಒಪ್ಪಿಗೆ ಕೊಡುತ್ತ ಗುರು, "ಪುರುಷರಿಗೆ ಮಾತ್ರ ದೀಕ್ಷೆ ಆಗಿದ್ದರೆ ಧರ್ಮ ಒಂದು ಯುಗ ನಡೆಯಬಹುದಾಗಿತ್ತು ಸ್ತ್ರೀಯರಿಗೂ ಕೊಡಬಹುದು ಎಂದುದರಿಂದ ಅದರ ಆಯುಸ್ಸು ಅರ್ಧ ಆಯಿತು," ಎಂದದ್ದೂ ಇತಿಹಾಸವೇ ಮನುಷ್ಯರ ಸ್ವಭಾವವನ್ನು ತಕ್ಕಷ್ಟು ಬಲ್ಲ ಯಾರಾದರೂ ಇದು ಸಹಜ ಎಂದು ಒಪ್ಪುವರು ನೂರು ಜನ ಭಿಕ್ಷುಗಳಲ್ಲಿ ಒಬ್ಬ ಮನಸ್ಸು ಸೋತರೂ, ನೂರು ಜನ ಭಿಕ್ಷುಣಿಯರಲ್ಲಿ ಒಬ್ಬಳ ಮನಸ್ಸು ಸೋತರೂ ಆಶ್ರಮದ ವ್ಯವಸ್ಥೆ ಕೆಟ್ಟು ಹೋಯಿತು ಈಗಲೂ ಹಿಂದೂ ಸಮಾಜದ ಹಿರಿಯರು ಈ ವಿಷಯವನ್ನು ಮನಸ್ಸಿಗೆ ತಂದುಕೊಳ್ಳಬೇಕು. ಬಾಲಸಂನ್ಯಾಸ ಸಿದ್ಧಿಸುವುದು ಎಷ್ಟೋ ಸಾವಿರದಲ್ಲಿ ಒಬ್ಬರಿಗೇ ಎನ್ನುವುದನ್ನು ಗ್ರಹಿಸಿ, ಇಂಥ ಸಂನ್ಯಾಸವನ್ನು ಕೊಡುವುದು ಕೂಡದು ಎಂದು ನಿರ್ಣಯಿಸುವುದು ಕ್ಷೇಮವಾದೀತು ಲಕ್ಷದಲ್ಲಿ ಒಬ್ಬರು ಆದಿಶಂಕರರಂತೆ ತಾವೇ ಬಾಲ್ಯದಲ್ಲಿ ಸಂನ್ಯಾಸಿ ಆಗುವುದಾದರೆ ಆಗಲಿ, ಉಡುಪಿಯ ಮಠಗಳಂತೆ ಸಾಲಾಗಿ ಎಂಟು ಮಠಗಳಿಗೆಂದು ಬಾಲಕರಿಗೆ ಸಂನ್ಯಾಸ ಕೊಟ್ಟು ಗುರು ಜನರನ್ನು ನಿಯಮಿಸುವ ಇಂದಿನ ಏರ್ಪಾಡು ಸರಿಯಾಗಿ ನಡೆಯುವುದಿಲ್ಲ, ಎನ್ನುವುದನ್ನು ಮನಗಾಣಬೇಕು. ಈಗ ಇರುವ ಸ್ವಾಮಿಗಳ ಮಾತನ್ನು ಹೇಳುವುದು ನನ್ನ ಕೆಲಸವಲ್ಲ. ನಾವು ಕಂಡಂತೆ ಉಡುಪಿಯ ಮಠದ ಸ್ವಾಮಿಗಳು ಒಬ್ಬರು ಸಂನ್ಯಾಸವನ್ನು ಸಾಧಿಸಲಾಗದೆ ಜೀವ ಕಳೆದು ಕೊಂಡರು. ಮತ್ತೊಬ್ಬರು ಈಚೆಗೆ ಇದೇ ಕಾರಣದಿಂದ ಸಂನ್ಯಾಸ ಆಶ್ರಮ ವನ್ನು ತ್ಯಜಿಸಿ, ಸಾಮಾನ್ಯ ಜೀವನಕ್ಕೆ ಹಿಂತಿರುಗಿ ಗೃಹಸ್ಥರಾಗಿ ಜೀವನ ನಡೆಸು ತ್ತಿದ್ದಾರೆ ಬಾಲಸಂನ್ಯಾಸ ಇರಲಿ ಎನ್ನುವುದಾದರೆ ಹೆರವರ ಅಪೇಕ್ಷೆಯಂತೆ ಬಾಲ್ಯದಲ್ಲಿ ಸಂನ್ಯಾಸವನ್ನು ಒಪ್ಪಿಕೊಂಡ ಸ್ವಾಮಿ ತನಗೆ ಯುಕ್ತ ಕಂಡಾಗ ಸಂನ್ಯಾಸವನ್ನು ತ್ಯಜಿಸಿ ಸಾಮಾನ್ಯ ಜೀವನಕ್ಕೆ ಹಿಂದಿರುಗಬಹುದು ಎಂಬ ವ್ಯವಸ್ಥೆಯನ್ನು ಒಪ್ಪಿಕೊಳ್ಳಬೇಕು.

೯

## ಮೂಢ ಭಯಗಳು

ನಮ್ಮ ಧರ್ಮದ ಮೂಲಭಾವನೆಗಳಿಂದ ಸಹಜವಾಗಿ ಬೆಳೆದು ದಿನದ ಬಾಳುವೆಯಲ್ಲಿ ಕಷ್ಟಕ್ಕೆ ಕಾರಣವಾಗಿರುವ ತಿಳುವಳಿಕೆ, ನಂಬಿಕೆ, ಇವನ್ನು ಹೊಸ ಕಾಲದ ದೃಷ್ಟಿಯಿಂದ ಪರಿಶೀಲಿಸುವುದು ಆವಶ್ಯಕ.

ನಮ್ಮ ಜನದಲ್ಲಿ ಬಹುಕಾಲದಿಂದ ಬೆಳೆದು ಬಂದಿರುವ ಒಂದು ನಂಬಿಕೆ ದೆವ್ವಗಳನ್ನು ಕುರಿತದ್ದು. ದೆವ್ವ ಎನ್ನುವುದು ಮೂಲತಃ ತೀರಿಕೊಂಡ ಒಬ್ಬ ವ್ಯಕ್ತಿಯ ಜೀವ. ದೇಹವನ್ನು ಬಿಟ್ಟುಹೋದರೂ ಅದು ಪೂರ್ವದ ತನ್ನ ವಾಸದ ಸ್ಥಳದಲ್ಲಿ ಸುಳಿಯುತ್ತ ಹಿಂದಿನ ತನ್ನ ಪರಿಚಿತರೊಂದಿಗೆ, ಇತರರಿಗೆ, ತಾನು ಇರುವುದನ್ನು ತೋರಿಸುವ ಚೇಷ್ಟೆಗಳನ್ನು ಮಾಡುತ್ತದೆ ಎನ್ನುವುದು ನಂಬಿಕೆ. ದೆವ್ವ ಸಾಮಾನ್ಯವಾಗಿ ಕಣ್ಣಿಗೆ ಕಾಣುವುದಿಲ್ಲ ; ಒಮ್ಮೊಮ್ಮೆ, ಒಂದು ರೀತಿಯ ಜನಕ್ಕೆ ಕಾಣುತ್ತದೆ. ಈ ರೀತಿಯ ಜನದ ಕಣ್ಣು ಎಲ್ಲರ ಕಣ್ಣಿನಂತೆ ಅಲ್ಲ, ಒಂದು ವಿಶಿಷ್ಟ ಶಕ್ತಿಯ ಕಣ್ಣು, ಇದು ನಂಬಿಕೆಯ ಒಂದು ಭಾಗ. ಮಕ್ಕಳಿಗೆ ಚಿಕ್ಕಂದಿನಲ್ಲಿ ಹಿರಿಯರು ಆಟಕ್ಕೆಂದೋ, ದಿಟವಾಗಿ ಹೆದರಿಸಬೇಕೆಂದೋ, "ಗುಮ್ಮ ಬರ್ತಾನೆ, ಹಾಗ ಹೀಗ ಮಾಡ್ತಾನೆ," ಎಂತ ಹೇಳುವುದುಂಟು. ಗುಮ್ಮ ಇಲ್ಲ ಎಂದು ಈ ಹಿರಿಯರು ಬಲ್ಲರು. ಇವರಿಗೆ ಅದು ಆಟದ ಮಾತು. ಮಗುವಿಗೆ ಅದು ಆಟದ ಮಾತಾಗುವುದಿಲ್ಲ, ದಿಟವೇ ಆಗುತ್ತದೆ. ಗುಮ್ಮ ದಿಟದ ಒಂದು ವ್ಯಕ್ತಿ, ತೋಚಿದಾಗ ಬಂದು ಕಾಡುವವನು, ಆಗುತ್ತಾನೆ. ಸಾಮಾನ್ಯವಾಗಿ ಕೆಲವು ವರುಷ ಬೆಳೆದ ಮೇಲೆ ಮಕ್ಕಳಿಗೆ ಗುಮ್ಮದ ಭಯ ತಾನಾಗಿ ಮರೆ ಆಗುತ್ತದೆ. ಸುಮಾರು ಇದೇ ವಯಸ್ಸಿನಲ್ಲಿ ಮಗು ಜನದ ಬಾಯಲ್ಲಿ ದೆವ್ವದ ವಿಷಯವನ್ನು ಕೇಳುತ್ತದೆ. ನಾನು ಹುಡುಗನಾಗಿದ್ದಾಗ ನನಗೆ ಭಯಕ್ಕೆ ಕಾರಣವಾಗಿ ಮೂರು ಇಂಥ ಮೂರ್ತಿಗಳು ಇದ್ದವು. ನಾಸ್ತಿಯಲ್ಲಿ ನಮ್ಮ ಮನೆಯ ಎದುರು ಸಾಲಿನಲ್ಲಿ ಬರಿದಾಗಿದ್ದ ಒಂದು ಮನೆಯಲ್ಲಿ ದೆವ್ವ ಇದೆ ಎನ್ನುವುದು ಜನರ ಮಾತು. ಆ ಮನೆಯಲ್ಲಿ ವಾಸವಾಗಿದ್ದ ಜನರಲ್ಲಿ ಯಾರೋ ತೀರಿಕೊಂಡು, ಉಳಿದವರು ಏಕೋ ಏನೋ ಊರನ್ನು ಬಿಟ್ಟು ಹೊರಟು ಹೋಗಿದ್ದರು. ಹಲವು ವರ್ಷ ಅವರು ಹಿಂದಿರುಗಿ ಬರಲಿಲ್ಲ.

ಮನೆಯಲ್ಲಿ ಎಂದೋ, ಏನೋ, ಏಕೋ, ಸಮ್ಮ ಆದಂತಾಗಿ ಅದರಲ್ಲಿ ದೆವ್ವ ಸುಳಿಯುತ್ತಿದೆ, ಎಂದು ಯಾರಿಗೋ ತೋಚಿತು. ಅವರು ಅದನ್ನು ಹೇಳಿದರು. ಜನ ಅದನ್ನು ನಂಬಿದರು ಮನಯಲ್ಲಿ ರಾತ್ರಿ ದೆವ್ವ ಒಳಗೆ ಬಂದು ಕೂತಿರುತ್ತದೆ, ಕಾಲನ್ನು ಹಿಂದುಮುಂದಾಗಿ ಹಿಂದಕ್ಕೆ ಒಲೆ ಒಳಕ್ಕೆ ಇಟ್ಟಿರುತ್ತದೆ, ಎಂದು ತಾನು ಕಣ್ಣಿಂದ ಕಂಡ ಸಂಗತಿ ಎಂಬಂತೆ ಯಾರೋ ಒಬ್ಬರು ಹೇಳಿದರು ಇದು ಮನೆಯ ಕಥೆಯೇ ಆಗಿಬಿಟ್ಟಿತು. ನನಗೆ ಇದು ತೀರ ದಿಟ ಆದ ವಿಷಯ ಆಗಿ ನಿಂತಿತು.

ಹೊಂಗೇನಹಳ್ಳಿಯಿಂದ ಶಿವಾರಪಟ್ಟಣಕ್ಕೆ ಹೋಗುತ್ತ ದಾರಿಯಲ್ಲಿ ಮಾರಕ್ಕನ ತೋಪು ಎಂದು ಕರೆಯುತ್ತಿದ್ದ ಒಂದು ತೋಪು ಇತ್ತು. ಅದರ ತುಂಬ ಮಾವಿನ ಮರ ಅದರ ಆತ್ತಣ ಕೊನೆಗೆ ಒಂದು ಕೊಳ. ಆದರಲ್ಲಿ ಒಬ್ಬ ಹೆಂಗಸು ಎಂದೋ ಮುಳುಗಿ ಸತ್ತಿದ್ದಳು ಎಂದು ಕಥೆ. ತೋಪಿನಲ್ಲಿ ಒಂದು ದೆವ್ವ ಇದೆ ಎಂದು ನಂಬಿಕೆ.

ಇದರ ಮಾತನ್ನು ನನ್ನ 'ಭಾವ' ಪುಸ್ತಕದಲ್ಲಿ ನನ್ನ ಎಳೆತನದ ಬಾಳಿನ ವರ್ಣನೆಯಲ್ಲಿ ಹೇಳಿದ್ದೇನೆ. ಮಾರಕ್ಕನ ತೋಪಿನ ದೆವ್ವ ನನಗೆಂದೂ ಕಾಣಲಿಲ್ಲ. ಆದರೆ ನಾನು ಆ ದಿನಗಳಲ್ಲಿ ಎಂದೂ ಅದಕ್ಕೆ ಹೆದರಿಯೇ ನಡೆದೆನು.

ಹತ್ತು ವರ್ಷದ ಹಿಂದ ಶಿವಾರಪಟ್ಟಣದ ಶಾಲೆಯ ಒಂದು ಉತ್ಸವದಲ್ಲಿ ನಾನು ಬಾಲ್ಯದ ಈ ಸಂಗತಿಯನ್ನು ನೆನೆದು ಮಾರಕ್ಕನ ತೋಪಿನಲ್ಲಿ ಒಂದು ದೆವ್ವ ಇದೆ ಎಂದು ಯಾರೋ ಹೇಳುತ್ತಿದ್ದರು ಎಂದಾಗ ಸಭೆಯಲ್ಲಿ ಕುಳಿದ್ದ ಒಬ್ಬರು, 'ಈಗಲೂ ಇದೆ, ಸ್ವಾಮಿ' ಎಂದರು. ಅಂದಿನ ಜನ ನೂರರಲ್ಲಿ ಎಷ್ಟೆತ್ತೋ ಎಂಬತ್ತೋ ಈಗ ಇಲ್ಲ. ದೆವ್ವ ಮಾತ್ರ ಅಮರವಾಗಿ ನಿಂತಿದೆ.

ಹೊಂಗೇನಹಳ್ಳಿಯಲ್ಲಿ ನಮ್ಮ ಶಾನುಭೋಗರು ಸ್ವಲ್ಪ ದೂರದ ತಮ್ಮ ಹೊಲದಲ್ಲಿ ಒಂದು ಬಾವಿಯನ್ನು ತೋಡಿಸಿದರು ಕಲ್ಲು ಕಟ್ಟಡ ಕಟ್ಟಿಸಿ ಅದನ್ನು ಒಳ್ಳೆಯ ಕೊಳ ಮಾಡಿದರು ಸುತ್ತಿನ ನೆಲ ಚೌಳು ನೆಲ, ಆದ್ದರಿಂದ ಅದನ್ನು ಜನ ಚೌಳು ಬಾವಿ ಎಂದು ಕರೆದರು ಆ ದಿನದಲ್ಲಿ ಬಾವಿಯ ನೀರು ತಿಳಿ ಎಂದರೆ ತಿಳಿ, ನೀಲವಾಗಿ ಕಾಣುವುದು. ಅದಕ್ಕೆ ಹೋಗುವ ದಾರಿಯಲ್ಲಿ ತಕ್ಕಷ್ಟು ದೊಡ್ಡದಾದ ಒಂದು ಮರ , ಕೊಂಬ ಬಹಳ ಇಲ್ಲ , ನೋಡುವವರ ಕಣ್ಣಿಗೆ ಅಷ್ಟೇನೂ ಅಂದವಾಗಿರಲಿಲ್ಲ. ಯಾರೋ, ಎಂದೋ ಆ ದಾರಿಯಲ್ಲಿ

ಬರುತ್ತ ಅದು ಜಡೆ ಬಿಟ್ಟುಕೊಂಡು ನಿಂತಿರುವ ಒಬ್ಬ ಸಂನ್ಯಾಸಿಯಂತೆ ಕಂಡಿತು ಎಂದು ಎಂದುಕೊಂಡ, ಹೆದರಿದ ಹೀಗಾಯಿತು ಎಂದು ಜನಕ್ಕೆ ಹೇಳಿದ. ಅಂದಿನಿಂದ ಅದು ಮುನೀಶ್ವರನ ಮರ ಆಯಿತು. ಸಂಜ ಆದಮೇಲೆ ಅದರ ಬಳಿ ಯಾರೂ ಒಬ್ಬರೇ ಹೋಗುತ್ತಿರಲಿಲ್ಲ

ಆ ಮೇಲಿನ ದಿನಗಳಲ್ಲಿ ಮಾಸ್ತಿಯ ನಮ್ಮ ಮನೆಯ ಪಕ್ಕದ ನಮ್ಮ ದೊಡ್ಡಪ್ಪನವರ ಮನೆಯಲ್ಲಿ ಅವರ ಎರಡನೆಯ ಹೆಂಡತಿ ಒಂದು ದಿನ ಸಂಜೆ ಏನೋ ಆಗಿ ಹುಚ್ಚುಹುಚ್ಚಾಗಿ ಕೂಗುವುದಕ್ಕೆ ಆರಂಭಿಸಿದರು. ಮನೆಯವರಿಗೆಲ್ಲ ತುಂಬ ಭಯವಾಯಿತು "ಯಾಕಮ್ಮಾ, ಏನಾಯಿತು?" ಎಂದು ಹಿರಿಯರು ಹತ್ತಿರ ಹೋಗಿ ಕೇಳಿದರು ಹರುಕು ಮುರುಕು ಮಾತಿನ ಉತ್ತರದಲ್ಲಿ ಆಕೆ, ತನ್ನ ಸವತಿ, ಮೊದಲ ಹೆಂಡತಿ ತನಗೆ ಕಂಡಳು, ಏನೋ ಹೇಳಿದಳು, ಎಂದು ಅರ್ಥಕೊಡುವ ಮಾತನ್ನು ಆಡಿದರು ಬಂಧುಗಳು ನಮ್ಮ ಬೀದಿಯ ಕೊನೆಯ ಮನೆಯಲ್ಲಿ ವಾಸವಾಗಿದ್ದ ನಮ್ಮ ಜನರ ಆಚಾರ್ಯ ವಂಶದ ಹಿರಿಯರಿಗೆ ಹೇಳಿಕಳುಹಿಸಿದರು. ಅವರು ಬಂದು ಎದುರಿಗೆ ನಿಂತದ್ದೇ ಈಕೆ ಕೂಗಾಟವನ್ನು ನಿಲ್ಲಿಸಿದರು. ಆಚಾರ್ಯರು, "ಇನ್ನು ಹೊರಡು, ಇಲ್ಲಿ ಇರಬೇಡ," ಎಂದು ದಿಟ್ಟವಾಗಿ ಸ್ಪಷ್ಟವಾಗಿ ನುಡಿದರು ಈಕೆ ಸ್ವಸ್ಥವಾದರು ಐದು ನಿಮಿಷ ಅಲ್ಲೇ ಇದ್ದು ಆಚಾರ್ರು ಮನೆಗೆ ಹೋದರು ಈಕೆಗೆ ಆಬಾರಿ ಮತ್ತೆ ಏನೂ ತೊಂದರೆ ಆಗಲಿಲ್ಲ. ಆದರೆ ಆಮೇಲೆ ಹಲವು ವರುಷ, ಆರು ತಿಂಗಳು ಏಳು ತಿಂಗಳಿಗೊಮ್ಮೆ ಈಕೆಗೆ ಇದೇ ರೀತಿ ಭ್ರಾಂತಿ ಆಗುವುದು, ಇವರು ಹಾಗೆಯೇ ಕೂಗಿಕೊಳ್ಳುವರು. ಆಚಾರ್ಯರು ಬಂದು ಎದುರಿಗೆ ನಿಲ್ಲಬೇಕು, ಕೂಗು ನಿಲ್ಲುವುದು. ಆಚಾರ್ಯರು, "ಇನ್ನು ಸಾಕು, ನಡಿ" ಎಂದು ಅಪ್ಪಣೆ ಮಾಡಬೇಕು, ಈಕೆ ಸ್ವಸ್ಥ ಆಗುವರು.

ಜನರಿಗೆ ಇದು ಒಂದು ದೆವ್ವದ ಕಾಟ ಎನ್ನುವ ವಿಷಯದಲ್ಲಿ ಸಂದೇಹವೇ ಇರಲಿಲ್ಲ

ಈಗ ಮೂವತ್ತು ವರ್ಷದ ಹಿಂದೆ ಕನ್ನಡದ ಕೆಲಸಕ್ಕಾಗಿ ನಾನು ಉತ್ತರ ಕನ್ನಡ ಜಿಲ್ಲೆಯ ಅಂಕೋಲಕ್ಕೆ ಹೋಗಿದ್ದಾಗ ನಮ್ಮ ಮಿತ್ರರಾದ ಶ್ರೀ ದಿನಕರ ದೇಸಾಯಿ ಅವರ ಅಣ್ಣ ಶ್ರೀ ಶಂಕರ ದೇಸಾಯಿ ಅವರ ಅತಿಥಿಯಾಗಿ ಅವರ ಮನೆಯಲ್ಲಿ ಇದ್ದೆನು. ರಾತ್ರಿ ಊಟ ಮಾಡಿ ಮಲಗಿದ್ದೆ. ಆ ಮನೆಯ ಎದುರಲ್ಲಿ

ಸ್ವಲ್ಪ ದೂರದಲ್ಲಿ ಇದ್ದ ಗುಡಿಸಲುಗಳ ಮಧ್ಯದಿಂದ ಯಾರೋ ಕರ್ಕಶವಾದ ಧ್ವನಿಯಲ್ಲಿ ಯಾರನ್ನೋ ಹೆದರಿಸಿ ಬೆದರಿಸಿ ಕೂಗುತ್ತಿರುವಂತೆ ಭಯಂಕರವಾದ ವಿಕಾರ ಧ್ವನಿಯ ಕೂಗಾಟ ಕೇಳಿಸಿತು ಆ ಧ್ವನಿಯ ಕೂಗನ್ನು ಕೇಳಿಯೇ ನಾನು ಅಂಜಿದೆನು. ಶಂಕರರಾಯರನ್ನು ಇದು ಏನು ಎಂದು ಕೇಳಿದೆನು. ಅವರು, "ಅವು ಕೊರಗರ ಗುಡಿಸಲುಗಳು, ಯಾರಿಗೋ ದೆವ್ವ ಹಿಡಿದಿರಬೇಕು; ಮಂತ್ರಗಾತಿ ಅದನ್ನು ಓಡಿಸುವುದಕ್ಕೆ ಅದಕ್ಕೆ ಭಯ ಹಾಕುತ್ತಿದ್ದಾಳೆ," ಎಂದರು ಬಳಿಕ ಈ ಕೂಗನ್ನು ಕೇಳಿ ನನಗೆ ಭಯ ಆಗಲಿಲ್ಲ. "ಮೂರು ತಿಂಗಳಿಗ, ಆರು ತಿಂಗಳಿಗೆ ಒಮ್ಮೆ ಇಂಥ ಕೂಗು ಕೇಳಿಬರುತ್ತೆ; ನಮಗೆ ವಾಡಿಕೆ ಆಗಿಬಿಟ್ಟಿದೆ" ಎಂದು ಶ್ರೀ ದೇಸಾಯಿ ಹೇಳಿದರು.

ಒಮ್ಮೆ ನಾನು ಪುತ್ತೂರಿಗೆ ಹೋಗಿದ್ದಾಗ ಮಿತ್ರರು ಶ್ರೀ ಬೆಳ್ಳೆ ರಾಮ ಚಂದ್ರರಾಯರ ಅತಿಥಿಯಾಗಿ ಅವರ ಮನೆಯಲ್ಲಿ ಇದ್ದೆನು ಅದು ಇದು ಮಾತನಾಡುವಾಗ ಏನೋ ಪ್ರಸಂಗ ಬಂದು ಅವರು, "ನಾವು ಬಲ್ಲ ಒಂದು ಮನೆಯಲ್ಲಿ ಹಲವಾರು ವರ್ಷದ ಹಿಂದೆ ಇದ್ದ ಒಬ್ಬ ಮುದುಕಿ, ಈಗಲೂ ತಿಂಗಳು ಎರಡು ತಿಂಗಳಲ್ಲಿ ಒಮ್ಮೆ, ತಾನು ಮಲಗುತ್ತಿದ್ದ ಕೋಣೆಯಿಂದ ಹೊರಟು ಮನೆಯಲ್ಲಿ ನಾಲ್ಕು ಕಡೆ ಓಡಿಯಾಡಿ, ಮರಳಿ ತನ್ನ ಕೋಣೆಗೆ ಹಿಂದಿರುಗುವುದು ಕಾಣುತ್ತಾ ಇದೆ," ಎಂದು ಹೇಳಿದರು ನಾನು ಇದನ್ನು ನಂಬಲಾರದೆ ಹೋದ, ಹಾಗೆಂದು ಅವರಿಗೆ ಹೇಳಿದೆ. ಅವರು, "ಜನ ನೋಡಿರುವ ಸಂಗತಿ; ನಂಬಿದರೆ ನಂಬಬಹುದು, ನಂಬಲಿಲ್ಲ ಬಿಡಬಹುದು," ಎಂದರು

ಈಚೆಗೆ ನಾನು 'ಜೀವನ' ಪತ್ರಿಕೆಯನ್ನು ನಡೆಸುತ್ತಿದ್ದಾಗ, ಅದರ ಕೆಲಸದಲ್ಲಿ ನನಗೆ ಸಹಾಯಕರಾಗಿದ್ದ ಶ್ರೀ ಟಿ ಜಿ. ಸುಬ್ರಹ್ಮಣ್ಯಂ ಅವರು ತಮ್ಮ ತೀರ್ಥರೂಪರ ಒಂದು ಅನುಭವವನ್ನು ನನಗೆ ತಿಳಿಸಿದರು.

ಇವರ ಊರಿನಲ್ಲಿ ಹತ್ತು ಜನಕ್ಕೆ ಇಷ್ಟನಾದ ಒಬ್ಬ ಕೆಲಸಗಾರ ಇದ್ದ. ಏನೋ ಕಾಯಿಲೆ ಬಂದು ಅವನು ತೀರಿಕೊಂಡ ಸ್ವಲ್ಪ ಕಾಲ ಕಳೆದಿದೆ. ತಂದೆ ಶಾಸ್ತ್ರಿಗಳು ಒಂದು ರಾತ್ರೆ ಸ್ವಲ್ಪ ಹೊತ್ತಾಗಿ ಗ್ರಾಮಕ್ಕೆ ಬರುತ್ತಿದ್ದರು. ದಾರಿಯಲ್ಲಿ ಒಂದು ತೋಪು. ತೋಪಿನಲ್ಲಿ ಹಾಯುತ್ತಿರುವಾಗ ಇವರಿಗೆ ಯಾರೋ ತಮ್ಮನ್ನು ಕರೆದಂತೆ ಆಯಿತು. ಧ್ವನಿ ತೀರಿಕೊಂಡಿದ್ದ

ಮನುಷ್ಯನದು. ಶಾಸ್ತ್ರಿಗಳು ತೀರ ಸಹಜವಾಗಿ "ಯಾರೋ, ನೀನೇ ?" ಎಂದು ಕೇಳಿದರಂತೆ. ಧ್ವನಿ "ಹೌದು" ಎಂದಿತು. ಇವರು "ಏನು ಸಂಗತಿ" ಎಂದು ಕೇಳಿದರು. ಧ್ವನಿ, "ನಿನ್ನ ಕೈಯಲ್ಲಿ ಇದಯಲ್ಲಾ, ಆ ಹಣ್ಣು ಕಾಯಿ, ಅದನ್ನಿಟ್ಟು ಹೋಗು" ಎಂದಿತು. ಇವರು ಕೈಯಲ್ಲಿದ್ದ ಕಾಯಿ ಹೋಳು ಹಣ್ಣನ್ನು ದಾರಿಯ ಪಕ್ಕದಲ್ಲಿಟ್ಟು ಹೊರಟು ಬಂದರು

ಶ್ರೀ ಸುಬ್ರಹ್ಮಣ್ಯಂ ತಮ್ಮ ತಂದೆಯವರ ಅನುಭವವನ್ನು ಹೇಳುತ್ತ ಆಶ್ಚರ್ಯ ಏನನ್ನೂ ಪ್ರಕಟಿಸಲಿಲ್ಲ. ಇದನ್ನು ಹೇಗೆಂದು ತಿಳಿಯುವುದು, ನನಗೆ ಇದನ್ನು ಕೇಳಿದಾಗಲೂ ತಿಳಿಯಲಿಲ್ಲ; ಈಗಲೂ ತಿಳಿಯುತ್ತಿಲ್ಲ

ನನ್ನ ಹಿರಿಯರಾದ ಶ್ರೀ ನವರತ್ನ ರಾಮರಾಯರು ನನಗೆ ತಿಳಿಸಿದ ಇಂಥ ಅವರ ಒಂದು ಅನುಭವದ ಮಾತನ್ನು ಅವರನ್ನು ಕುರಿತು ನಾನು ಬರೆದಿರುವ ಸಣ್ಣ ಪುಸ್ತಕದಲ್ಲಿ ತಿಳಿಸಿದ್ದೇನೆ. ಇವರ ಪರಿಚಯದ ಒಬ್ಬ ಮನುಷ್ಯ ಇವರಲ್ಲಿ ಏನೋ ಪ್ರಾರ್ಥನೆ ಮಾಡುತ್ತಿದ್ದ. ಇವರು ನೋಡೋಣ ಎಂದು ಹೇಳಿದ್ದರು. ಒಂದು ದಿನ ಮಾತು ನಡೆದಿದೆ ಅದೇ ದಿನ ಇವರು ಕೆಲಸದ ಮೇಲೆ ಎಲ್ಲಿಗೋ ಹೋಗಿ ಊರಿಗೆ ಹಿಂದಿರುಗುತ್ತಿದ್ದಾರೆ ದಾರಿಯಲ್ಲಿ ಊರಿನ ಸ್ಮಶಾನ. ಅದರ ಬದಿಯಲ್ಲಿ ಹಾಯುತ್ತಿದ್ದಂತೆ ಇವರಿಗೆ ಆ ಮನುಷ್ಯ ಸ್ಮಶಾನದ ಅಂಚಿನಲ್ಲಿ ನಿಂತು ಇವರ ಕಡೆ ನೋಡುತ್ತಿದ್ದಾನೆ ಎನ್ನಿಸಿತು. ಇವರು "ಒಳ್ಳೇದು, ನೋಡೋಣ ಎಂದೆನಲ್ಲಪ್ಪ, ನೋಡೋಣ" ಎಂದು ಹೇಳಿ ಮುಂದಕ್ಕೆ ನಡೆದರು. ಮನೆಗೆ ಬಂದಮೇಲೆ ಮಕ್ಕಳಿಗೆ "ಆ ಮನುಷ್ಯ ನಾನು ಈಗ ಬರುತ್ತಾ ದಾರಿಯಲ್ಲಿ ಕಂಡ, ಅವನು ಕೇಳಿದ್ದನ್ನು ಮಾಡಿಕೊಡಬೇಕು" ಎಂದರು ಮಕ್ಕಳು "ಅವನು ಕಂಡನೆ?" ಎಂದು ಕೇಳಿದರು. "ಕಂಡ". ಮಕ್ಕಳು, "ಅವನು ಮಧ್ಯಾಹ್ನ ತೀರಿಕೊಂಡ, ಈ ಹೊತ್ತೇ ಕರ್ಮ ಎಲ್ಲಾ ನಡೆಯಿತು," ಎಂದರು

ಈ ಸಂದರ್ಭದಲ್ಲಿ ವಸ್ತುಸ್ಥಿತಿ ಏನು ಎಂದು ನಾವು ನಿಶ್ಚಯವಾಗಿ ಹೇಳುವಂತಿಲ್ಲ. ಸಂಗತಿಯನ್ನು ಹೇಳುತ್ತಿರುವವರು ಸತ್ಯವಂತರು. ಸಂಗತಿಗಳು ದಿಟ ಎನ್ನುವುದನ್ನು ಮಾತ್ರ ನಾವು ಒಪ್ಪಿಕೊಳ್ಳಬೇಕು.

ನಾನು ಚಿಕ್ಕಂದಿನಲ್ಲಿ ನಮ್ಮ ಬಂಧುಗಳ ವಾಸದ ಒಂದು ಹಳ್ಳಿಯಲ್ಲಿ ನಡೆದ ಒಂದು ಪ್ರಾರಬ್ಧ ವಿಮೋಚನದ ಕಥೆಯನ್ನು ಕೇಳಿದೆನು. ಒಂದು

ಮನೆಯಲ್ಲಿ ಒಬ್ಬ ಅಣ್ಣ, ಅವನ ತಂಗಿ, ಸಾಮಾನ್ಯವಾಗಿ ಎಲ್ಲರಂತೆ ಬೆಳೆದವರು. ಪ್ರಾಯದ ವಯಸ್ಸಿನಲ್ಲಿ ಒಂದು ದಿನ ಇಬ್ಬರೂ ಹುಚ್ಚುಚ್ಚಾಗಿ ಮಾತನಾಡಲು ಆರಂಭಿಸಿದರು ಇವರಿಗೆ ಏನಾಗಿದೆ ಎಂದು ಬಂಧು ಜನ ಹತ್ತಿರ ನಿಂತರು ಇವರ ಮಾತು ಒಟ್ಟಿನಲ್ಲಿ ಇಬ್ಬರ ಹಿಂದಿನ ಒಂದು ಜನ್ಮದ ಒಂದು ಕಥೆ. "ಆಗ ಏನೋ ತಪ್ಪು ಮಾಡಿದ್ದರು ಅದರ ಸಾಲವನ್ನು ಈಗ ಹರಿಸಬೇಕಾಗಿದೆ, ಆದ್ದರಿಂದ ಈಗ ಹೀಗಾಗಿದೆ. ಮಂತ್ರವಾದಿಗಳನ್ನು ಕರೆಸಿ ಮಂತ್ರಮಾಡಿಸಿ, ವಾಸಿಮಾಡಿ" ಮನೆಯ ಹಿರಿಯರು ಮಂತ್ರವಾದಿ ಯಾರಿದ್ದಾರೆ ಎಂದು ವಿಚಾರಿಸಿ ಸ್ವಲ್ಪ ದೂರದ ಒಂದು ಗ್ರಾಮದಲ್ಲಿದ್ದ ಮಂತ್ರವಾದಿ ಒಬ್ಬನನ್ನು ಕರೆದು ತಂದು ವಿಮೋಚನೆಯ ಕರ್ಮವನ್ನು ನಡೆಸಿದರು ಅಣ್ಣ ತಂಗಿಯರಿಗೆ ಗುಣ ಆಯಿತು.

ಇದರದೂ ಅಷ್ಟೇ ವಸ್ತುಸ್ಥಿತಿ ಏನು ನಾವು ಹೇಳುವಂತಿಲ್ಲ ಸಂಗತಿ ಅಂತೂ ನಡೆದದ್ದು.

ಇಂಥ ಇನ್ನೊಂದು ಸಂದರ್ಭದಲ್ಲಿ ಮಂತ್ರವಾದಿಯಾಗಿದ್ದ ಒಬ್ಬನು ತಾನು ಎಂಥ ಪ್ರಭಾವಶಾಲಿ ಎಂದು ತೋರಿಸುವುದಕ್ಕೆ ಮಾಡುತ್ತಿದ್ದ ಒಂದು ಅದ್ಭುತವನ್ನು ಒಬ್ಬರು ವರ್ಣಿಸಿದರು. ಇವನು ಒಂದು ಚೆಂಡಿನಂತಿದ್ದ ಒಂದು ವಸ್ತುವನ್ನು ದೂರಕ್ಕೆ ಎಸೆಯುವನು ಅದು ನೆಲಕ್ಕೆ ಬಿದ್ದು, ಚೆಂಡು ಉರುಳಿಕೊಂಡು ಇವನ ಹತ್ತಿರಕ್ಕೆ ಮರಳಿ ಬರುವುದು. ನೋಡಿದವರಿಗೆ ಇದೇನು ಅದ್ಭುತ ಎನ್ನಿಸುತ್ತಿತ್ತು ಇದಕ್ಕೆ ಪ್ರಾಯಶಃ ಹೀಗೆ ಇದ್ದಿರಬಹುದು ಎಂದು ವಿವರಣೆಯನ್ನು ಸೂಚಿಸಬಹುದು ಮಂತ್ರವಾದಿ ತನ್ನ ಬಟ್ಟೆಗಳಲ್ಲಿ ಒಂದು ತಕ್ಕಷ್ಟು ಗಾತ್ರದ ಒಂದು ಅಯಸ್ಕಾಂತದ ಗಟ್ಟಿಯನ್ನು ಇಟ್ಟು ಕೊಂಡಿದ್ದು, ಚೆಂಡಿನ ಮಧ್ಯೆ ಕಬ್ಬಿಣದ ಚೂರನ್ನು ಇಟ್ಟಿದ್ದ. ಇವನು ಎಸೆದು ದೂರದಲ್ಲಿ ಬಿದ್ದ ಚೆಂಡು ಒಳಗಿದ್ದ ಕಬ್ಬಿಣದ ಕಾರಣದಿಂದ ಇವನ ಕಡೆಗೆ ಹರಿದು ಬಂದಿತು ಇದು ಈಗ ನಮಗೆ ತೋರುವ ಮಾತು. ಅಂದು ಇದನ್ನು ನೋಡಿದವರು ಈ ವಿಷಯ ಇಂಥ ಯೋಚನೆ ಮಾಡುತ್ತಿರಲಿಲ್ಲ. ಮಂತ್ರವಾದಿ ಗಳು ಎಂದು ಕರೆದುಕೊಳ್ಳುತ್ತಿದ್ದ ಇಂಥ ಜನ ಇಂಥ ವಿಚಿತ್ರ ಶಕ್ತಿಗಳನ್ನು ತೋರಿಸಿ ಜನ ತಮ್ಮನ್ನು ನಂಬುವಂತೆ ಮಾಡುತ್ತಿದ್ದರು ಎನ್ನುವುದೇನೋ ದಿಟ.

ನನ್ನ ಬಂಧು ಶ್ರೀ ಚೆಲುವಯ್ಯಂಗಾರ್ ಅವರು ಒಂದುಸಲ ಮಾಸ್ತಿಯಲ್ಲಿ

ಆವರು ಇಳಿದಿದ್ದ ಮನೆಗೆ ಒಂದ ಒಬ್ಬ ಮಂತ್ರವಾದಿಯಿಂದ ತಮ್ಮ ಪತ್ನಿಗೆ ಒಂದು ರಕ್ಷೆಯನ್ನು ಕಟ್ಟಿಸಿದ ಸಂಗತಿಯನ್ನು ನನ್ನ 'ಭಾವ' ಪುಸ್ತಕದಲ್ಲಿ ನಾನು ಹೇಳಿದ್ದೇನೆ. ತನ್ನ ಪ್ರಭಾವವನ್ನು ಪ್ರಕಟಿಸುವುದಕ್ಕೆ ಆ ಮನುಷ್ಯ ಚೆಲುವಯ್ಯಂಗಾರ್ಯರ ಶಾಲುವನ್ನು ಎಳೆದುಕೊಂಡು ಅದರ ಕೊನೆಯಲ್ಲಿ ಏನನ್ನೋ ಕಟ್ಟಿ ಗಂಟುಮಾಡಿ, ಅದಕ್ಕೆ ಬೆಂಕಿ ಹಚ್ಚಲು ನೋಡಿದನು. ಶಾಲು ಸುಟ್ಟುಹೋಗುತ್ತದೆಯಲ್ಲಾ ಎಂದು ಚೆಲುವೈಯ್ಯಂಗಾರ್ರಿಗೂ ಭಯ, ನನಗೂ ಭಯ. ನಾವು ಬೇಡಪ್ಪಾ ಎಂದು ಹೇಳುತ್ತಿರುವಲ್ಲಿಯೇ ಅವನು, "ಭಯ ಪಡಬೇಡಿ, ನೋಡಿ," ಎಂದು ಹೇಳುತ್ತಾ, ಬೆಂಕಿಕಡ್ಡಿಯನ್ನು ಗೀಚಿ, ಶಾಲುವಿಗೆ ಹಚ್ಚಿಯೇಬಿಟ್ಟನು. ಶಾಲು ನಾವು ನೋಡುತ್ತಿದ್ದಂತೆ ಚೆನ್ನಾಗಿ ಉರಿಯಿತು. ಒಂದು ನಿಮಿಷ ಉರಿದ ಮೇಲೆ ಆರಿತು. ಮಂತ್ರವಾದಿ ಒಂದಷ್ಟು ನೀರ ತೆಗೆದುಕೊಂಡು, ಶಾಲುವಿನ ಕೊನೆಯನ್ನು ತೊಳೆದು ಒದರಿದನು. ಶಾಲು ಏನೂ ಆಗಿರಲಿಲ್ಲ, ಮೊದಲಿನಂತೆಯೇ ಇತ್ತು. ಇದು ನಾನು ಕಣ್ಣಾರೆ ಕಂಡ ಸಂಗತಿ.

ಇದರ ರಹಸ್ಯ ಏನೋ ಇರಬೇಕು, ಇದನ್ನು ಇಂಥ ಜನ ಗುಟ್ಟಾಗಿ ಇಟ್ಟುಕೊಂಡಿರುತ್ತಾರೆ. ಇದು ಈ ಮನುಷ್ಯರ ವಿಶೇಷ ಶಕ್ತಿ ಅಥವಾ ಪ್ರಭಾವ ಎಂದು ಗ್ರಹಿಸಬೇಕಾದದ್ದಿಲ್ಲ. ಆದರೆ ವಿಶೇಷ ತಿಳುವಳಿಕೆ ಹೌದು, ಜೊತೆಗೆ ತಕ್ಕಷ್ಟು ಅದರ ದುರುಪಯೋಗವೂ ಹೌದು.

ಸ್ವಾಮಿ ವಿವೇಕಾನಂದರ ಲೇಖನಗಳಲ್ಲಿ ಅವರ ಇಂಥ ಅನುಭವದ ಕಥನ ಒಂದು ಇದೆ. ಅದರಲ್ಲಿ ಅದ್ಭುತವನ್ನು ಪ್ರಕಟಿಸಿದ ಮನುಷ್ಯ ಆ ಅದ್ಭುತವೆಲ್ಲ ಬರಿಯ ಕಣ್ಣುಕಟ್ಟು ಎಂದು ತಾನೇ ಹೇಳಿದನು ಎಂದು ಸ್ವಾಮಿ ತಿಳಿಸಿದಾರೆ.

## ಜ್ಯೋತಿಷದಲ್ಲಿ ನಂಬಿಕೆ

ಅದ್ಭುತ ಮಾಯ ಮಂತ್ರ ಎಂದು ಅಲ್ಲದೆ ಬೇರೆ ಹಲವು ರೀತಿಯಲ್ಲಿ ನಮ್ಮ ಜನರ ತಿಳಿವಳಿಕೆ ಒಂದು ತಪ್ಪು ಜಾಡಿನಲ್ಲಿ ನಡೆದುಬಂದಿದೆ. ಇದರ ಒಂದು ದೊಡ್ಡ ಭಾಗ ಜನಾಂಗ ಜ್ಯೋತಿಷದಲ್ಲಿ ಇಟ್ಟುಕೊಂಡಿರುವ ನಂಬಿಕೆ.

ಜ್ಯೋತಿಷ್ಯ ವಿಶ್ವಾಸಾರ್ಹವಾದ ಒಂದು ಶಾಸ್ತ್ರವೇ ಎನ್ನುವುದು ಇಲ್ಲಿ ಪ್ರಸಕ್ತ ಅಲ್ಲ. ನನ್ನ ಅನುಭವದಲ್ಲಿ ನನ್ನ ಗಮನಕ್ಕೆ ಬಂದ ಮೂರು ಸಂಗತಿ

ಯನ್ನು ನಾನು ನನ್ನ 'ಭಾವ' ಪುಸ್ತಕದಲ್ಲಿ ಆರಿಕೆ ಮಾಡಿದೇನೆ. ಒಂದು, ರಾಜಮಂಧ್ರಿಯ ಶಾಸ್ತ್ರಿ ಒಬ್ಬರು ಮದರಾಸಿನ ವಿಖ್ಯಾತ ವಕೀಲರಾದ ಶ್ರೀ ಕೃಷ್ಣಸ್ವಾಮಿ ಅಯ್ಯರ್ ಅವರ ಮರಣದ ಸನ್ನಿವೇಶವನ್ನು ಹಲವು ತಿಂಗಳ ಮುನ್ನ ಗುರುತಿಸಿದ್ದು. ಒಂದು ಬೆಂಗಳೂರಿನ ಶ್ರೀ ಬಿ ಸೂರ್ಯನಾರಾಯಣ ರಾಯರು ಶ್ರೀ ಬ್ಯಾನರ್ಜಿಯವರು ದಿವಾನರಾಗುತ್ತಾರ ಎಂದು ಭವಿಷ್ಯ ಹೇಳಿದ್ದು ಒಂದು, ಧಾರವಾಡದಲ್ಲಿರುವ ಜ್ಯೋತಿಷ್ಕರೊಬ್ಬರು ನನ್ನ ಸೋದರ ಲೇಖಕ ಶ್ರೀ ಬೇಂದ್ರೆಯವರಿಗೆ ನಾಸು ಅಧಿಕಾರದಿಂದ ವಿಶ್ರಾಂತನಾಗುವ ಕಾಲ ವನ್ನು ನಿಷ್ಕರ್ಷೆಯಿಂದ ತಿಳಿಸಿದ್ದು ಈ ಮೂರು ಸಂಗತಿಯಿಂದ ಶಾಸ್ತ್ರ ವಿಶ್ವಾಸಾರ್ಹ ಎಂದು ಹೇಳಬೇಕಾಗುತ್ತದೆ. ಇಷ್ಟೇ . ಈ ಮೂರೂ ಸಂದರ್ಭ ದಲ್ಲೂ ಜ್ಯೋತಿಷ್ಕರು ತುಂಬ ಶಕ್ತರು, ತಮ್ಮ ಶಾಸ್ತ್ರದಲ್ಲಿ ಪಾರಂಗತರು, ಮೇಲಾಗಿ ಮೂವರೂ ತುಂಬ ಸಾವಧಾನವಾಗಿ ಪರಿಶೀಲನ ನಡೆಸುತ್ತಿದ್ದವರು ಅದಕ್ಕೂ ಮೇಲೆ, ಹಣ ಗಳಿಸುವ ಸಲುವಾಗಿ ಶಾಸ್ತ್ರವನ್ನು ಬಳಸಿದವರಲ್ಲ ಇದರ ಮೇಲೂ ಒಂದು ಮಾತು ಉಳಿಯುತ್ತದೆ ಶಕ್ತನಾದ ಜ್ಯೋತಿಷ್ಕ ನಾದರೂ ತನ್ನ ಪರಿಶೀಲನಕ್ಕೆ ಬರುವ ಜಾತಕ ಸರಿಯಾದ ಜಾತಕ ಎಂದು ತಿಳಿದು ಗಣನೆ ನಡೆಸಬೇಕಾಗುತ್ತದೆ ಆ ಜಾತಕವೇ ತಪ್ಪಾದರೆ? ಇದಕ್ಕೆ ಒಂದು ಉದಾಹರಣೆ ಅತ್ಯಂತ ವಿಖ್ಯಾತರಾದ ನಮ್ಮ ಹಿರಿಯರು ಶ್ರೀಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಇವರ ಹುಟ್ಟುದಿನ ಆ ಸಂವತ್ಸರದ ಸೆಪ್ಟೆಂಬರ್ ೧೫ ಎಂದು ಪ್ರತೀತಿ ಆ ವರ್ಷದ ಸೆಪ್ಟೆಂಬರ್ ೧೫ ಉಕ್ತಕಾಲದ ಗ್ರಹಗಳ ಸ್ಥಿತಿಯನ್ನು ಇಟ್ಟುಕೊಂಡರೆ ಜಾತಕದಿಂದ ತೋರುವ ಸಂಗತಿಗಳಿಗೂ ವಿಶ್ವೇಶ್ವರಯ್ಯನವರ ಜೀವನದಲ್ಲಿ ನಡೆದ ಸಂಗತಿಗಳಿಗೂ ಅರ್ಥಾರ್ಥ ಸಂಬಂಧ ಇಲ್ಲ. ಜ್ಯೋತಿಶ್ಶಾಸ್ತ್ರ ವ್ಯಾಸಂಗಿಯಾದ ನನ್ನ ಹಿರಿಯ ಮಿತ್ರರು, ವಿಶ್ರಾಂತ ಡಿಸ್ಟ್ರಿಕ್ಟ್ ಜಡ್ಜ್ ಶ್ರೀವೆಂಕಟಕೃಷ್ಣಯ್ಯನವರು, ಇದನ್ನು ಕಂಡು ವಿಶ್ವೇಶ್ವರಯ್ಯ ನವರ ಬಂಧುಗಳಲ್ಲಿ ವಿಚಾರಮಾಡಿ ಈ ಹಿರಿಯರು ಹುಟ್ಟಿದ್ದು ಆ ಹಿಂದಿನ ಆಗಸ್ಟ್ ತಿಂಗಳ ಕೊನೆಯ ದಿನ ಒಂದರಲ್ಲಿ ಎಂದು ತಿಳಿದರು. ತುಂಬ ಕಷ್ಟ ಪಟ್ಟು ಆಗಸ್ಟ್ ತಿಂಗಳ ಕೊನೆಯ ದಿನಗಳ ಗ್ರಹಗಳ ಸ್ಥಿತಿಯನ್ನು ಮುಂದಿಟ್ಟು ಕೊಂಡು ದೀರ್ಘ ಪರಿಶೀಲನ ನಡೆಸಿ, ಅವುಗಳಲ್ಲಿ ಒಂದು ದಿನ ಈ ಹಿರಿಯರ ಜನ್ಮದಿನ ಎಂದು ನಿಶ್ಚಯ ಮಾಡಿದರು. ನಾನು ಒಮ್ಮೆ ಇವರನ್ನು ಕಂಡಾಗ

ಏತಕ್ಕೋ ಈ ಮಾತು ಬಂದು ಇವರು ತಮ್ಮ ಪರಿಶೀಲನ ಮಾತನ್ನು ಹೇಳಿ ಆಗಸ್ಟ್ ತಿಂಗಳ ಆ ತಾರೀಖಿನ ಆ ಹೊತ್ತಿನಲ್ಲಿ ಹುಟ್ಟಿದವನ ಜಾತಕದ ಫಲ ಎಂದು ಹತ್ತು ಶ್ಲೋಕಗಳನ್ನು ಹೇಳಿದರು. ಹತ್ತು ಶ್ಲೋಕದಲ್ಲಿ ಬಂದ ಹತ್ತು ಸಂಗತಿಯೂ ವಿಶ್ವೇಶ್ವರಯ್ಯನವರ ಜೀವನಕ್ಕೆ ಸರಿಯಾಗಿ ಹೊಂದುವಂಥವು. ನನಗೆ ಇವರು ತೆಗೆದುಕೊಂಡಿದ್ದ ಶ್ರಮವನ್ನು ಕುರಿತು ತುಂಬ ಮೆಚ್ಚಿಕೆ ಯಾಯಿತು ಶಾಸ್ತ್ರ ವಿಶ್ವಾಸಾರ್ಹ ಎನ್ನಿಸಿತು

ಮೊದಲಲ್ಲಿ ಇಲ್ಲಿ ಈ ಸಂಗತಿಗಳನ್ನು ಹೇಳಿರುವುದರ ಉದ್ದೇಶ, ನಾನು ಜ್ಯೋತಿಶ್ಶಾಸ್ತ್ರವನ್ನು ಕುರಿತು ಸಹಜವಾಗಿ ಅಪನಂಬಿಕೆಯ ಮನುಷ್ಯ ಅಲ್ಲ ಎಂದು ಸ್ಪಷ್ಟಪಡಿಸುವುದು. ಆಮೇಲೆ ಹೇಳುವ ಬಹುಮುಖ್ಯವಾದ ಮಾತು, ಶಾಸ್ತ್ರ ವಿಶ್ವಾಸಾರ್ಹ, ಆದರೂ ಇನ್ನು ಒಳಸಿ ಭವಿಷ್ಯವನ್ನು ತಿಳಿದು ಹೇಳು ವುದಕ್ಕೆ ಜ್ಯೋತಿಷ್ಕ ರಾಜಮಂಡ್ರಿಯ ಶಾಸ್ತ್ರಿಯಂತೆ ಅತ್ಯಂತ ನಿಷ್ಠಾವಂತ ನಾಗಿರಬೇಕು. ಇಲ್ಲ, ಶ್ರೀ ಸೂರ್ಯನಾರಾಯಣರಂತೆ, ಮತ್ತು ಧಾರವಾಡದ ನಮ್ಮ ಜ್ಯೋತಿಷ್ಕರಂತೆ ತನ್ನ ಹೆಸರನ್ನು ಉಳಿಸಿಕೊಳ್ಳುವುದಕ್ಕಾಗಿ ಶ್ರದ್ಧೆಯಿಂದ ದುಡಿಯುವ ಜಾಣ ಗಣಕನಾಗಿರಬೇಕು. ಈ ದುಡಿಮೆಯು ಜಾಣು ಬಹು ಕಾಲವನ್ನು, ಬಹು ಶ್ರಮವನ್ನು ಬಯಸುತ್ತದೆ ಮೇಲಾಗಿ ಗಣನೆಗೆ ಆಧಾರವಾದ ಕುಂಡಲಿ, ಜನನದ ಕಾಲವನ್ನು ಸರಿಯಾಗಿ ತಿಳಿಸುವು ದಾಗಿರಬೇಕು ಶಾಸ್ತ್ರ ಬಲ್ಲವರು ಹೇಳುವುದರಲ್ಲಿ ಈ ಕಾಲ ಕೆಲವೇ ನಿಮಿಷ ಹೆಚ್ಚು ಕಡಿಮೆಯಾದರೂ ಅಷ್ಟರಲ್ಲಿ ಒಂದು ಗ್ರಹದ ಸ್ಥಾನ ಬೇರೆಯಾಗಿ ಕುಂಡಲಿ ತಪ್ಪಾಗುತ್ತದೆ. ಇದರ ಪರಿಣಾಮವಾಗಿ ಗಣನೆಯಿಂದ ಬರುವ ಫಲ ತಪ್ಪುತ್ತದೆ.

ಈಗ ಜ್ಯೋತಿಷ್ಕರಲ್ಲಿ ಜಾತಕಗಳನ್ನು ತೆಗೆದುಕೊಂಡು ಗಣನಮಾಡಿ ಫಲಗಳನ್ನು ಬರೆದುಕೊಡುವವರ ಅನೇಕರು ಗಣನೆಯನ್ನು ಒಂದು ವರಮಾನದ ವ್ಯಾಪಾರಮಾಡಿ ದಿನಕ್ಕೆ ಎರಡು ಮೂರು ಜಾತಕದ ಫಲಗಳನ್ನು ಗುಣಿಸಿ ಬರೆದು ಮುಗಿಸುತ್ತಾರೆ. ಆಧಾರವಾದ ಜಾತಕ ಸರಿಯೇ ಎಂದು ಪರೀಕ್ಷಿಸಲು ವಿಶ್ವೇಶ್ವರಯ್ಯನವರ ಜಾತಕಕ್ಕಾಗಿ ಶ್ರೀ ವೆಂಕಟಕೃಷ್ಣಯ್ಯನವರು ವಹಿಸಿಕೊಂಡ ಕಷ್ಟವನ್ನು ವಹಿಸಿಕೊಳ್ಳಬೇಕು. ಇದು ಶ್ರಮದ ವ್ಯಾಪಾರ. ದಿನಕ್ಕೆ ಮೂರು ನಾಲ್ಕು ಜಾತಕಗಳನ್ನು ನೋಡಿ ಮುಗಿಸುವ ಜ್ಯೋತಿಷ್ಕರು ತಾವಾಗಿ

ಈ ಶ್ರಮವನ್ನು ವಹಿಸಬಲ್ಲವರಾಗಿ ಇರುತ್ತಾರೆಯೋ ? ಇದು ವಿಚಾರಕ್ಕೆ ಅರ್ಹವಾದ ವಿಷಯ

ನಮ್ಮ ಬಂಧು ಒಬ್ಬರು ತಮ್ಮ ಮಗಳ ಮದುವೆಯ ವಿಷಯ ಪ್ರಸ್ತಾಪಿಸುತ್ತಾ ನನ್ನ ಬಳಿ ತಮ್ಮ ಮಗಳ ಜಾತಕವನ್ನು ಕಳುಹಿಸಿದರು. ನಾನು ಅದನ್ನು ವರನ ತಂದೆಗೆ ಕಳುಹಿಸಿದೆ ಅವರು ಅದನ್ನು ಮೈಸೂರಿನ ಪ್ರಸಿದ್ಧ ವಿದ್ವಾಂಸರೊಬ್ಬರಿಗೆ ಕೊಟ್ಟರು ಅವರು ತಮ್ಮ ಸಹಾಯಕರಾಗಿದ್ದ ಒಬ್ಬ ಜ್ಯೋತಿಷ್ಯರಿಗೆ ಅದನ್ನು ವಹಿಸಿದರು. ಅವರು ಗುಣಿಸುವುದನ್ನು ಗುಣಿಸಿ, ಫಲವನ್ನು ನಿರ್ಣಯಿಸಿ ಅದನ್ನು ಯಜಮಾನರಿಗೆ ಬರೆದುಕೊಟ್ಟರು. ಅದು ವರನ ತಂದೆಯವರ ಕೈಗೆ, ನನ್ನ ಕೈಗೆ ಬಂದು, ಬಳ್ಳಾರಿಯಲ್ಲಿದ್ದ ನನ್ನ ಬಂಧುಗಳ ಕೈಗೆ ಸೇರಿತು ಈ ಬಂಧು ಜ್ಯೋತಿಷದ ಆರಂಭದ ಭಾಗ ಅಷ್ಟನ್ನು ಬಲ್ಲವರು ಫಲವನ್ನು ಓದಿ, ಅವರು ಅದು ಮೊದಲ ಹಜ್ಜೆಯಲ್ಲೇ ತಪ್ಪಿದೆ ಎನ್ನುವುದನ್ನು ಕಂಡರು ಹೀಗೆಂದು ನನಗೆ ಪತ್ರ ಬರೆದರು ನಾನು ಮೈಸೂರಿಗೆ ತಿಳಿಸಿದೆ ಮೈಸೂರಿನ ಪ್ರಸಿದ್ಧ ಜೋಯಿಸರು, "ಹೌದು, ನನ್ನ ಸಹಾಯಕರು ಮೊದಲ ಹೆಜ್ಜೆಯಲ್ಲೇ ತಪ್ಪು ಮಾಡಿದ್ದಾರೆ,' ಎಂದು ಒಪ್ಪಿಕೊಂಡು, ತಿದ್ದಿದ ಫಲವನ್ನು ಗುರುತಿಸಿಕೊಟ್ಟರು. ಬಳ್ಳಾರಿಯ ನನ್ನ ಬಂಧು ಜ್ಯೋತಿಷ್ಯ ಬಲ್ಲವರಾಗಿದ್ದದ್ದರಿಂದ ಈ ತಿದ್ದುಣಿಕೆ ನಡೆಯಿತು ವರನ ತಂದೆಯೋ, ನಾನೋ ವಧುವಿನ ತಂದೆ ಆಗಿದ್ದರೆ ಫಲ ತಪ್ಪಿದೆ ಎಂದು ನಮಗೆ ತಿಳಿಯುತ್ತಿರಲಿಲ್ಲ. ಹೀಗೆ ಜ್ಯೋತಿಷ್ಯರು ಕೊಡುವ ಫಲ ಎಷ್ಟೋ ಬಾರಿ ತಪ್ಪಬಹುದು ಎಷ್ಟು ಬಾರಿ ಎಂದು ಹೇಳುವಂತಿಲ್ಲ.

ನಮ್ಮಲ್ಲಿ ಮದುವೆಗಳನ್ನು ನಿಶ್ಚಯಿಸುವ ಸಂದರ್ಭಗಳಲ್ಲೆಲ್ಲ ಈ ಜಾತಕದ ಮಾತು ಬಂದೇ ಬರುತ್ತದೆ ಜಾತಕ ಕೂಡಲಿಲ್ಲ ಎಂದು ಮದುವೆ ಎಷ್ಟೋ ತಪ್ಪುತ್ತವೆ. ಕೂಡಿದವು ಎಂದು ಎಷ್ಟೋ ನಿಶ್ಚಯ ಆಗುತ್ತವೆ ಇವುಗಳಲ್ಲಿ ಕೆಲವಾದರೂ ತಪ್ಪಾಗಿರಬೇಕು ಎನ್ನುವುದು ಸ್ಪಷ್ಟ. ವೀರೇಶಲಿಂಗಂ ಪಂತುಲು ಅವರ ಒಂದು ಕಥೆಯಲ್ಲಿ ಮದುವೆಯಾದ ಕೆಲವೇ ಕಾಲದಲ್ಲಿ ಗಂಡ ತೀರಿಕೊಳ್ಳುತ್ತಾನೆ ವಧುವಿನ ಬಂಧು ಇದನ್ನು ತಿಳಿಸಿದಾಗ ಎದುರಾಳಿ, "ಜಾತಕ ನೋಡಿಸಿದಿರಲ್ಲಾ, ಜಾತಕ ವರನಿಗೆ ಪೂರ್ಣಾಯಸ್ಸು ಎಂದು ಹೇಳಿತ್ತೆ?" ಎನ್ನುತ್ತಾರೆ. ಬಂಧು, "ಹೌದು, ಪೂರ್ಣಾಯುಸ್ಸೇ," ಎಂದು

ಪ್ರೊ, ಡಾ, ಯು, ಸ್ಸೀ, ಎಲ್ಲವನ್ನೂ ದೀರ್ಘವಾಗಿ ಎಳೆದು ನುಡಿದು ಮುಗಿಸುತ್ತಾರೆ

ಇದೇನು, ಒಮ್ಮೆ ನಡೆದ ಮಾತೇ? ಎಷ್ಟೋ ಬಾರಿ ಆಗಿರಬೇಕು. ಇದು ತಿಳಿದೂ ನಮ್ಮ ಜನ ಜಾತಕವನ್ನು ನೋಡಿಸಿದ್ದೂ ನೋಡಿಸಿದ್ದೇ, ಮದುವೆಯನ್ನು ನಿಶ್ಚಯಿಸಿದ್ದೂ ನಿಶ್ಚಯಿಸಿದ್ದೇ, ತಪ್ಪಿಸಿದ್ದೂ ತಪ್ಪಿಸಿದ್ದೇ ಈಗಲೂ ಒಂದೊಂದು ಮದುವೆಯ ಲಗ್ನಪತ್ರಿಕೆಯಲ್ಲೂ ಪ್ರಭವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೇ ಎಂದು ಆರಂಭಿಸಿ, ವರ್ಷ, ಮಾಸ, ತಿಥಿ, ವಾರ, ಗಳಿಗೆ, ಎಲ್ಲವನ್ನು ಹೆಸರಿಸಿ, ಮದುವೆಗೆ ಬಂಧುಗಳನ್ನು ಆಹ್ವಾನಿಸುವುದು ನಡೆಯುತ್ತಲೇ ಇದೆ. ಮದುವೆಯ ವೆಚ್ಚ ಅದೆಷ್ಟೋ ಅನವಶ್ಯ ಎನ್ನುವುದು ಖಂಡಿತ. ಲಗ್ನವನ್ನು ನಿಶ್ಚಯಿಸುವ ಸಲುವಾಗಿ ಜ್ಯೋತಿಷ್ಯನಿಗೆ ಕೊಡುವ ಕಾಸು ಇಂಥ ವೆಚ್ಚ ಎಂದು ಹೇಳುವುದು ನೂರರಲ್ಲಿ ತೊಂಬತ್ತು ಬಾರಿ ಸತ್ಯ ಎಂದು ಕಾಣುತ್ತದೆ

ಜ್ಯೋತಿಶ್ಶಾಸ್ತ್ರದ ಪ್ರಕಾರ ಒಂದು ನಕ್ಷತ್ರದಲ್ಲಿ ಹುಟ್ಟಿದ ಹೆಣ್ಣನ್ನು ತಂದುಕೊಳ್ಳುವುದು ಮಾವನ ಆಯುಸ್ಸಿಗೆ ಅಪಾಯ, ಬೇರೆ ಒಂದು ನಕ್ಷತ್ರದ್ದು ಅತ್ತೆಗೆ ಅಪಾಯ, ಈ ಕಾರಣಗಳಿಗಾಗಿ ಎಷ್ಟೋ ಸಂಬಂಧಗಳು ತಪ್ಪುತ್ತವೆ. ನಾನು ಕಂಡಂತೆ ಇಂಥ ಹುಡುಗಿಯನ್ನು ಸೊಸೆಯಾಗಿ ತಂದುಕೊಂಡು ಒಬ್ಬ ಮಾವ ಮದುವೆಯ ಬಳಿಕ ಇಪ್ಪತ್ತು ವರ್ಷ ಇದ್ದು, ತಮ್ಮ ಎಂಭತ್ತು ವಯಸ್ಸಿನ ನಂತರ ತೀರಿಕೊಂಡರು ಇನ್ನೊಂದು ಇಂಥ ನಂಟಿನಲ್ಲಿ ಅತ್ತೆ ಮದುವೆ ನಡೆದ ಬಳಿಕ ಇಪ್ಪತ್ತು ವರ್ಷ ಬದುಕಿದ್ದಾರೆ. ಈಗಲೂ ಸುಖವಾಗಿದ್ದಾರೆ

ಅಪರೂಪವಾಗಿ ನಡೆಯುವ ಇಂಥ ಸಂಬಂಧಗಳಲ್ಲಿ ನನ್ನ ಒಬ್ಬನ ಅನುಭವದಲ್ಲೇ ಎರಡು ಮದುವೆಗಳಲ್ಲಿ ನಕ್ಷತ್ರಗಳಿಂದ ಕೆಡುಕಾಗಲಿಲ್ಲವಾಗಿ ಈ ಭಯಗಳಿಗೆ ಕಾರಣ ಇಲ್ಲ ಎಂದರೆ ತಪ್ಪಾಗಲಾರದು.

ಜ್ಯೋತಿಷ್ಯರ ಈ ಪೀಡೆಗೆ ಒಂದಲ್ಲ ಒಂದು ರೀತಿಯಲ್ಲಿ ಒಳಗಾಗುವುದು ನಮ್ಮ ಎಲ್ಲರದೂ ವಾಡಿಕೆ. ಕೆಲವು ವೇಳೆ ಜಾಣು ಹೆಚ್ಚಿದಷ್ಟೂ ನಂಬಿಕೆ ಹೆಚ್ಚುತ್ತದೆ. ಇದಕ್ಕೆ ಒಂದು ನಿದರ್ಶನ ನನ್ನ ಸೋದರ ಲೇಖಕ ಶ್ರೀ ಬೇಂದ್ರೆಯವರು ಇವರ ಜ್ಯೋತಿಷ್ಯ ಮಿತ್ರರು ನನ್ನನ್ನು ಕುರಿತು ಬರೆದ ಒಂದು

ಜಾತಕ ಒಂದು ಅನಿರೀಕ್ಷಿತ ರೀತಿಯಲ್ಲಿ ದಿಟವಾಯಿತು ಎಂದು ಹೇಳಿದ್ದೇನೆ ಇದೇ ಜ್ಯೋತಿಷ್ಕರು ನನ್ನ ಜಾತಕದಲ್ಲಿ ಒಂದು ಪಾಪ ಗ್ರಹ ಇದೆ ಎಂದೂ, ಅದು ನನಗೆ ಸಲ್ಲಬೇಕಾದ ಗೌರವಗಳಿಗೆ ಅಡ್ಡಿ ಆಗುತ್ತಿದೆ ಎಂದೂ ಇವರಿಗೆ ಹೇಳಿದ್ದರಂತೆ ನನ್ನ ಜೀವನದಲ್ಲಿ ಇದು ದಿಟವಾಗಿದೆ ಎಂದು ಇವರ ತಿಳುವಳಿಕೆ ಈ ನಂಬಿಕೆಯು ಈ ಮಿತ್ರರು ಎರಡು ವರ್ಷದ ಹಿಂದೆ ನನಗೆ ೬೯ ತುಂಬಿದಾಗ "ನಿಮಗೆ ಇದು ತೊಂಬತ್ತೊಂದನೆಯ ವರ್ಷ" ಎಂದು ಹೇಳಿ ಒಬ್ಬ ಹುಡುಗ ನೀರಿನಲ್ಲಿ ಮುಳುಗಿ ಎದ್ದಂತೆ ಕನಸಾಯಿತು" ಎಂದು ಬರೆದರು. ಕಾಗದವನ್ನು ಓದಿದ ಕ್ಷಣದಲ್ಲಿ ನನಗೆ ಇದರ ಅರ್ಥ ಆಗಲಿಲ್ಲ ಆಲೋಚಿಸಿ ಯೋಚಿಸಿದ್ದರಲ್ಲಿ, ನನಗೆ ೯೧ನೆಯ ವರ್ಷದಲ್ಲಿ ಸಾವು ಎಂದು ಇವರ ಜ್ಯೋತಿಷ್ಕರು ಇವರಿಗೆ ತಿಳಿಸಿರಬೇಕು ಎನ್ನಿಸಿತು ಇದನ್ನು ಇವರು ನಂಬಿದ್ದಾರೆ ಹುಡುಗ ನೀರಿನಲ್ಲಿ ಮುಳುಗಿ ಎದ್ದದ್ದಕ್ಕೆ ಅರ್ಥ ಒಬ್ಬ ಉತ್ತರಕ್ರಿಯೆಗಳನ್ನು ಮಾಡಬೇಕಾಗುತ್ತದೆ ಎಂದು ಇರಬೇಕು ಆಗ ನಾನು ಇವರಿಗೆ, "ಈಗ ನನಗೆ ತುಂಬಿದ್ದು ೬೯ ವರ್ಷ, ೯೦ ಅಲ್ಲ," ಎಂದಷ್ಟೇ ಉತ್ತರ ಬರೆದೆ. ಕಳೆದ ವರ್ಷ ಇವರು ಒಂದು ವ್ಯಾಧಿಗೆ ಈಡಾದರು ಸ್ಥಳದ ವೈದ್ಯರು ಕೆಲವು ದಿನ ನೋಡಿ, "ನೀವು ಚಿಕಿತ್ಸೆಗೆ ಬೊಂಬಾಯಿಗೆ ಹೋಗುವುದು ಒಳ್ಳೆಯದು," ಎಂದರು ಜ್ಯೋತಿಷ್ಕರು, "ಗ್ರಹಗಳ ಸ್ಥಿತಿ ಚೆನ್ನಾಗಿಲ್ಲ, ಒಂದು ತಿಂಗಳು ಬಿಟ್ಟುಕೊಂಡು ಹೋಗಿ," ಎಂದರು ಬೇಂದ್ರೆ ಬೇರೆ ಯಾರ ಮಾತನ್ನೂ ಕೇಳದೆ, ಒಂದು ತಿಂಗಳು ಧಾರವಾಡದಲ್ಲಿ ಕಳೆದು ಆ ಬಳಿಕ ಬೊಂಬಾಯಿಗೆ ಹೋದರು. ಅಲ್ಲಿಯ ವೈದ್ಯರು ತಮ್ಮಿಂದಾದ ಚಿಕಿತ್ಸೆಯನ್ನೆಲ್ಲಾ ನಡೆಸಿದರು, ಉಪಯೋಗ ಆಗಲಿಲ್ಲ. ಒಂದು ತಿಂಗಳು ಆಸ್ಪತ್ರೆಯಲ್ಲಿದ್ದು ಬೇಂದ್ರೆ ತೀರಿಕೊಂಡರು ಒಂದು ತಿಂಗಳು ಮುಂದಾಗಿ ಬೊಂಬಾಯಿಗೆ ಹೋಗಿದ್ದರೆ ತೀರಿಕೊಳ್ಳುತ್ತಿರಲಿಲ್ಲ ಎಂದು ನಾನು ಹೇಳಲಾರೆ ಇರುತ್ತ, ಸ್ಥಳದ ವೈದ್ಯರು ಹೇಳಿದ ಒಡನೆ ಮುಂಬಯಿಗೆ ಹೋಗಿದ್ದರೆ ಒಳಿತಾಗುತ್ತಿತ್ತೇನೋ ಎಂಬ ಎಣಿಕೆ ನನ್ನನ್ನು ಈಗಲೂ ಕಾಡುತ್ತಿದೆ.

ಗ್ರಹಗಳ ಸ್ಥಿತಿ, ಲಗ್ನಗಳ ಮಾತು. ಇದಕ್ಕೆ ಸಂಬಂಧಿಸಿದ ಹತ್ತು ಸಂಗತಿ ನಮ್ಮ ಜನರ ಜೀವನದಲ್ಲಿ ಸದಾ ತನ್ನ ಪ್ರಭಾವವನ್ನು ಬೀರುತ್ತಿವೆ. ಮಂಗಳ ವಾರ, ಶನಿವಾರ, ಶುಭ ಕರ್ಮಗಳಿಗೆ ಕೂಡದ ದಿನಗಳು. ಆ ದಿನಗಳಲ್ಲಿ

ನಮ್ಮಲ್ಲಿ ಹಿರಿಯ ಜನ ಕ್ಷೌರ ಮಾಡಿಸಿಕೊಳ್ಳುತ್ತಿರಲಿಲ್ಲ, ಪ್ರಯಾಣ ಹೊರಡುತ್ತಿರಲಿಲ್ಲ. ಯಾರನ್ನೂ ಎಲ್ಲಿಗೂ ಕಳುಹಿಸುತ್ತಿರಲಿಲ್ಲ. ಏನನ್ನಾದರೂ ಅಪೇಕ್ಷಿಸುತ್ತ ಯಾರನ್ನಾದರೂ ಕಾಣಬೇಕಾದರೆ ಬೇರೆ ದಿನಗಳನ್ನು ಹುಡುಕು ವರು ಇದರಂತೆ ಸ್ವಲ್ಪ ಮುಖ್ಯವಾದ ವಿಷಯಗಳಲ್ಲಿ ಮೊದಲ ಹೆಜ್ಜೆ ಇಡಬೇಕಾದರೆ ಒಳ್ಳೆಯ ದಿನ ನೋಡಿ ಹೇಳಿ ಎಂದು ಜ್ಯೋತಿಷ್ಯರನ್ನು ಕೇಳುವರು ಜ್ಯೋತಿಷ್ಯರೂ ಸಹ ಪಂಚಾಂಗವನ್ನು ನೋಡಿ ಇಂಥ ಇಂಥ ದಿನ ಒಳ್ಳೆಯದೆಂದು ಹೇಳುವರು

ಈಗಂತೂ ವಾರಭವಿಷ್ಯ ಎನ್ನುವುದು ವೃತ್ತಾಂತ ಪತ್ರಿಕೆಗಳ ಒಂದು ಅನಿವಾರ್ಯ ಅಂಗವೇ ಆಗಿದೆ ಬಹುಕಾಲ ಇದನ್ನು ನಾನು ಕನ್ನಡ ಪತ್ರಿಕೆ ಗಳಲ್ಲಿ ಮಾತ್ರ ಕಾಣುತ್ತಿದ್ದೆನು ಇದು ಈಗ ಇಂಗ್ಲಿಷ್ ಪತ್ರಿಕೆಗಳಲ್ಲಿಯೂ ಕಾಣುತ್ತಿದೆ ಇಂಗ್ಲೆಂಡ್, ಅಮೇರಿಕಾ ಪತ್ರಿಕೆಗಳಲ್ಲಿ ಕೂಡ ಇಂಥ ವಿಷಯದಲ್ಲಿ ನಂಬಿಕೆ ಇರುವ ಸೂಚನೆ ಕಾಣುತ್ತದೆ.

## ವ್ಯಾಧಿಗಳನ್ನು ಕುರಿತ ನಂಬಿಕೆಗಳು

ವ್ಯಾಧಿಗಳನ್ನು ಕ್ಷುದ್ರ ದೇವತೆಗಳ ಚೇಷ್ಟೆ ಎಂದು ತಿಳಿದು ಆ ದೇವತೆ ಗಳನ್ನು ಒಲಿಸಿಕೊಂಡು ವ್ಯಾಧಿಯಿಂದ ಗುಣ ಪಡೆಯುವ ಕ್ರಮ ನಮ್ಮಲ್ಲಿ ಬಹು ಹಳೆಯ ಸಂಪ್ರದಾಯ. ಬಹು ಹಳೆಯ ಒಂದು ವ್ಯಾಧಿಗೆ ನಮ್ಮಲ್ಲಿ ಹೆಸರೇ 'ದೊಡ್ಡಮ್ಮ' ಎಂದು ಆಗಿದೆ. ಇದರಂತೆಯೇ ಕಾಣುವ, ಇಷ್ಟು ಕ್ರೂರವಲ್ಲದ ವ್ಯಾಧಿ 'ಚಿಕ್ಕಮ್ಮ'. ದೊಡ್ಡಮ್ಮ ಬಾರದಂತೆ ಮೊದಲಲ್ಲೇ ಮಾಡಿಸಿಕೊಳ್ಳುವ ಚಿಕಿತ್ಸೆಯನ್ನು ನಾವು 'ಅಮ್ಮ' ಹಾಕಿಸಿಕೊಳ್ಳುವುದು ಎಂದೇ ಕರೆಯುತ್ತೇವೆ ಎಂದರೆ ವ್ಯಾಧಿ ದೈವದ ಕ್ರೌರ್ಯದ ಫಲ ಎನ್ನುವ ನಂಬಿಕೆ ತಪ್ಪಿದರೂ ಅದರ ಹೆಸರು ಹಾಗೆಯೇ ಉಳಿದಿದೆ. ಇದರಂತೆ, ವಾಂತಿ ಭೇದಿ ರೋಗ ಇಂಗ್ಲೀಷಿನಲ್ಲಿ ಕಾಲರಾ ಎನ್ನುವುದು ನಮ್ಮಲ್ಲಿ ಮಾರಿಕಾ , ರೋಗ ಮಾರಿಯಿಂದ ಬಂದದ್ದು ಎನ್ನುವುದು ಸಂಪ್ರದಾಯದ ನಂಬಿಕೆ. ಈಗ ಇದಕ್ಕೆ ವಿರೋಧಕ ಚಿಕಿತ್ಸೆ ಒಂದು ಇದೆ ಜನ ಅದನ್ನು ಪಡೆಯುತ್ತಿದ್ದಾರೆ. ಆದರೂ ಆ ವ್ಯಾಧಿ ಕಂಡಾಗ ಮಾರಿ ದೇವತೆಗೆ ಬಲಿ ಒಪ್ಪಿಸುವುದು ತಪ್ಪಿಲ್ಲ. ಇಷ್ಟೇ ಅಲ್ಲ, ನನಗೆ ತಿಳಿದಂತೆ ಹೆಗ್ಗಡದೇವನ ಕೋಟೆ ತಾಲ್ಲೂಕಿನ ಜನ ಒಂದು

ಗ್ರಾಮದಲ್ಲಿ ಪ್ಲೇಗ್ ರೋಗ ಕಂಡು ಕೆಲವು ಸಾವು ಆದವು. ದೇವಿ ಗ್ರಾಮದ ನಿವಾಸಿಗಳ ಒಬ್ಬನ ಮೇಲೆ ಆವೇಶವಾಗಿ ಬರುತ್ತಾಳೆ ಎನ್ನುವುದು ನಿವಾಸಿಗಳ ನಂಬಿಕೆ. ಗ್ರಾಮದ ಹಿರಿಯರು ಊರ ದೇವರನ್ನು ಒಲಿಸಲು ಬಲಿ ಕೊಟ್ಟು, "ತಾಯಿ, ಎಷ್ಟು ಜನರನ್ನು ಬಲಿ ತೆಗೆದುಕೊಂಡು ನಿಲ್ಲಿಸುತ್ತೀಯೆ?" ಎಂದು ಪ್ರಶ್ನೆ ಕೇಳಿದರು ದೇವಿ ಆ ಮನುಷ್ಯನ ಮೇಲೆ ಬಂದಳು "ಒಂಬತ್ತು ಜನವನ್ನು ತೆಗೆದುಕೊಳ್ಳುತ್ತೇನೆ" ಎಂದು ತಿಳಿಸಿದಳು. ಗ್ರಾಮದ ಹಿರಿಯರು, "ಸರಿ, ಒಂಭತ್ತು ಜನರ ಸಾವು ತಪ್ಪಿದ್ದಲ್ಲ, ಊರನ್ನು ಬಿಟ್ಟು ಗುಡಿಸಲುಗಳಿಗೆ ಹೋಗಿ ಆಗುವುದೇನು ?" ಎಂದರು ಊರಿನ ಜನ ಮನೆಗಳಲ್ಲೇ ಇದ್ದು ಬಿಟ್ಟರು ರೋಗ ಹರಡಿತು ಸಾವಿನ ಮೇಲೆ ಸಾವು ಆಯಿತು. ಗ್ರಾಮದ ಪಟೇಲ ಊರಿನಲ್ಲಿ ಪ್ಲೇಗ್ ಬಂದಿದೆ ಎಂದು ವರದಿ ಕೂಡ ಮಾಡಲಿಲ್ಲ ಒಂಭತ್ತಲ್ಲ, ಹದಿನೆಂಟು ಜನ ಸತ್ತರು; ಮೂವತ್ತಾರು ಜನ ಸತ್ತರು. ಮಾರಿಯಲ್ಲಿ ನಂಬಿಕೆ ಕೆಟ್ಟ ಒಬ್ಬ ಮನುಷ್ಯ ಈ ಪಾಡನ್ನು ತಿಳಿಸಿ ಅಧಿಕಾರಿಗಳಿಗೆ ಒಂದು ಮೂಕ ಅರ್ಜಿಯನ್ನು ಕಳುಹಿಸಿದ ಇದು ನನ್ನ ಕೈಗೆ ಬಂದು, ನಾನು ಒಡನೆಯೇ ಗ್ರಾಮಕ್ಕೆ ಹೋದೆ ಅರ್ಜಿಯಲ್ಲಿ ಹೇಳಿದ ಮಾತು ದಿಟ ಎಂದು ಕಂಡಿತು. ಗ್ರಾಮದ ಅಧಿಕಾರಿಗಳನ್ನು ಗದರಿಸಿ, "ನಿಮ್ಮ ಅಜಾಗ್ರತೆಗೆ ದೇವರನ್ನು ಹೊಣೆ ಮಾಡಬೇಡಿ ಒಡನೆ ಊರು ಬಿಟ್ಟು ಗುಡಿಸಲುಗಳಿಗೆ ಹೋಗಿ," ಎಂದೆ. ಅವರು "ಮಹಾಸ್ವಾಮಿ, ದೇವರೇ ತನ್ನ ಮಾತು ನಡೆಸದೆ ಮೋಸ ಮಾಡಿದರೆ, ಊರು ಬಿಟ್ಟು ಗುಡಿಸಲಿಗೆ ಹೋಗಿ ಆಗೋದೇನು ?" ಎಂದರು. "ದೇವರ ಮಾತನ್ನು ನಿಮಗೆ ತಿಳಿಸಿದವರು ಯಾರು ?" ಎಂದೆ ಅವರು ಆ ಮನುಷ್ಯನನ್ನು ಬರಮಾಡಿದರು ನಾನು ಅವನಿಗೆ "ಎಲಪ್ಪಾ, ದೇವರು ನಿನ್ನ ಮೇಲೆ ಬಂದದ್ದು ಸುಳ್ಳು. ದೇವರೇ ಬಂದಿದ್ದು, ನೀನು ಆ ಮಾತನ್ನು ಹೇಳಿದ್ದರೆ ಅದು ಸುಳ್ಳಾಗುತ್ತಿರಲಿಲ್ಲ ಏನೆನ್ನುತ್ತೀ ?" ಎಂದೆ. ಸುಳ್ಳಾಡಿದರೆ ಹೊಡೆಯುತ್ತೇನೆ, ಜೋಕೆ," ಎಂದೆ. ಅವನು ಬಾಯಿ ತೆರೆಯಲಿಲ್ಲ, ಓಟಕಿತ್ತ. ಆಮೇಲೆ ಗ್ರಾಮದ ಮುಖಂಡರಿಗೆ, "ನನ್ನ ಮಾತು ಕೇಳಿ; ಒಡನೆಯೇ ಗುಡಿಸಲು ಕಟ್ಟಲು ಏರ್ಪಾಡು ಮಾಡಿ," ಎಂದು ಹೇಳಿ, ಇದನ್ನು ನೋಡಿಕೊಳ್ಳುವಂತೆ ತಾಲ್ಲೂಕು ಅಧಿಕಾರಿಗಳಿಗೆ ಕೆಲಸವನ್ನೊಪ್ಪಿಸಿ ಬಂದೆ.

ಇದರಂತೆ ಬೇರೆ ಮೂಢನಂಬಿಕೆ ಹಲವು ಉಂಟು. ಒಂದು ಗ್ರಾಮಕ್ಕೆ ಇನ್ನಷ್ಟು ನಿವೇಶನ ಬೇಕು. ಅದರ ದಕ್ಷಿಣಕ್ಕೆ ಎಷ್ಟು ಒಳ್ಳೆಯ ನೆಲ ಇದ್ದರೂ ಅದನ್ನು ನಿವೇಶನವಾಗಿ ಸೇರಿಸಿಕೊಳ್ಳಲು ಜನ ಒಪ್ಪುವುದಿಲ್ಲ. ಅದು ಯಮನ ದಿಕ್ಕು. ಗ್ರಾಮದ ಜೋಯಿಸರು "ಅದು ಒಳ್ಳೆಯ ನೆಲ ಅಲ್ಲ" ಎನ್ನುತ್ತಾರೆ. ಗ್ರಾಮದ ಹಿರಿಯರು, "ಸ್ವಾಮಿ, ನಮಗೆ ಆ ನೆಲ ಬೇಡ, ಅದರಲ್ಲಿ ಸಾಲಾವಳಿ ಇಲ್ಲ" ಎನ್ನುತ್ತಾರೆ. ಇಂಥ ಮಾತು ಇನ್ನೂ ಹತ್ತು. ಎಲ್ಲದರಲ್ಲೂ ಹಿಂದಿನಿಂದ ಬಂದ ಯಾವುದೋ ನಂಬಿಕೆ, ಯಾವುದೋ ಒಳ್ಳೆಯ ಏರ್ಪಾಡಿಗೆ ಅಡ್ಡಿಯಾಗಿ ಬರುತ್ತದೆ.

ವ್ಯಾಧಿಗೆ ಕಾರಣ ಕ್ರೂರ ದೈವ ಎಂದು ನಂಬಿ ಉಪಶಮನಮಾಡಲು ಯತ್ನಿಸುವ ಸಂದರ್ಭ ಇಂಥವು ಹಲವು ಉಂಟು. ಶಿವಾರಪಟ್ಟಣದ ನಮ್ಮ ಪರಿಚಯದ ಬಾಳು ಎಂಬ ಬೆಳೆದ ಹುಡುಗ ಕೆಟ್ಟಬಾಳು ಬಾಳಿ ಒಂದು ಕ್ರೂರ ವ್ಯಾಧಿಯನ್ನು ತಂದುಕೊಂಡ ಮಾತನ್ನು ನನ್ನ 'ಭಾವ' ಪುಸ್ತಕದಲ್ಲಿ ಹೇಳಿದ್ದೇನೆ. ವ್ಯಾಧಿಯ ದೈವವನ್ನು ರೋಗಿಯ ಮೈಯಿಂದ ಸೆಳೆದು ಮಣ್ಣಿನಿಂದ ಮಾಡಿದ ಅವಳ ಒಂದು ಮೂರ್ತಿಯಲ್ಲಿ ಇರಿಸಿ ಆ ಮೂರ್ತಿಯನ್ನು ಊರಿಂದ ಹೊರಕ್ಕೆ ಅಟ್ಟಿ ಎಂದು ಯಾರೋ ಸೂಚಿಸಿದರು. ಇದನ್ನು ಮಾಡಬಲ್ಲ ಒಬ್ಬ ಇದ್ದಾನೆ ಎಂದು ಸಹ ಹೇಳಿದರು. ತಂದೆ ಆ ಮನುಷ್ಯನನ್ನು ಬರ ಮಾಡಿದರು. ಪೂಜೆ ಮಾಡಿಸಿದರು, ದೇವತೆಯನ್ನು ಮೂರ್ತಿಯಲ್ಲಿ ಸೇರಿಸಿದ ಮೇಲೆ ಅದನ್ನು ಊರಿಂದ ಹೊರಕ್ಕೆ ಒಯ್ಯುವ ವೇಳೆ ಅದನ್ನು ಹುಡುಗರು ನಾವು ಯಾರೂ ನೋಡಬಾರದು ಎಂದು ನಮ್ಮ ಉಪಾಧ್ಯಾಯರು ನಮ್ಮನ್ನು ಕೋಣೆಯಲ್ಲಿ ಸೇರಿಸಿ, ಕಿಟಕಿ ಬಾಗಿಲುಗಳನ್ನು ಕದಗಳನ್ನು ಮುಚ್ಚಿದ್ದದ್ದು ನನಗೆ ಈಗಲೂ ಜ್ಞಾಪಕ.

ಇಂಥ ಸಂದರ್ಭಗಳಲ್ಲಿ ಮಂತ್ರವಾದಿಗಳೆಂಬ ಜನ ವಿಧಿಸುವ ಕ್ರಮ ಕೆಲವು ಇಂಥ ನಾಚಿಕೆಗೇಡಿನವು, ಅವನ್ನು ವರ್ಣಿಸುವುದು ಸಭ್ಯ ಅಲ್ಲ. ಈಗಲೂ ಬೆಂಗಳೂರಿನಲ್ಲಿ ನಮ್ಮ ವಿಸ್ತರಣದಲ್ಲಿ, ನಮ್ಮ ಪಕ್ಕದ ವಿಸ್ತರಣಗಳಲ್ಲಿ, ಮೂರು ದಾರಿ ಸೇರುವ ಸ್ಥಳಗಳಲ್ಲಿ ಅನೇಕವೇಳೆ ಬಣ್ಣಬಣ್ಣದ ಅನ್ನದ ಉಂಡೆಗಳು, ಎಲೆ ಅಡಿಕೆ, ಹಣ್ಣು, ಒಂದುಕಡೆ ಬಿದ್ದಿರುವುದನ್ನು ಜನ ಕಾಣುತ್ತೇವೆ. ಇಂಥ ಸಂದರ್ಭಗಳೆಲ್ಲ ಕಾಯಿಲೆ ಬಿದ್ದ ಯಾರನ್ನೋ ಉಳಿಸುವುದಕ್ಕೆ ಬಂಧುಗಳು

ಕ್ರೂರ ದೈವ ಒಂದನ್ನು ಒಲಿಸಿಕೊಳ್ಳಲು ಮಾಡಿದ ಒಂದು ಯತ್ನದ ಸಂಕೇತಗಳು.

ಈ ಪಟ್ಟಿಯನ್ನು ಇನ್ನೂ ಬೆಳೆಸಬಹುದು ಶಕುನ. ಅಪಶಕುನಗಳ ಮಾತು ಜನಜನಿತವಾಗಿದೆ ಕೆಲಸಕ್ಕೆ ಹೊರಟಾಗ ದಾರಿಯಲ್ಲಿ ಹೆಂಡತಿಯನ್ನು ಕಳೆದುಕೊಂಡ ಗಂಡು, ಗಂಡನನ್ನು ಕಳೆದುಕೊಂಡ ಹೆಣ್ಣು ಕಂಡರೆ ಕೆಲಸ ಕೆಡುತ್ತದೆ ಒಳ್ಳೆಯ ಸಂಗತಿಯ ಒಂದು ಮಾತನಾಡುತ್ತಾ ಕುಳಿತಿರುವಾಗ ಜೊತೆಗಿದ್ದ ಒಬ್ಬರು ಒಂಟ್ಟಿಸೀನು ಸೀನಿದರೆ, ಇದೇ ಕೇಡು, ಇತ್ಯಾದಿ.

ಇಂಥ ನಂಬಿಕೆ ನಮ್ಮಲ್ಲಿ ಮಾತ್ರ ಇದೆ ಎಂದಲ್ಲ. ಇತರ ದೇಶಗಳಲ್ಲಿ, ಇತರ ಧರ್ಮಗಳಲ್ಲಿ ಸಹ ಉಂಟು ನಮ್ಮಲ್ಲಿ ಭಾರತ ಯುದ್ಧದ ಎರಡು ಪಕ್ಷದ ಸೈನ್ಯದ ಸಂಖ್ಯೆಯ ಕಾರಣದಿಂದ ಹನ್ನೊಂದು ಏಳು ಕೆಟ್ಟ ಅಂಕೆಗಳಾಗಿವೆ, ಕ್ರೈಸ್ತರಲ್ಲಿ ಹದಿಮೂರು ಇಂಥ ಅಂಕೆ, ಮುಸ್ಲಿಮರಲ್ಲಿ ಇದು ತೀನ್‌ತೇರಾ, ಮೂರು ಹದಿಮೂರು ಎಂದೋ ಯಾರಿಗೋ ಯಾವುದೋ ಕೆಟ್ಟದ್ದು ಆದದ್ದನ್ನ ಮನಸ್ಸಿಗೆ ತರುವ ಅಂದಿನ ಒಂದು ಸಂದರ್ಭ ಕೆಟ್ಟದ್ದೆನಿಸುತ್ತದೆ, ಒಲ್ಲದೆ ಹೋಗುತ್ತವೆ, ನೆನಪಿನಿಂದ ಚೇತನ ಕಷ್ಟಪಡುತ್ತದೆ ಇದು ಮನುಷ್ಯರ ಸ್ವಭಾವ

## ಪವಾಡಗಳು, ಸಿದ್ಧಿಗಳು

ರಾಮಕೃಷ್ಣ ಪರಮಹಂಸರು, ರಮಣ ಮಹರ್ಷಿಗಳು, ರಾಮದಾಸರಂಥ ಜನರು ಸನಾತನ ಧರ್ಮದ ಒಳ್ಳೆಯ ಲಕ್ಷಣಗಳನ್ನು ಪೋಷಿಸಿ ಉಪದೇಶ ಮಾಡುತ್ತಿರುವಲ್ಲಿ ಕೆಲವು ದಕ್ಷರಾದ ಜನ, ಇಷ್ಟು ಶುಭ ಅಲ್ಲದ ಲಕ್ಷಣಗಳನ್ನು ಮುಖ್ಯಮಾಡಿ, ಗುರುಗಳೆಂದು ನಡೆದುಕೊಂಡದ್ದು ಕಾಣುತ್ತದೆ ಇಂಥ ಒಂದು ಪಂಥ 'ನಾಯಿ' ಎಂಬ ಮುಸ್ಲಿಮ್ ಸಂತರು ಆರಂಭಿಸಿದ್ದು. ಗುರು ಮುಸಲ್ಮಾನ ಆಗಿ ಜನ್ಮ ತಳೆದರೆಂದು ಪ್ರತೀತಿ ಇರುತ್ತ ಈತ ಹಿಂದೂ ಧರ್ಮದ ಭಕ್ತಿಪಂಥದ ಒಬ್ಬ ಪ್ರವರ್ತಕರಾದರು. ಪವಾಡಗಳನ್ನು ನಡೆಸುವ ತಪಸ್ವಿ ಎಂದು ಹೆಸರುಗಳಿಸಿದರು. ಮುಖ್ಯವಾಗಿ ಈ ದೃಷ್ಟಿಯಿಂದ, ಇವರ ಪರಿವಾರದ ಸಮುದಾಯ ಬಹು ದೊಡ್ಡದಾಗಿ ಬೆಳೆಯಿತು ಉದಾಹರಣೆಗೆ ಒಂದು ಕಥೆ. ಒಂದುಬಾರಿ ಗುರುಗಳ ಜೊತೆಗೆ ಕೆಲವರು ಶಿಷ್ಯರು ಒಂದು

ಯಾತ್ರಾಸ್ಥಳಕ್ಕೆ ಹೋಗುತ್ತ ಒಂದು ಬೆಟ್ಟವನ್ನು ಏರುತ್ತಿದ್ದರು ಏರಿ ಏರಿ ದಣಿದು ಮೆಟ್ಟಿಲುಗಳ ಮಧ್ಯೆ ಒಂದು ಕಡೆ ಸ್ವಲ್ಪಹೊತ್ತು ಕುಳಿತರು. ಶಿಷ್ಯನೊಬ್ಬನಿಗೆ ದಾಹ ಆಯಿತು ಅವನಿಗೆ ಕುಡಿಯುವ ನೀರು ಬೇಕು. ಅಲ್ಲಿ ಅದು ಎಲ್ಲಿಂದ ಬರಬೇಕು? ಅವನು ಗುರುವಿಗೆ ಇದನ್ನು ತಿಳಿಸಿದನು ಗುರು ಶಿಷ್ಯನಿಗೆ, "ನೀನು ಕುಳಿತಿದ್ದೀಯಲ್ಲ, ಆ ಸ್ಥಳವನ್ನು ಬಿಟ್ಟು ಏಳು," ಎಂದರು ಶಿಷ್ಯನು ಎದ್ದನು. ಗುರು, "ನೀನು ಕುಳಿತಿದ್ದೀಯಲ್ಲ ಆ ಕಲ್ಲನ್ನು ಎತ್ತು," ಎಂದರು. ಶಿಷ್ಯನು ಕಲ್ಲನ್ನು ಎತ್ತಿದನು. ಅದರ ಅಡಿಯಲ್ಲಿ ತಿಳಿಯಾದ ಕುಡಿಯುವ ನೀರಿನ ಜೊಜೆ ಇತ್ತು ಶಿಷ್ಯ ನೀರನ್ನು ಕುಡಿದು ದಾಹವನ್ನು ತೀರಿಸಿಕೊಂಡನು. ಈ ಪಂಥದ ಒಂದು ಉತ್ಸವದಲ್ಲಿ ಅನುಯಾಯಿಗಳು ಈ ಕಥೆಯನ್ನು ಹೇಳಿದ್ದನ್ನು ನಾನು ಕೇಳಿದನು ಗುರುವಿನ ಮಹಿಮೆಯನ್ನು ಸಿದ್ಧಾಂತಮಾಡುವ ಇಂಥ ಕಥೆ ಅನೇಕ ಇವೆ ಎಂದು ಅನುಯಾಯಿಗಳು ಹೇಳಿದರು ಆ ದಿನ ಭಕ್ತವೃಂದದಲ್ಲಿ ಸೇರಿದ್ದ ಒಬ್ಬರು, ಗುರುಗಳಚರಿತ್ರೆಯನ್ನು ಒಂದು ಹರಿಕಥೆಯಂತೆ ಪ್ರತಿಪಾದಿಸಿದರು ಅಂದಿನ ಕೂಟದ ಪ್ರವರ್ತಕರಲ್ಲಿ ಒಬ್ಬ ಮಹಿಳೆ ಮುಖ್ಯರು. ಕಥನಕಾರರು ಕಥೆಯನ್ನು ಹೇಳುವ ಮೊದಲು ಆಕೆ ಹಾಲಿನ ಬಟ್ಟಲೊಂದನ್ನು ಎತ್ತಿಕೊಂಡು ತಾನು ಒಂದು ಗುಟುಕು ಹಾಲನ್ನು ಕುಡಿದು ಉಳಿದ ಹಾಲನ್ನು ಕಥನಕಾರರಿಗೆ ಪ್ರಸಾದವಾಗಿ ಕಳುಹಿಸಿದರು. ಎಲ್ಲರ ಎದುರಲ್ಲಿ ಈಕೆ ತನಗೆ ಹಿರಿಯಳೆಂದು ಒಪ್ಪಿಕೊಳ್ಳುವುದು ಕಥನಕಾರರಿಗೆ ಇಷ್ಟವಿಲ್ಲ ಎನ್ನುವುದು ಕಾಣುತ್ತಿತ್ತು. ಆದರೆ ಮಾಡುವುದೇನು? ಅದೇ ಎಲ್ಲರ ಎದುರಲ್ಲಿ ಆಕೆಯನ್ನು ಅಲಕ್ಷಿಸಬಹುದೇ? ವಿಧಿಯಿಲ್ಲದೆ ಆತ ಪ್ರಸಾದದ ಹಾಲನ್ನು ಕುಡಿದರು, ಕಥೆಯನ್ನು ಹೇಳಿ ಮುಗಿಸಿದರು ಅಂದು ನನ್ನನ್ನು ಕರೆದುಕೊಂಡು ಹೋದ ಸ್ನೇಹಿತರಲ್ಲಿ ಕೆಲವರನ್ನು ನಾನು ಹತ್ತು ಸಂದರ್ಭದಲ್ಲಿ ನೋಡಿದ್ದೆನು ಆಮೇಲೆ ಹತ್ತು ಸಂದರ್ಭದಲ್ಲಿ ನೋಡಿದೆನು. ಇವರು ಸಾಯಿಬಾಬಾ ಗುರುವಿನ ಭಕ್ತರು ಎಂಬ ಕಾರಣದಿಂದ ಇವರ ನಡವಳಿಕೆ ಇಂಥ ಭಕ್ತರಲ್ಲದ ಜನರ ನಡೆವಳಿಕೆಯಿಂದ ಯಾವ ರೀತಿಯಲ್ಲಿಯೂ ಬೇರೆಯಾಗಿದ್ದಿತು ಎಂದು ನನಗೆ ಕಾಣಲಿಲ್ಲ.

ಸುಮಾರು ಅರವತ್ತು ವರ್ಷದ ಹಿಂದಿನ ಮಾತು ನನ್ನ ಪರಿಚಯದ ಆಂಗ್ಲ ಪ್ರಾಧ್ಯಾಪಕರು ಶ್ರೀ. ಬಿ. ಎಸ್. ನಾಗೇಶರಾಯರು ಆಚಾರ್ಯ ತರುಣ

ರೊಬ್ಬರನ್ನು ಕುರಿತು ನನಗೆ ಅನೇಕ ಸಂಗತಿಗಳನ್ನು ಹೇಳಿದರು. ಆ ತರುಣ ನರಸಿಂಹದೇವರ ಉಪಾಸಕರಂತೆ, ದೇವರ ಅನುಗ್ರಹದಂತೆ ಪವಾಡಗಳನ್ನು ಮಾಡುವರು. ಅಂಥ ಪವಾಡಗಳಲ್ಲಿ ಒಂದು ಇದು ಒಂದುಸಲ ಇವರ ಅನುಯಾಯಿ ಸಮುದಾಯ ಒಂದು ಸಂತರ್ಪಣೆಗೆ ಏರ್ಪಾಡು ಮಾಡಿತ್ತು. ಸುಮಾರು ಮುನ್ನೂರು ಜನ ಬರಬಹುದು ಎಂದು ನಿರೀಕ್ಷೆ ಅಷ್ಟು ಜನಕ್ಕೆ ಎಂದು ಊಟ ಸಿದ್ಧವಾಗಿದೆ ಆದರೆ ಆರಂಭದಲ್ಲಿ ೩೦೦ ಜನರೇ ಬಂದಿದ್ದರೂ ಆಮೇಲೆ ಮೆಲ್ಲಮೆಲ್ಲನೆ ಇಬ್ಬರು ನಾಲ್ವರು, ಮೂವರು ನಾಲ್ವರು, ಬಂದು ಬಂದು ಸೇರಿ ಕೊನೆಗೆ ಹತ್ತಿರ ಹತ್ತಿರ, ಸಮುದಾಯ ಒಂದು ಸಾವಿರದಷ್ಟು ಆಯಿತು. ಇಷ್ಟು ಜನಕ್ಕೆ ಊಟ ಒದಗಿಸುವುದು ಹೇಗೆ ? ಪದಾರ್ಥಗಳನ್ನು ತರಿಸಿ ಮತ್ತೆ ಅಡಿಗೆ ಮಾಡಿಸಬಹುದೇ ? ಇವರೆಲ್ಲ ಯೋಚಿಸುತ್ತಿದ್ದಾರೆ. ತರುಣ ಉಪಾಸಕ, "ಅಂಥದೆಲ್ಲ ಬೇಡ, ದೇವರು ನಡೆಸುತ್ತಾನೆ. ಎಲ್ಲರಿಗೂ ಎಲೆ ಹಾಕಿಸಿ, ನಾನೊಬ್ಬ ಒಳಗಿಂದ ಪದಾರ್ಥಗಳನ್ನು ತಂದುಕೊಡುತ್ತೇನೆ ನೀವು ಯಾರೂ ಒಳಗೆ ಬರಬೇಡಿ ನಾನು ತಂದುಕೊಟ್ಟದ್ದನ್ನು ಎಲ್ಲರಿಗೂ ಬಡಿಸಿ" ಎಂದು ಹೇಳಿದರು. ಹೀಗೆಯೇ ನಡೆಯಿತು ಏನು ಆಶ್ಚರ್ಯ ! ಮುನ್ನೂರು ಜನಕ್ಕೆ ಮಾಡಿದ್ದ ಅಡಿಗೆಯನ್ನೇ ಹೊರಕ್ಕೆ ತಂದುಕೊಟ್ಟು ಆ ಮನುಷ್ಯ, ಸಮಾರಾಧನೆ ಚೆನ್ನಾಗಿ ನಡೆಯುವಂತೆ ಮಾಡಿಬಿಟ್ಟಿದ್ದರು ನರಸಿಂಹನ ಉಪಾಸನೆಯಿಂದ ಕೊಂಚವಾಗಿದ್ದ ಅಡಿಗೆ ದೊಡ್ಡದಾಯಿತು. ತರುಣ ತುಂಬಾ ಮಹಿಮಾವಂತರು ಇದು ನಾಗೇಶರಾಯರು ನನಗೆ ಹೇಳಿದ ಮಾತು. ನಾಗೇಶರಾಯರು ಸುಳ್ಳಾಡುವವರಲ್ಲ, ಎಂದಮೇಲೆ ಈ ಸಂದರ್ಭದಲ್ಲಿ ಒಂದು ಪವಾಡ ನಡೆಯಿತು ಎಂದು ಒಪ್ಪಬೇಕಲ್ಲವೆ ? ಒಪ್ಪುವುದಿಲ್ಲ ಎಂದು ನಾವು ಹೇಳಿದರೆ, ಮಿತ್ರರು, "ನಿಮಗೆ ದೇವರಲ್ಲಿ ಭಕ್ತಿಯಿಲ್ಲ, ಭಕ್ತರಿಗಾಗಿ ಅವನು ಇಂಥ ವಿಚಿತ್ರಗಳನ್ನು ಮಾಡುತ್ತಾನೆ, ಇದನ್ನು ನೀವು ಕಾಣಿರಿ. ಕ್ರೈಸ್ತರ ಬೈಬಲ್‌ನಲ್ಲಿ ಕ್ರಿಸ್ತಗುರು ಒಮ್ಮೆ ಐದು ರೊಟ್ಟಿ ಮೂರು ಮೀನನ್ನು ಹಂಚಿ ನೂರಾರು ಜನರ ಹಸಿವನ್ನು ಇಂಗಿಸಿದರು ಎಂದು ಬರೆದಿದೆ ಕಾಣಿರಾ ದೂರ್ವಾಸ ಸಾವಿರಾರು ಶಿಷ್ಯರೊಡನೆ ಧರ್ಮರಾಜನ ಆಶ್ರಮಕ್ಕೆ ಹೋದಾಗ, ಶ್ರೀಕೃಷ್ಣ ಅಕ್ಷಯ ಪಾತ್ರೆಯಲ್ಲಿದ್ದ ಒಂದು ಅಗುಳನ್ನು ಬಾಯಿಗೆ ಹಾಕಿಕೊಂಡು ದೂರ್ವಾಸನ, ಸಾವಿರಾರು ಮಂದಿ ಅವನ ಶಿಷ್ಯರ, ಹಸಿವನ್ನು ತೀರಿಸಿದ ಎಂದು

ಮಹಾಭಾರತ ಹೇಳಿಲ್ಲವೇ ? ಇದೂ ಅಂಥದೇ ಒಂದು ಪ್ರಸಂಗ ಉಪಾಸಕ ತರುಣ ಒಂದು ಅಗುಳನ್ನು ಬಾಯಿಗೆ ಹಾಕಿಕೊಂಡರೆ ಆಯಿತು, ಮುನ್ನೂರು ಜನಕ್ಕೆಂದ ಅಡಿಗೆ ಸಾವಿರಾರು ಜನಕ್ಕೆ ತುಂಬುತ್ತದೆ," ಇತ್ಯಾದಿ ಇತ್ಯಾದಿ ಅಂತೂ ಇದು ಜನದ ನಂಬಿಕೆಯ ಮಾತು ನಾಗೇಶರಾಯರಿಗೆ ಈ ವಿಷಯದಲ್ಲಿ ಸಂದೇಹವೇ ಇರಲಿಲ್ಲ.

ಈಗ ಮುವ್ವತ್ತು ವರ್ಷದ ಹಿಂದಿನ ಮಾತು ನಮ್ಮ ಬೀದಿಯಲ್ಲಿ ಇದ್ದ ನಮ್ಮ ಹಿರಿಯ ಮಿತ್ರರು ನಿವೃತ್ತ ಪಶು ವೈದ್ಯ ಶ್ರೀ ಕೆ ಎನ್ ಶ್ರೀನಿವಾಸನ್ ರವರು ಒಂದುದಿನ ತಮ್ಮ ಮನೆಗೆ ಒಬ್ಬ ಮಹಿಳೆಯನ್ನು ಕರೆತಂದರು "ಆಕೆ ತುಂಬ ಮಹಿಮಾವಂತೆ, ಅನ್ನ ನೀರಿಲ್ಲದೆ ಹತ್ತಾರುದಿನ ಇದ್ದುಬಿಡುತ್ತಾರೆ, ಎಂದಿನಂತೆ ನಡೆದುಕೊಳ್ಳುತ್ತಾರೆ, ಅವರಲ್ಲಿ ಸ್ವಲ್ಪವೂ ಆಯಾಸ ಕಾಣುವುದಿಲ್ಲ," ಎಂದು ಮುಂತಾಗಿ ಜನರಿಗೆ ತಿಳಿಸಿದರು ಜನ ಅನೇಕರು ಹೋಗಿ ಆಕೆಯನ್ನು ನೋಡಿದರು ; ಅನ್ನ ನೀರಿಲ್ಲದೆ ಎಷ್ಟೋ ದಿನ ಇದ್ದೂ, ಕಳೆಗುಂದದೆ ಹೀಗಿರುವುದುಂಟೇ ಎಂದು ಆಶ್ಚರ್ಯಪಟ್ಟರು. ಕೆಲವು ದಿನದ ಬಳಿಕ ಈ ಮಿತ್ರರ ಮನೆಯಲ್ಲಿ ಯಾವುದೋ ಒಂದು ಉತ್ಸವದ ಏರ್ಪಾಡಾಯಿತು. ಅದಕ್ಕೆ ಪುರೋಹಿತರು ಶಾಸ್ತ್ರಿಗಳು ತಕ್ಕಷ್ಟು ಸಂಖ್ಯೆಯಲ್ಲಿ ಒಂದು ನೇರಿದರು. ಮಂತ್ರ ತಂತ್ರ ಕಲಾಪ ತಕ್ಕಷ್ಟು ನಡೆಯಿತು ಎಂದು ನಾನು ಕೇಳಿದೆ. ಯಾವುದೋ ಹೋಮ ನಡೆಯುತ್ತಿದ್ದ ಇದರಲ್ಲಿ ಕಳಶದ ಒಂದು ಚೆಂಬಿನ ಮೇಲೆ ಒಂದು ತೆಂಗಿನಕಾಯನ್ನ ಇಟ್ಟಿದೆ. ಮಹಿಮಾವಂತ ಹೆಣ್ಣುಮಗಳು ಒಂದುಕಡೆ ನಿಂತು ಕೆಲಸ ನಡೆಯುವುದನ್ನು ನೋಡಿಕೊಳ್ಳುತ್ತಿದ್ದಾರೆ ಭಕ್ತರಲ್ಲಿ ಒಬ್ಬರು ಬಂದು ಈ ಮಹಿಳೆಯ ಬಳಿ ನಿಂತರು. ಕೆಲನಿಮಿಷ ಆದಮೇಲೆ ಆಕೆ, ಇವರಿಗೆ, "ಕಳಶದ ಕಡೆ ನೋಡಿ" ಎಂದರು. ಇವರು ನೋಡಿದರು ಆಕೆ, "ತೆಂಗಿನಕಾಯಿ ಜುಟ್ಟಿನ ಮೇಲೆ ಒಂದು ನೀಲವರ್ಣದ ಬೆಳಕು ಇದೆ, ಅದು ನಿಮಗೆ ಕಾಣುತ್ತಿದೆಯೇ?' ಎಂದು ಕೇಳಿದರು ಇವರು ತಿರುಗಿ ಕಳಶದತ್ತ ನೋಡಿದರು. ನೀಲಿ ಬಣ್ಣದ ಬೆಳಕು ಇದೆಯೇ ಎಂದು ಕುತೂಹಲದಿಂದ ನಿಟ್ಟಿಸಿದರು. ಬೆಳಕು ಕಾಣಲಿಲ್ಲ ಆಕೆಗೆ, "ನನಗೇನೂ ಕಾಣಿಸಲಿಲ್ಲ," ಎಂದರು. ಆಕೆ, "ಹಾಗೆಯೇ ನೋಡುತ್ತಿರಿ, ಕಾಣುತ್ತದ, ನನಗೆ ಚೆನ್ನಾಗಿ ಕಾಣುತ್ತಿದೆ. ಕಾಣಬೇಕು, ನೋಡುತ್ತಿರಿ," ಎಂದರು. ಈ ಭಕ್ತನಿಗೆ ಆ

ಬೆಳಕು ಕೊನೆಗೂ ಕಾಣಲೇ ಇಲ್ಲ ಎಂದು ತೋರುತ್ತದೆ ಶ್ರೀನಿವಾಸನ್ ರವರು ನನಗೆ, "ಆಕೆಯು ಶಕ್ತಿ ನೋಡಿ, ನಮಗೆ ಯಾರಿಗೂ ಕಾಣದ ಬೆಳಕು ಆಕೆಗೆ ಕಾಣುತ್ತದೆ, ಆಕೆಯ ತಪಸ್ಸು ಅಂಥದು. ಅನ್ನ ಇಲ್ಲ ನೀರಿಲ್ಲ, ಎಷ್ಟು ದಿನ ಬೇಕಾದರೂ ಇದ್ದುಬಿಡುತ್ತಾರೆ ಆದರಿಂದ ಇಂಥ ಮಹಿಮೆ ಬೆಳೆಯುತ್ತದೆ," ಎಂದರು ಈ ಆಶ್ಚರ್ಯ ಕೆಲವು ದಿನ ನಡೆಯಿತು, ನಡೆದು ನಿಂತಿತು, ಆಮೇಲೆ ಈಕೆಯ ಸಂಗತಿ ಏನೇ ಆಗಲಿ ಕೇಳಿಬರಲಿಲ್ಲ.

ಸುಮಾರು ಇದೇ ದಿನಗಳಲ್ಲಿ ಬಸವನಗುಡಿ ರಸ್ತೆಯ ಶ್ರೀ ರಾಮಕೃಷ್ಣಾಶ್ರಮದ ಹಿಂಭಾಗದ ನಿವೇಶನಗಳಲ್ಲಿ ಆಗ ವಾಸವಾಗಿದ್ದ ಕಾಫಿ ಪ್ಲ್ಯಾಂಟರ್ ಶ್ರೀಮತಿ ಸಾಕಮ್ಮನವರ ನಿವಾಸಕ್ಕೆ ಒಬ್ಬ ಗುರು ಆಗಮಿಸಿದ್ದಾರೆ ಎಂದು ಜನರಲ್ಲಿ ಸುದ್ದಿ ಹರಡಿತು ಗುರು ಅತ್ಯಂತ ಮಹಿಮಾವಂತರು. ಕುಳಿತಿದ್ದಂತೆಯೇ ಕೈಬೀಸುತ್ತಾರೆ, ಅವರ ಕೈಗೆ ದೋಸೆ ಬರುತ್ತದೆ, ಭಸ್ಮ ಬರುತ್ತದೆ, ಕಲ್ಲಿನ ಲಿಂಗ ಬರುತ್ತದೆ, ಮುಂತಾಗಿ ಎಲ್ಲರ ಬಾಯಲ್ಲೂ ಪ್ರಶಂಸೆಯ ಮಾತು. ಈ ಗುರುಗಳ ಹೆಸರು ಸತ್ಯಸಾಯಿಬಾಬಾ. ಈ ಹೆಸರು ಆಂಧ್ರ ದೇಶದಲ್ಲಿ ಕೀರ್ತಿಗಳಿಸಿದ ಗುರುಗಳೊಬ್ಬರದೆಂದು ಈ ಮುನ್ನ ಪತ್ರಿಕೆಗಳಲ್ಲಿ ಪ್ರಕಟವಾದುದನ್ನು ನಾನು ನೋಡಿದ್ದ. ಇವರು ಬೆಂಗಳೂರಿಗೆ ಬಂದರಾಯಿತು, ಈಚೆಗೆ ಇವರು ತುಂಬ ಪ್ರಸಿದ್ಧಿಗೆ ಬಂದಿದ್ದಾರೆ ತುಂಬ ಜಾಣರಾದ ಪ್ರಮುಖ ಜನ ಹಲವರು ಇವರ ಅನುಯಾಯಿಗಳಾಗಿ ನಡೆದುಕೊಳ್ಳುತ್ತಿದ್ದಾರೆ ಇವರಲ್ಲಿ ಶ್ರೀ ವಿ. ಕೆ ಗೋಕಾಕ, ಶ್ರೀ ನಾ. ಕಸ್ತೂರಿ ನನಗೆ ತುಂಬ ಪ್ರಿಯರಾದ ಮಿತ್ರರು ದಿವಂಗತ ಶ್ರೀ ದ ರಾ ಬೇಂದ್ರೆ, ಶ್ರೀ ಜಿ ಪಿ. ರಾಜರತ್ನಂ ಸಹ ಈ ಗುರುಗಳನ್ನು ಒಪ್ಪಿಕೊಂಡಿದ್ದರು ಗುರು ಬರಿಯ ಅದ್ಭುತಗಳನ್ನು ಪ್ರಕಟಿಸುವ ಜನ ಅಲ್ಲ, ಶಾಲೆ ಕಾಲೇಜುಗಳನ್ನು ಸ್ಥಾಪಿಸಿದ್ದಾರೆ, ಸಾವಿರಾರು ಜನ ಆಶ್ರಯ ಬೇಡಿ ಬಂದವರನ್ನು ಪ್ರೀತಿಯಿಂದ ಕಂಡು ತಮ್ಮ ಶಕ್ತಿಯಿಂದ ಅವರಿಗೆ ತೃಪ್ತಿ ನೀಡಿದ್ದಾರೆ, ತೆಲುಗಿನಲ್ಲಿ ಬಹು ಚೆನ್ನಾಗಿ ಭಾಷಣ ಮಾಡುತ್ತಾರೆ, ಒಳ್ಳೆಯ ಉಪದೇಶ ಮಾಡುತ್ತಾರೆ, ಎಂದು ನಾನು ಕೇಳಿದ್ದೇನೆ. ಇವರು ಈಚೆಗೆ ತಮ್ಮ ಸ್ಥಳ ಪುಟ್ಟಪರ್ತಿಯಲ್ಲಿ ಒಂದು ವಿಶ್ವವಿದ್ಯಾನಿಲಯವನ್ನೇ ನಿರ್ಮಿಸಿದ್ದಾರ. ಇವರು ತಾವು ದೇವರು ಎಂದು ಹೇಳಿಕೊಳ್ಳುತ್ತಾರಂತೆ. ಇದು ಒಂದು ರೀತಿಯಲ್ಲಿ ನನ್ನಂಥ ಜನರಿಗೆ ಒಪ್ಪಿಗೆ ಆಗದ ಸಂಗತಿ. ಕೈಬೀಸಿದರೆ

ಭಸ್ಮ, ಲಿಂಗ, ದೋಸೆ ಬರುವುದಾದರೆ ಇವರು ಬೆಂಗಳೂರಿನಲ್ಲಿ ಒಂದು ಚೌಕದಲ್ಲಿ ಕುಳಿತು ದಾರಿ ನಡೆಯುವ ಭಿಕ್ಷುಕರಿಗೆ ಒಂದೋ ಎರಡೋ ದೋಸೆ ಕೊಟ್ಟು ಅವರನ್ನು ಕಾಪಾಡಿದರೆ ಇದ್ದೀತು ಭಸ್ಮ, ಲಿಂಗ ಇವನ್ನು ಆಮೇಲೆ ಕೊಡಬಹುದು "ಇಂಥ ಪವಾಡಗಳನ್ನು ನಾವೂ ಮಾಡುತ್ತೇವೆ ಇವನ್ನು ಮಾಡುವುದಕ್ಕೆ ದೇವರೇ ಬೇಕಾದುದಿಲ್ಲ," ಎಂದು ಬೇರೆಯ ಜನ ಪತ್ರಿಕೆಗಳಲ್ಲಿ ಹೇಳಿಕೆಗಳನ್ನು ಕೊಟ್ಟಿದ್ದಾರೆ ಬೆಂಗಳೂರು ವಿಶ್ವವಿದ್ಯಾಲಯದ ಈ ಹಿಂದಿನ ಉಪಕುಲಪತಿ, ಭೌತಶಾಸ್ತ್ರಸ್ನೇಹಕರಾದ ಶ್ರೀ ನರಸಿಂಹಯ್ಯನವರು, ವರ್ಷವೂ ಆರೆ ಹಿಂದ, ಈ ಗುರುಗಳಿಗ, "ನಾನು ನಿಮ್ಮ ಮನೆಯನ್ನು ಭೌತಶಾಸ್ತ್ರದ ದೃಷ್ಟಿಯಿಂದ ಪರಿಶೀಲಿಸಬೇಕು, ನನಗೆ ಅವಕಾಶಕೊಡಿ," ಎಂದು ಹೇಳಿ ಕಳುಹಿಸಿದರು ಗುರುಗಳು ಅವರಿಗೆ ಉತ್ತರ ಕೊಡಲಿಲ್ಲ. ನರಸಿಂಹಯ್ಯನವರು ಒಮ್ಮೆ ಅವರನ್ನು ಕಾಣಲು ಹೋದರು. ತಾವು ಬರುವುದನ್ನು ಗುರುಗಳಿಗೆ ಮೊದಲಲ್ಲೇ ತಿಳಿಸಿದ್ದರು ಗುರುಗಳು ಇವರನ್ನು ಕಾಣಲಿಲ್ಲ, ಅವರ ಕಡೆಯ ಜನ ಆಶ್ರಮದ ಹಬ್ಬಾಗಿಲ ಬಳಿ ನಿಂತು, ನರಸಿಂಹಯ್ಯನವರಿಗೆ ಪ್ರವೇಶ ಇಲ್ಲ ಎಂದು ತಿಳಿಸಿದರು ನರಸಿಂಹಯ್ಯನವರು ಹಿಂತಿರುಗಿ ಬಂದರು ಅವರು ಗುರುಗಳಿಗೆ, "ನೀವು ಕೈಬೀಸಿ ಸೃಷ್ಟಿಸಿ ತೋರಿಸುವ, ಜನಗಳಿಗೆ ಕೊಡುವ, ವಸ್ತು ಎಲ್ಲಾ ಸಣ್ಣಸಣ್ಣವು ಒಮ್ಮೆ ಒಂದು ಕುಂಬಳಕಾಯನ್ನು ಹೀಗೆ ಸೃಷ್ಟಿಮಾಡಿ ತೋರಿಸಿ," ಎಂದು ಸೂಚಿಸಿದರಂತೆ ಈ ಸೂಚನೆಯ ಕಾರಣ, ಈಗ ತೋರಿಸುತ್ತಿರುವ ವಸ್ತುಗಳೆಲ್ಲಾ ಹೊದೆದಿರುವ ಬಟ್ಟೆಗಳ ಮರೆಯಲ್ಲಿ ಇರಿಸಬಹುದಾದವು, ಕುಂಬಳಕಾಯಿಯನ್ನು ಹೀಗೆ ಮರೆಮಾಚಲು ಸಾಧ್ಯವಿಲ್ಲ, ಎನ್ನುವುದು. "ನೀವು ಈಗ ಹೊರಗೆ ತೆಗೆಯುತ್ತಿರುವ ವಸ್ತು ಎಲ್ಲವನ್ನೂ ಒಳಗೆ ಬಚ್ಚಿಟ್ಟುಕೊಂಡಿದ್ದು ಹೊರಕ್ಕೆ ತರುತ್ತಿದ್ದೀರಿ ಎಂದು ಕೆಲವರು ಹೇಳುತ್ತಾರೆ, ಇದು ಸುಳ್ಳು ಎನ್ನುವುದಕ್ಕೆ ಬಚ್ಚಿಡಲಾಗದ ಒಂದು ದೊಡ್ಡ ವಸ್ತುವನ್ನು ತೆಗೆಯುವುದು ಪ್ರಮಾಣವಾಗುತ್ತದೆ," ಎಂದು ಇದರ ಅರ್ಥ ನರಸಿಂಹಯ್ಯನವರ ಸೂಚನೆ ಯುಕ್ತ ಎಂದು ನಮ್ಮಂಥವರಿಗ ಕಾಣುತ್ತದೆ ಆದರ ಇದಕ್ಕೆ ಒಪ್ಪಿದರೆ, ಗುರು ತಮ್ಮನ್ನು ನಂಬದವರೊಬ್ಬರು ತಮ್ಮನ್ನು ಒಂದು ಪರೀಕ್ಷೆಗೆ ಗುರಿಮಾಡಲು ಒಪ್ಪಿದಂತಾಗುತ್ತದೆ. ಗುರು ಪದದ ಮರ್ಯಾದೆಗೆ ಇದು ತಗುವುದಿಲ್ಲ, ಹೇಗೂ ಗುರು ಈ ಪರೀಕ್ಷೆಗೆ ಸಮ್ಮತಿಸಲಿಲ್ಲ.

ಇವರನ್ನು ಕುರಿತು ಭಕ್ತರು ಹೇಳುವ ಎಲ್ಲ ಕಥೆಯೂ ಸತ್ಯದವು ಇರಬೇಕು ಎಂದು ಹೇಳಲಾಗುವುದಿಲ್ಲ ಇಂಥ ಒಂದು ಕಥೆ ಇದು ಯಾರೋ ಇವರನ್ನು ಅಮೆರಿಕಾದಲ್ಲಿ ಮಾತ್ರ ನಿರ್ಮಾಣ ಆಗುವ, ಸಾಮಾನ್ಯವಾಗಿ ತರಿಸದೆ ಇರುವ, ಒಂದು ಗಡಿಯಾರವನ್ನು ತಂದುಕೊಡಿ ಎಂದು ಕೇಳಿದರಂತೆ. ಗುರು, "ಸಾಮಾನು ಹೊರಗಿನಿಂದ ಬರಬೇಕಾದದ್ದು, ಸ್ವಲ್ಪ ಅವಕಾಶ ಬೇಕು," ಎಂದರಂತೆ ಕೇಳಿದವರು ಈ ಮಾತಿಗೆ ಒಪ್ಪಿ, ಅಲ್ಲೇ ನಿಂತರು. ಸ್ವಲ್ಪ ಹೊತ್ತಿನ ಬಳಿಕ, ಗುರು, "ಆ ಸಾಮಾನು ಬಂದಿತು ಇಕೋ ತೆಗೆದುಕೊಳ್ಳಿ," ಎಂದು ಅದನ್ನು ಅವರಿಗೆ ಕೊಟ್ಟರಂತೆ ಅದನ್ನು ಪಡೆದ ಈ ಪರೀಕ್ಷಕರು ಅಮೇರಿಕದ ತಮ್ಮ ಮಿತ್ರರಿಗೆ ಈ ವಿಷಯವನ್ನು ತಿಳಿಸಿ ಒಂದು ಕಾಗದ ಬರೆದರಂತೆ ಆ ಮಿತ್ರರು ಅಲ್ಲಿ ಆ ವಸ್ತು ದೊರೆಯುವ ಅಂಗಡಿಯಲ್ಲಿ ಹೋಗಿ ವಿಚಾರಿಸಿದರಂತೆ. ಅಂಗಡಿಯ ಒಡೆಯ, "ಹೌದು, ಆ ದಿನ ಆ ಹೊತ್ತಿನಲ್ಲಿ ಒಬ್ಬ ಭಾರತೀಯ ಈ ವೇಷಭೂಷಣದವನು, ನಮ್ಮ ಅಂಗಡಿಗೆ ಬಂದು, ಆ ವಸ್ತುವನ್ನು ಕೊಂಡು ಹೋದರು," ಎಂದರಂತೆ. ವೇಷಭೂಷಣದ ವರ್ಣನೆ, ಬಂದಿದ್ದವರು ಸತ್ಯ ಸಾಯಿಬಾಬಾ ಎಂದು ತೋರುವಂಥದು ಈ ಮಾತು ನಿಜವಾದರೆ ಒಂದು ವಿವರ ಮಾತ್ರ ಅಸಂಗತ ಆಗುತ್ತದ ಇಲ್ಲಿ ಈ ವಸ್ತು ಬೇಕೆಂದು ಬೇಡಿದ್ದು ಹಗಲಲ್ಲಿ ಇರಬೇಕು. ಆ ಹೊತ್ತಿನಲ್ಲಿ ಅಮೆರಿಕಾವಲ್ಲಿ ಪ್ರಾಯಶಃ ಅಂಗಡಿಗಳು ತೆರೆದಿರುವುದಿಲ್ಲ ಇಲ್ಲಿ ಬೆಳಗಾಗ ೧೦ ಗಂಟೆ ಒಳಗಾಗಿ ಹೇಳಿದ್ದರೆ ಅದು ರಾತ್ರಿ ೧೦ ಗಂಟೆ ಒಳಗಾಗಿ ಅಂಗಡಿ ತೆರೆದಿದ್ದಾಗ ಗಡಿಯಾರವನ್ನು ಕೊಂಡಿರಲು ಸಾಧ್ಯ. ಆದರೆ ಅದರಲ್ಲಿ ಸ್ವಾಮಿ ತಾವೇ ಅಮೆರಿಕಾಕ್ಕೆ ಹೋಗಿ, ಕೊಂಡು, ಹಿಂತಿರುಗಿದರು ಎನ್ನುವ ಕಥಾಭಾಗ ಅಷ್ಟೇನೂ ಸರಿಯಾದದ್ದು ಎನ್ನಿಸುವುದಿಲ್ಲ. ಮೇಲಾಗಿ ಸ್ವಾಮಿ ಈ ಹೊತ್ತಿನಲ್ಲಿ ಇಲ್ಲಿ ಆಶ್ರಮದಲ್ಲೇ ಇದ್ದರು. ಆದರೆ ಇಂಥ ಕಥೆಗಳನ್ನು ಹೇಳುವ ಜನ ಇಂಥ ವಿವರಗಳಿಗೆ ಗಮನ ಕೊಡುವುದಿಲ್ಲ ಇವನ್ನು ನಂಬುವ ಜನರಿಗಂತೂ, ಇಂಥ ಪ್ರಶ್ನೆ ಕೇಳುವುದು ಅಧಿಕ ಪ್ರಸಂಗ, ಗುರುವಿನ ಮಹಿಮೆಯನ್ನು ಒಪ್ಪದ, ಅವಿಶ್ವಾಸಿಗಳ ದುರ್ವರ್ತನ, ಎಂದೇ ಕಾಣುತ್ತದೆ.

ಗುರುಗಳನ್ನು ಆಶ್ರಯಿಸಿ ಉದ್ಧಾರವಾಗಲು ಅಪೇಕ್ಷಿಸಿದ ಅಮೆರಿಕನ್ ಪ್ರವಾಸಿಯೊಬ್ಬ ಆಶ್ರಮದಲ್ಲಿ ತಕ್ಕಷ್ಟು ಕಾಲ ಕಳೆದು, ಗುರುಗೊಡನೆ ತುಂಬ

ಅಷ್ಟವಾಗಿ ಒಪ್ಪನಾಡಿ, ಇವರು ಯೋಗ್ಯರಲ್ಲ, ಗುರುವಿನ ವೇಷ ಹಾಕಿಕೊಂಡು ಜನರನ್ನು ವಂಚಿಸುತ್ತಿದ್ದಾರೆ, ಎನ್ನುವುದನ್ನು ಕಂಡುಕೊಂಡೆ ಎಂದು ತನ್ನ ಅನುಭವವನ್ನು ತಿಳಿಸಿ, "ದಿ ಸೀಕ್ರೆಟ್ ಸೆಕ್ಸ್ ಲೈಫ್ ಆಫ್ ಶ್ರೀ ಸತ್ಯಸಾಯಿ ಬಾಬಾ" ಎಂಬ ಪುಸ್ತಕವನ್ನು ಪ್ರಕಟಿಸಿದ್ದಾನಂತೆ ಆ ಪುಸ್ತಕದ ವಿವರವಾದ ಅವಲೋಕನ ಒಂದು ನಮ್ಮ ಸೀಮೆಯ ಒಂದು ಇಂಗ್ಲೀಷ್ ಪತ್ರಿಕೆಯಲ್ಲಿ ಸುಮಾರು ವರ್ಷದ ಹಿಂದೆ ಪ್ರಕಟವಾಯಿತು. ನಾನು ಪುಸ್ತಕವನ್ನು ಓದಿಲ್ಲ, ಅವಲೋಕನವನ್ನು ಓದಿದೆನು ಅವಲೋಕನವನ್ನು ಓದಿದ ಮೇಲೆ ನನಗೆ ಪುಸ್ತಕವನ್ನು ಓದೋಣ ಎಂದು ಅಪೇಕ್ಷೆ ಆಗಲಿಲ್ಲ ಪುಸ್ತಕ ಈ ಗುರುಗಳನ್ನು ಕುರಿತು ತಕ್ಕಷ್ಟು ಕೆಟ್ಟ ವಿವರಗಳನ್ನು ಪ್ರಕಟಿಸಿ ಇದೆ ಆ ವಿವರಗಳಿಗೆ ಸಂಬಂಧಿಸಿದ ಜನರ ಹೆಸರುಗಳನ್ನು ಹೇಳಿದೆ. ಇದು ಗುರುಗಳ, ಅವರ ಭಕ್ತರ ಗಮನಕ್ಕೆ ಬಂದಿರಬೇಕು ಆದರೆ ಆ ಗ್ರಂಥದ ಲೇಖಕರ ಮಾತು ಸತ್ಯವಲ್ಲ ಎಂದು ಯಾರೂ ಈವರೆಗೆ ಏನನ್ನಾದರೂ ಪ್ರಕಟಿಸಿದಂತೆ ಕಾಣಲಿಲ್ಲ ಈ ವಿಷಯವನ್ನು ಇಲ್ಲಿ ಇನ್ನಷ್ಟು ಮುಂದುವರಿಸುವ ಅವಶ್ಯಕತೆ ಇಲ್ಲ ಮುಖ್ಯ ಸಂಗತಿ ಏನೆಂದರೆ, ಮಹಿಮೆಯನ್ನು ಮೆರೆಯುವ ಈ ಗುರುಗಳ ವಿಷಯದಲ್ಲಿ ಒಡಕು ಮಾತು ಇದೆ ಎನ್ನುವುದು ಇಂದಿನ ನಮ್ಮ ಧಾರ್ಮಿಕ ವ್ಯವಸ್ಥೆಯಲ್ಲಿ ತಲೆದೋರಿರುವ ಒಂದು ತೆರನ ಪ್ರಶ್ನೆ ಇದು ಎನ್ನುವುದನ್ನು ನಮ್ಮ ಜನ ಮನಸ್ಸಿಗೆ ತಂದುಕೊಳ್ಳಬೇಕು

ಈಚೆಗೆ ಇಂಥ ಸಂದರ್ಭಗಳು ಹಲವಾರು ಪತ್ರಿಕೆಯಲ್ಲಿ ವರದಿಯಾದವು ಕೊಡಗಿನ ಒಂದು ಗ್ರಾಮದ ಒಬ್ಬ ತರುಣಿ ಅನ್ನ ನೀರಿಲ್ಲದೆ ವಾರಗಟ್ಟಲೆ ಇರುತ್ತಾಳೆ, ಎಂದಿನಂತೆ ಎಲ್ಲ ಕೆಲಸವನ್ನು ಮಾಡುತ್ತಿರುತ್ತಾಳೆ, ಎಂದು ಒಂದು ದಿನ ಒಂದು ಪತ್ರಿಕೆಯಲ್ಲಿ ಸುದ್ದಿ. ಈ ಸುದ್ದಿ ಆಮೇಲೆ ಇತರ ಪತ್ರಿಕೆಗಳಲ್ಲಿ ಪ್ರಕಟ ಆಯಿತು. ಇದು ಸಾಧ್ಯವೇ ಎಂದು ನೋಡುವುದಕ್ಕೆ ಕೆಲವು ಜನ ಗ್ರಾಮಕ್ಕೆ ಹೋದರು. ಮುಂದೆ ಏನಾಯಿತು ನಾನು ಗಮನಿಸಲಿಲ್ಲ. ಆದರೆ ಈ ಪವಾಡ ದಿಟವಲ್ಲ ಎಂದು ಎಲ್ಲರೂ ಗ್ರಹಿಸಿದಂತೆ ಕಂಡಿತು

ಸುಮಾರು ಇದೇ ಕಾಲದಲ್ಲಿ ಇನ್ನೊಂದು ಇಂಥ ಪ್ರಸಂಗ ಮಂಡ್ಯದ ಬಳಿ ಒಂದು ಗ್ರಾಮದಲ್ಲಿ ಒಬ್ಬ ತರುಣ ಅವನು ನಮ್ಮೆದುರಿಗೆ ಕುಳಿತಿರುವಂತೆಯೇ ಕೈಬೀಸಿದರೆ, ಒಂದುಸಲ ಅವನ ಕೈಗೆ ಒಂದು ಲಿಂಗ ಬರುತ್ತದೆ,

ಮತ್ತೊಮ್ಮೆ ಅಷ್ಟೇ ವಿಭೂತಿ ಬರುತ್ತದೆ, ಮತ್ತೊಮ್ಮೆ ಏತರದೋ ಬೇರೆ ವಸ್ತು ಬರುತ್ತದೆ. ಸತ್ಯಸಾಯಿಬಾಬಾ ಮಾಡುವ ಪವಾಡವನ್ನು ಈತನು ಮಾಡುತ್ತಿದ್ದಾನೆ. ಇದು ವರದಿ. ಇಂಥ ವಿಷಯದಲ್ಲಿ ಆಸಕ್ತಿಯುಳ್ಳ ಕೆಲವು ಜನ, ಇದೇನು ವಿಶೇಷ ಇದೆಯೋ ನೋಡೋಣ ಎಂದು ಆ ಗ್ರಾಮಕ್ಕೆ ಹೋದರಂತೆ. ಏನು ನಡೆಯಿತು ಸ್ಪಷ್ಟವಾಗಿ ವರದಿ ಆಗಲಿಲ್ಲ. ಆದರೆ ಸೊತ್ತದಲ್ಲಿ, ಇದು ದಿಟವಾದ ಮಹಿಮೆ ಅಲ್ಲ, ಒಂದು ರೀತಿಯ ಕಪಟ, ಎಂದು ನಿರ್ಣಯ ಆದಂತೆ ಕಂಡಿತು.

ಕೆಲವು ವರ್ಷಗಳ ಹಿಂದೆ ಬೆಂಗಳೂರಿಗೆ ಉತ್ತರ ಭಾರತದಿಂದ ಒಬ್ಬ ಯೋಗಿ ಬಂದರು. ಟ್ರಾನ್ಸೆಂಡೆಂಟಲ್ ಮೆಡಿಟೇಶನ್ ಕಲಿಸುತ್ತೇನೆ ಎನ್ನುವ ಇವರನ್ನು ನಮ್ಮಲ್ಲಿ ಬಲ್ಲ ಜನ ಹಲವರು ಹೋಗಿ ಕಂಡರು. ಇದರ ಹೆಸರಲ್ಲಿ ನಗರದಲ್ಲಿ ಒಂದು ಕೇಂದ್ರವೂ ಇದೆಯೋ ಏನೋ. ಇದಾದ ಕೆಲವು ಕಾಲದಲ್ಲಿ ಯೋಗಿ ಯೂರೋಪ್ ಖಂಡದಲ್ಲಿ ಪ್ರವಾಸ ನಡೆಸಿದರು. ಅಲ್ಲಿ ಒಂದು ದೊಡ್ಡ ನಗರದಲ್ಲಿ ಇವರ ಅನುಯಾಯಿಗಳು ಒಂದು ವಿಶ್ವವಿದ್ಯಾನಿಲಯವನ್ನೇ ಸ್ಥಾಪಿಸಿದರು ಎಂದು ವರದಿಯಾಯಿತು. ಸ್ವಲ್ಪಕಾಲದ ಬಳಿಕ ಯೋಗಿ ನಮ್ಮ ದೇಶಕ್ಕೆ ಮರಳಿ ಬಂದರು. ಆಗ ಅವರ ಜೊತೆಯಲ್ಲಿ, ಇಂಗ್ಲೆಂಡ್ ಅಮೆರಿಕಾದಲ್ಲಿ ದೊಡ್ಡ ದೊಡ್ಡ ಸಭೆಗಳ ಎದುರಲ್ಲಿ ಹಾಡಿ ಜನರನ್ನು ಒಲಿಸಿದ್ದ ಬೀಟ್‌ಲ್ಸ್ ಎಂದು ವಿಖ್ಯಾತರಾಗಿದ್ದ ಇಬ್ಬರು ಗಾಯಕ ತರುಣರು, ಅವರ ಜೊತೆಯ ಒಬ್ಬ ತರುಣಿ, ಇಲ್ಲಿಗೆ ಬಂದರು. ಯೋಗದ ಅಭ್ಯಾಸಕ್ಕಾಗಿ ಇವರ ಜೊತೆಯಲ್ಲೇ ನಿಂತರು. ಸ್ವಲ್ಪದಿನ ಕಳೆದು ಮೂವರೂ, "ಈ ಆಶ್ರಮದಲ್ಲಿ ವಾಸಮಾಡಿದ್ದರಿಂದ ಪ್ರಯೋಜನ ಆಗಲಿಲ್ಲ, ಈ ಯೋಗಿ ಒಬ್ಬ ಸಾಮಾನ್ಯ ಮನುಷ್ಯ," ಎಂದು ಹೇಳಿಕೆಯನ್ನು ಪ್ರಕಟಿಸಿ ಹೊರಟುಹೋದರು. ಯೋಗಿ, "ನಾನು ಸಾಮಾನ್ಯ ಮನುಷ್ಯನೇ ಸರಿ, ದೇವರು ಎಂದು ಹೇಳಿಕೊಳ್ಳಲಿಲ್ಲವಲ್ಲಾ ?" ಎಂದು ಉತ್ತರ ಪ್ರಕಟಿಸಿದರು. ಯೋಗಿ ಇಂಗ್ಲೀಷ್ ಬಲ್ಲ ಮನುಷ್ಯ ಇರಬೇಕು. ಗಾಯಕರು ಇವರು ಮನುಷ್ಯರು ಎಂದು ಹೇಳಿದ್ದರ ಅರ್ಥ ಇವರ ನಡತೆ ಚೆನ್ನಾಗಿರಲಿಲ್ಲ ಎನ್ನುವುದು. ಇವರು ಆ ಹೆಂಗಸಿನ ವಿಷಯದಲ್ಲಿ ಕುತೂಹಲ ತೋರಿಸಿದರು ಎನ್ನುವುದು ಧ್ವನಿ. ಇದರ ಉತ್ತರದಿಂದ ಈ ಧ್ವನಿ ನಿವಾರಣೆ ಆಗುವುದಿಲ್ಲ. ಈಚೆಗೆ ಈ ಮೆಡಿಟೇಷನ್ ಕೂಗು ಅಷ್ಟಾಗಿ ಕೇಳುತ್ತಿಲ್ಲ.

ಹತ್ತಿರ ಹತ್ತಿರ ಇದೇ ದಿನಗಳಲ್ಲಿ ಬಾಲಯೋಗಿ ಎಂಬ ಒಬ್ಬಾತ ಉತ್ತರ ದೇಶದ ನಿವಾಸಿ, ಯೋಗದಲ್ಲಿ ಪ್ರವೀಣರೆಂದು ಹೇಳಿಕೊಂಡು ನಮ್ಮ ರಾಷ್ಟ್ರದಲ್ಲಿ ಕೆಲವು ತಿಂಗಳು ಇದ್ದು, ಅಮೆರಿಕಾ ದೇಶಕ್ಕೆ ಹೋಗಿ, ಅಲ್ಲಿ ಪ್ರಚಾರ ನಡೆಸಿ, ಶಿಷ್ಯರನ್ನು ಸಂಪಾದಿಸಿದರು ಕೆಲವು ಕಾಲ ಕಳೆದು ನಮ್ಮ ರಾಷ್ಟ್ರಕ್ಕೆ ಹಿಂತಿರುಗಿದರು. ಆ ಸಂದರ್ಭದಲ್ಲಿ, ದೇಶಕ್ಕೆ ಬರುವ ಜನ ಸುಂಕ ಕೊಟ್ಟು ಒಳಕ್ಕೆ ತರಬಹುದು, ಸುಂಕ ಕೊಡದೆ ತರಬಾರದು ಎಂದು ಶಾಸನದಲ್ಲಿರುವ ಮಣಿಗಳನ್ನು ವಸ್ತುಗಳನ್ನು ಸುಂಕಕೊಡದೆ ಒಳಕ್ಕೆ ಕದ್ದು ತಂದರೆಂದು ಮಾತು ಹುಟ್ಟಿತು ವಿಚಾರಣೆ ನಡೆದು ಇದು ದಿಟ ಎಂದು ನಿಶ್ಚಯವಾಯಿತು. ಇಷ್ಟು ನಡೆಯುವ ವೇಳೆಗೆ ಜನರಿಗೆ ಇವರಲ್ಲಿ ವಿಶ್ವಾಸ ಕಡಿಮೆ ಆಯಿತು ಎಂದು ಕಾಣುತ್ತದ ಇಷ್ಟರಲ್ಲಿ ಯೋಗಿ ತಮ್ಮೊಡನೆ ನಮ್ಮ ದೇಶಕ್ಕೆ ಬಂದಿದ್ದ ವಿದೇಶಿ ಸ್ತ್ರೀ ಒಬ್ಬರನ್ನು ಇಲ್ಲಿ ಮದುವೆ ಆದರು ಆಕ ವಯಸ್ಸಿನಲ್ಲಿ ಇವರಿಗಿಂತ ಎಂಟು ಹತ್ತು ವರ್ಷ ಹಿರಿಯರು ಈ ಸಂಗತಿ ಬೇರೆ ಜನರಿಗೆ ಇವರ ವಿಷಯದಲ್ಲಿ ಇದ್ದ ಗೌರವಭಾವವನ್ನು ಕಡಮೆ ಮಾಡಿತು. ಯೋಗಿ ಈ ದೇಶವನ್ನು ಬಿಟ್ಟು ಬೇರ ದೇಶಕ್ಕೆ ಹೋದರು ಈಗ ಅವರ ಮಾತೇ ಏನೂ ಕೇಳಿಬರುತ್ತಿಲ್ಲ.

ಅದ್ಭುತಗಳ ಮಾತಿಗೆ ನನಗೆ ಮನಸ್ಸಿಗೆ ಬಂದ ಇನ್ನೆರಡು ಉದಾಹರಣೆಗಳನ್ನು ಇಲ್ಲಿ ಹೇಳಬೇಕು.

ಪಶ್ಚಿಮವಾಹಿನಿಯಲ್ಲಿ ಒಬ್ಬ ಪತಿ, ಪತ್ನಿ, ತಮ್ಮ ಮನೆಯಲ್ಲಿ ಒಂದು ಗೋಡೆಯಿಂದ ಒಂದು ಕಂಡಿ ಮೂಲಕ ಸದಾ ಜೇನು ಹರಿದುಬರುತ್ತಿದೆ, ಇದು ಎಲ್ಲಿಂದ ಬರುತ್ತದೆ ತಿಳಿಯದು, ಎಂದು ಒಂದು ಸುದ್ದಿ ಹೊರಡಿಸಿದರು ಇವರು ದೈವಭಕ್ತರು, ದೇವರು ಇವರ ಮನೆಯಲ್ಲಿ ಈಮಹಿಮೆಯನ್ನು ಪ್ರಕಟಿಸಿದ್ದಾರೆ, ಎಂದು ಜನರಲ್ಲಿ ಮಾತು ಹುಟ್ಟಿತು ಅನೇಕ ಜನ ಸ್ಥಳಕ್ಕೆ ಹೋಗಿ, ಜೇನು ಜಿನುಗುತ್ತ ಬರುತ್ತಿರುವುದನ್ನು ಕಂಡರು. ಪವಾಡ ದಿಟ ಎಂದರು ನನ್ನ ಪರಿಚಯದ ಪ್ರಾಜ್ಞ ಮಿತ್ರರು ಹಲವರು ಹೋಗಿ, ಆ ದಂಪತಿಗಳು ನಡೆಸಿದ ಒಂದು ಉತ್ಸವದಲ್ಲಿ ಭಾಗವಹಿಸಿ ಜೇನು ಹರಿದುಬರುತ್ತಿರುವುದನ್ನು ಕಂಡು ಸಂತೋಷಪಟ್ಟು ಹಿಂತಿರುಗಿದರು. ಇವರು ಯಾರೂ ಆ ಜೇನು ಬರುತ್ತಿರುವ ಕಂಡಿಯ ಹಿಂದೆ ಏನಿರಬಹುದೆಂದು ಪರೀಕ್ಷೆ ಮಾಡಲಿಲ್ಲ. ಕಾರಣ, ಹಾಗೆ ಮಾಡುವುದು ದೇವರ ವಿಷಯದಲ್ಲಿ ನಂಬಿಕೆ ಇಲ್ಲ ಎಂದು ಸೂಚಿಸುತ್ತದೆ.

ಎನ್ನುವುದು ನಂಬಿಕೆ ಇಲ್ಲದವರು ಎಂದು ಅನ್ನಿಸಿಕೊಳ್ಳುವುದು ಭಕ್ತರಾದ ವರಿಗೆ ಇಷ್ಟವಲ್ಲ. ಇದು ನಡೆದು ಈಗ ಎಂಟು ಹತ್ತು ವರ್ಷ ಆಗಿದೆ. ಈ ಜೇನು ಸರಿಯ ಕಥೆ ಅಲ್ಲಿಂದ ಮುಂದಕ್ಕೆ ಬೆಳೆಯಲಿಲ್ಲ ಈಗ ಇದರ ಮಾತು ಕೇಳಬರುತ್ತಿಲ್ಲ.

ಚಿ|| ನನ್ನ ಅಳಿಯ, ಅವರ ಹೆಂಡತಿ, ನನ್ನ ಮಗಳು ಸೌ|| ಅರವಿಂದಮ್ಮ ಕೆಲವು ವರ್ಷಗಳ ಹಿಂದೆ ತಿರುಚಿರಪಳ್ಳಿಯಲ್ಲಿದ್ದರು. ಅವರ ನೆರೆಯಲ್ಲಿ ಒಂದು ಶ್ರೀವೈಷ್ಣವ ಸಂಸಾರ ಇದ್ದಿತು ಅದರ ಗಂಡ ಹೆಂಡತಿ ಮನೆಯ ಒಂದು ಕೋಣೆಯಲ್ಲಿ ಗೋಡೆಗೆ ಒಂದು ಪಟವನ್ನು ತೂಗಹಾಕಿದ್ದರು ಅದರಿಂದ ಆಗಾಗ ಕುಂಕುಮ ಪ್ರಸಾದವಾಗಿ ತಾನೇಉದುರುತ್ತದೆ ಎಂದು ಹೇಳುತ್ತಿದ್ದರು. ಹೌದೇ ಎಂದು ನೋಡಲು ಹೋದವರನ್ನು ಇವರು ಒಳಗೆ ಕರೆದುಕೊಂಡು ಹೋಗುವರು. ಪಟವನ್ನು ತೋರಿಸುವರು ಕೆಳಗೆ ಏನೂ ಇಲ್ಲ ನೋಡಿ ಎನ್ನುವರು ಇದು ದಿಟ, ಏನೂ ಇರುತ್ತಿರಲಿಲ್ಲ ಹೊರಗೆ ಹೋಗೋಣ ಬನ್ನಿ ಎಂದು ಅವರು ಇವರನ್ನು ಹೊರಗೆ ಕರೆತರುವರು ಕೆಲವು ನಿಮಿಷ ಬಿಟ್ಟು ಒಳಗೆ ಕರೆದುಕೊಂಡು ಹೋಗುವರು ಏನಾಶ್ಚರ್ಯ ? ಪಟದ ಕೆಳಗೆ ಕುಂಕುಮ ಪ್ರಸಾದ ಬಿದ್ದಿದೆ. ಬಾಯಲ್ಲಿ ಹೇಳದೆ ನಡತೆಯಿಂದ ದಂಪತಿಗಳು ಮಾಡಿದ ಸೂಚನೆ ಇದು "ನಾವು ನಿಮ್ಮ ಜೊತೆಗೇ ಇದ್ದೆವಲ್ಲಾ, ದೇವರು ಪ್ರಸಾದ ಅನುಗ್ರಹಿಸಿದರು, ನೋಡಿ " ಒಂದವರು ಏನು ಹೇಳಬೇಕು? ನಂಬಿಕೆ ಇಲ್ಲದವರಾದರೆ, "ನೀವು ಜೊತೆಗಿದ್ದಿರಿ, ಸರಿ. ನಿಮ್ಮ ಮಕ್ಕಳೋ, ಮನೆಯ ಸೇವಕರೋ ಈ ಕುಂಕುಮವನ್ನು ಅಲ್ಲಿ ಹಾಕಿರಬಾರದೇಕೆ?" ಎಂದು ಹೇಳ ಬೇಕು ಎಂದರೆ, "ನೀವು ಕಳ್ಳರು" ಎಂದು ಸ್ಪಷ್ಟವಾಗಿ ಹೇಳಿದಂತಾಗುತ್ತದೆ. ಈ ನಿಷ್ಠುರವನ್ನು ಯಾರು ಹೊತ್ತುಕೊಳ್ಳಬೇಕು! ಯಾರೂ ಹೇಳುತ್ತಿರಲಿಲ್ಲ. ಆದರೆ ಎಲ್ಲರೂ ಪವಾಡವನ್ನು ನಂಬಿದರು ಎನ್ನುವಂತಿಲ್ಲ. ಪವಾಡ ಸುಳ್ಳು, ಆದರೆ ಇದರ ಮಾತು ನಮಗೇಕೆ, ಎಂದಷ್ಟೇ ಹೇಳಿಕೊಂಡರೂ ಆಯಿತು, ಮೇಲಾಗಿ, "ದೇವರೇ ಮಾಡಿರಬಹುದು ಅಲ್ಲ ಎಂದರೆ ನಮಗೆ ಕೇಡಾದೀತು," ಎಂದು ಭಯಪಟ್ಟರೂ ಆದೀತು. ಅಂತೂ ಪವಾಡ ನಮ್ಮ ಅಳಿಯ ಮಗಳು ಅಲ್ಲಿ ಇದ್ದಷ್ಟು ದಿನವೂ ನಡೆಯುತ್ತಲೇ ಇತ್ತು ಈಗ ನಡೆಯುತ್ತಿದೆಯೋ

ಇಲ್ಲವೋ ನನಗೆ ತಿಳಿಯದು ಅಷ್ಟೇ ಅಲ್ಲ ; ತಿಳಿಯೋಣ ಎಂಬ ಅಪೇಕ್ಷೆಯೂ ನನಗೆ ಇಲ್ಲ

ಈ ಸಂದರ್ಭದಲ್ಲಿ ಸೋದರ ಬೇಂದ್ರೆಯವರು ನಾನು ಒಮ್ಮೆ ಧಾರವಾಡಕ್ಕೆ ಹೋಗಿ ಮೂರು ದಿನ ಅವರ ಮನೆಯಲ್ಲಿ ಇದ್ದಾಗ ನನಗೆ ತಿಳಿಸಿದ ಒಂದು ಸಂಗತಿಯನ್ನು ಹೇಳಬೇಕು. ಕೆಲವು ತಿಂಗಳ ಹಿಂದೆ ಇವರೆಲ್ಲ ಮನೆಯಲ್ಲಿ ಊಟಕ್ಕೆ ಕುಳಿತಿದ್ದಾರ. ಮೇಲೆ ಅಟ್ಟ ಅದರಿಂದ ಇದ್ದದಿದ್ದಂತೆ ಧಾರೆಯಾಗಿ ಯಾವುದೋ ದ್ರವ ಸುರಿಯಿತು. ಎಲ್ಲರೂ ಚಕಿತರಾದರು, ಇದೇನೆಂದು ನೋಡಿದರು. ಸುರಿದಿದ್ದದ್ದು ಬೇರೆ ಏನೂ ಅಲ್ಲ, ಜೇನು. ಆ ಕ್ಷಣಕ್ಕೆ ಇದು ಪವಾಡವೇ ಎಂದೇ ಎಲ್ಲರಿಗೂ ಮನಸ್ಸು. ಕ್ಷಣ ಬಿಟ್ಟು ಯಾರೋ ಅಟ್ಟದ ಮೇಲೆ ಏನಾಗಿದೆ ನೋಡೋಣ ಎಂದರು ಏಣಿ ಹಾಕಿ ಅಟ್ಟಕ್ಕೆ ಏರಿದರು. ಎಂದೋ ಅಲ್ಲಿ ಇಟ್ಟಿದ್ದ ಜೇನಿನ ಸೀಸೆ ಒಂದು ನೇರ ನಿಂತಿದುದ್ದು ಪಕ್ಕಕ್ಕೆ ಬಿದ್ದಿತ್ತು ಮುಚ್ಚಳ ಸಡಿಲವಾಗಿದ್ದ ಕಾರಣದಿಂದ ಒಳಗಿದ್ದ ಜೇನು ಮೆಲ್ಲನೆ ಹೊರಕ್ಕೆ ಜಿನುಗಿ ಬರುತ್ತಿತ್ತು ಎಲ್ಲರೂ ನಕ್ಕರು ಕತೆಯನ್ನು ನನಗೆ ಹೇಳಿ ಬೇಂದ್ರೆ ನಕ್ಕರು. ನಾನೂ ನಕ್ಕೆ. ಆದರೂ "ವರ್ಷದ ಹಿಂದೆ ನೀವು ಜೇನು ಜಿನುಗುವುದನ್ನು ನೋಡುವುದಕ್ಕೆ ಪಶ್ಚಿಮವಾಹಿನಿಗೆ ಹೋಗಿದ್ದಿರಲ್ಲಾ, ಅದೂ ಇಂಥದೇ ಪವಾಡ ಆಗಿರಬೇಕಲ್ಲವೇ?" ಎಂದು ಕೇಳಬೇಕು. ನಾನು ಕೇಳಲಿಲ್ಲ. ಅವರ ಅತಿಥಿ; ಓರಗೆಯಲ್ಲಿ ಅಣ್ಣ. ಮನಸ್ಸಿಗೆ ಬೇಸರವಾಗುವ ಮಾತನ್ನು ಅನವಶ್ಯಕವಾಗಿ ಏಕೆ ಹೇಳಬೇಕು ? ಅವರಿಗೇ ತೋರಬಹುದಾದ ಸಂಗತಿ, ತೋರಿಯೂ ಇರಬಹುದು. ಅವರೇ ಆಮೇಲೆ ಹೀಗೆಂದು ಹೇಳಲೂಬಹುದು, ನಾನು ಸುಮ್ಮನೆ ಇದ್ದೆ. ಅವರು ಅದರ ಮಾತನ್ನು ಮತ್ತೆ ಎತ್ತಲಿಲ್ಲ.

ಈ ಪವಾಡಗಳ ವಿಷಯ ನಾನು ಬೇರೆ ಸಂದರ್ಭಗಳಲ್ಲಿ ಪ್ರಸ್ತಾಪಿಸಿದ್ದೇನೆ. ನನ್ನ "ಉತ್ತರಕಾಂಡ ವಿಚಾರ," ಎಂಬ ಪ್ರಬಂಧದಲ್ಲಿ ರಾಮಾಯಣದಲ್ಲಿ ಬರುವ ಪವಾಡಗಳ ವಿಷಯ ವಿವರವಾದ ಒಂದು ಪರಿಶೀಲನವನ್ನು ಕೊಟ್ಟಿದ್ದೇನೆ. ಆಸಕ್ತಿಉಳ್ಳವರು ಆ ಪರಿಶೀಲನವನ್ನು ನೋಡಬೇಕೆಂದು ಬೇಡುತ್ತೇನೆ.

ದೇವರು ಇದ್ದಾನೆ ಎಂದು ನಂಬುವುದಕ್ಕೆ ಪವಾಡಗಳನ್ನು ನಂಬುವುದು ಆವಶ್ಯಕ ಎನ್ನುವುದನ್ನು ನಾನು ಒಪ್ಪಲಾರೆ ಇಂಥ ಅಂಥ ಪವಾಡ ನಡೆದವು ಎಂದು ಪೂರ್ವದ ಅನೇಕ ಧರ್ಮಗಳ ಅನೇಕ ಗ್ರಂಥಗಳಲ್ಲಿ ಹೇಳಿದೆ ಈಜಿಪ್ಟ್

ಪ್ರದೇಶದಲ್ಲಿ ವಾಸವಾಗಿದ್ದ ಯೆಹೂದ ಜನ ಅಲ್ಲಿಂದ ತಪ್ಪಿಸಿಕೊಂಡು ತಮ್ಮ ದೇಶಕ್ಕೆ ಬರಬೇಕಾದರೆದಾರಿಯಲ್ಲಿ ಅಡ್ಡಲಾಗಿದ್ದ ಕೆಂಪುಸಮುದ್ರ ತನ್ನ ನೀರನ್ನು ಇತ್ತ ಅರ್ಧ ಅತ್ತ ಅರ್ಧ ಮಾಡಿ ಮಧ್ಯದ ನೆಲದಲ್ಲಿ ಅವರು ನಡೆದುಹೋಗಲು ಅನುಕೂಲ ಮಾಡಿಕೊಟ್ಟಿತಂತೆ ಈ ಮಾತನ್ನು ಯೆಹೂದ್ಯರು ನಂಬಬಹುದು, ಪ್ರಾಯಶಃ ನಂಬಲೇಬೇಕು ಆದರೆ ಇದು ಆದದ್ದು ದಿಟವೇ ? ನಮ್ಮಲ್ಲಿ ಒಂದು ಸಮುದಾಯದ ಒಬ್ಬ ಹೆಣ್ಮಗಳು ದುಷ್ಟರಾದ ತನ್ನ ಹಗೆಗಳಿಂದ ತಪ್ಪಿಸಿಕೊಂಡು ಇಷ್ಟಜನರೊಡನೆ ಬೇರೆಯೆಡೆಗೆ ಬರಬೇಕಾಯಿತು ಎಂದು ಒಂದು ಕಥೆ ದಾರಿಯಲ್ಲಿ ಒಂದು ಹೊಳೆ ಇತ್ತು ತರುಣಿ ತನ್ನ ಮುಂಗೈಯ ಬಳೆ ಎರಡನ್ನು ಕಳಚಿ ನೀರೊಳಕ್ಕೆ ಹಾಕಿ ದಾರಿ ಬೇಡಿದಳಂತೆ. ನೀರು ದಾರಿ ಬಿಟ್ಟಿತು ತರುಣಿ, ಅವಳ ಇಷ್ಟರು, ನೆಲದಮೇಲೆ ನಡೆದು ಎದುರು ದಡಕ್ಕೆ ಬಂದರು ಹೊಳೆ ಮತ್ತೆ ಎಂದಿನಂತೆ ಹರಿಯತೊಡಗಿತು ಇದು ಆಗಿರ ಬಹುದೇ ? ಈ ಕಥೆಯನ್ನು ತಮ್ಮ ಸಂಪ್ರದಾಯದ ಕಥೆಯಲ್ಲಿ ಹೇಳುವ ಜನ ತೀರ ಸಹಜವಾಗಿ ನಂಬುತ್ತಾರೆ. ಉಳಿದವರೂ ಇದನ್ನು ನಂಬಬೇಕೇ ? ನಂಬಲೇಬೇಕು ಎನ್ನುವುದಾದರೆ ಮತ್ತೆ ಇಂಥ ಕಥೆಯನ್ನು ಈಗ, ಇನ್ನು ಮುಂದೆ ಬೇರೆಯ ಜನ ಹೇಳಬಹುದು ಹೇಳಿದಾಗ ಅವನ್ನೂ ಎಲ್ಲರೂ ನಂಬಬೇಕು. ಹೀಗೆಂದರೆ ನಂಬಿಕೆಗೆ ಮಿತಿ ಮೇರೆ ಎಲ್ಲಿ ?

ಕ್ರಿಸ್ತಗುರು ಹಲವು ಪವಾಡಗಳನ್ನು ಮಾಡಿದನೆಂದು ಬೈಬಲ್ ಗ್ರಂಥ ಹೇಳುತ್ತದೆ ಅದೇ ಗ್ರಂಥ ಇನ್ನೊಂದು ಮಾತನ್ನೂ ಹೇಳುತ್ತದೆ. ಕ್ರಿಸ್ತನ ಬಳಿಗೆ ಬಂದ ಜನ ಕೆಲವರು, "ನೀನು ದೈವಪುರುಷ ಎನ್ನುವುದಾದರೆ ಒಂದು ಪವಾಡ ಮಾಡಿತೋರಿಸು," ಎಂದರು. ಗುರು ಅವರನ್ನು "ನಂಬಿಕೆ ಇಲ್ಲದ ದುಷ್ಟ ಕ್ರಿಮಿಗಳು" ಎಂದನು ಒಂದು ವ್ಯಾಧಿಗೆ ಈಡಾಗಿದ್ದ ಒಬ್ಬ ಸ್ತ್ರೀ ಇವನನ್ನು ಮುಟ್ಟಿದರೆ ತನಗೆ ಗುಣವಾಗುತ್ತದ ಎಂಬ ನಂಬಿಕೆಯಲ್ಲಿ ಇವನನ್ನು ನೋಕಿದಳು. ವ್ಯಾಧಿ ಗುಣವಾದಾಗ ಗುರು. "ಅಮ್ಮ, ನಿನ್ನ ನಂಬಿಕೆಯಿಂದ ನಿನ್ನ ವ್ಯಾಧಿ ಗುಣವಾಗಿದೆ, ಹೋಗು," ಎಂದನು ಎಂದ ಕಥೆಯನ್ನು ಈ ಮುನ್ನ ಹೇಳಿದೆ. ಇದರಿಂದ ಗುರುವಿಗೆ ಪವಾಡದಲ್ಲಿ ನಂಬಿಕೆ ಇರಲಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ ದಿಟದಲ್ಲಿ ಸೃಷ್ಟಿಯೇ ಒಂದು ದೊಡ್ಡ ಪವಾಡ. ಅದರ ವ್ಯಾಪಾರದ ಲಕ್ಷ ಕೋಟಿ ವಿವರಗಳಲ್ಲಿ ಒಂದೊಂದೂ ಒಂದು ಪವಾಡ

ಸರಿಯಾಗಿ ತಿಳಿದೆರಾದರೆ ಲೋಕದ ವ್ಯವಹಾರದಲ್ಲಿ ಪವಾಡ ಅಲ್ಲದ ಸಂಗತಿ ಒಂದೂ ಇಲ್ಲ

ಇಂಥ ಪವಾಡಗಳನ್ನು ಮಾಡಿದ ಒಬ್ಬ ಜಾಣನ ವಿಷಯವನ್ನು ಸ್ವಾಮಿ ವಿವೇಕಾನಂದರು ಹೇಳಿದ್ದುಂಟು

ನಮ್ಮಲ್ಲಿ ತಪಸ್ಸಿನಿಂದ ಸಿದ್ಧಿಗಳು ಲಭಿಸುತ್ತವೆ ಎನ್ನುವುದು ಪೂರ್ವದಿಂದ ಬಂದಿರುವ ಒಂದು ನಂಬಿಕೆ ಈ ನಂಬಿಕೆಗೆ ಆಧಾರ ಇದ ಎಂದು ಕಾಣುತ್ತದೆ. ಇರುತ್ತ ಈ ಸಿದ್ಧಿಗಳನ್ನು ಬಳಸಿ, ಜನರನ್ನು ಆಕರ್ಷಿಸಿ, ಇವುಗಳ ಮೂಲಕ ಒಳ್ಳೆಯದನ್ನು ಮಾಡುತ್ತೇವೆ ಎನ್ನುವುದನ್ನು ಸಂಪ್ರದಾಯದ ಪೂರ್ವಿಕರು ಒಪ್ಪಲಿಲ್ಲ. ಸಿದ್ಧಿಗಳನ್ನು ಪಡೆದಿದ್ದ ಜನರೇ ಹಲವರು, ಸಿದ್ಧಿಗಳಿಂದ ಯಾವ ಫಲವನ್ನಾಗಲಿ ಪಡೆಯುವುದು ದುಷ್ಕರ್ಮ ಎಂದೇ ಭಾವಿಸಿದರು ಹೊಸ ಕಾಲದಲ್ಲಿ ಈ ವಿಷಯದಲ್ಲಿ ಖಚಿತವಾದ ಅಭಿಪ್ರಾಯವನ್ನು ಪ್ರಕಟಿಸಿದವರು ರಾಮಕೃಷ್ಣ ಪರಮಹಂಸರು. "ಪರಮಹಂಸರು ಸಿದ್ಧಿಗಳನ್ನು ಪಡೆದಿದ್ದರು. ಶಿಷ್ಯರ ಶುಭಕ್ಕೆಂದು ಅಪರೂಪವಾಗಿ ಒಮ್ಮೆ ಇಮ್ಮೆ ಅವನ್ನು ಬಳಸಿಯೂ ಬಳಸಿದರು ಉಳಿದಂತೆ ಅವುಗಳ ಗೋಜಿಗೆ ಹೋಗಲಿಲ್ಲ. ಅಷ್ಟೇ ಅಲ್ಲ, ಅವನ್ನು ಬಳಸುವುದು ಹಾನಿಕರ ಎಂದು ಸ್ಪಷ್ಟವಾಗಿ ಎಚ್ಚರ ಹೇಳಿದರು," ಎಂದು ಅವರ ಚರಿತ್ರೆ ಹೇಳುತ್ತದೆ. "ಸ್ವಲ್ಪ ವಿಶಿಷ್ಟ ಶಕ್ತಿಯನ್ನು ಪಡೆದ ಜನರು ಅವನ್ನು ಬಳಸಿ ಹೆಸರು ಗಳಿಸುತ್ತಾರೆ, ಖ್ಯಾತರಾಗುತ್ತಾರೆ. ಅಂಥ ಹಲವರು ಗುರುಪದವನ್ನು ಒಂದು ವೃತ್ತಿಯಾಗಿ ಮಾಡಿಕೊಂಡು, ಜನರ ಗಮನವನ್ನು ಸೆಳೆದು, ಶಿಷ್ಯರನ್ನು ಭಕ್ತರನ್ನು ಸಂಪಾದಿಸುತ್ತಾರೆ ಇಂಥವರನ್ನು ನೋಡಿ ಜನ, 'ಅಪ್ಪಾ, ಇವನು ಎಷ್ಟು ಪುಣ್ಯವಂತ, ನೋಡು, ಅವನ ಬಳಿಗೆ ಎಷ್ಟು ಜನ ಬರುತ್ತಾರೆ ಅವನಿಗೆ ಬೇಕಾದಷ್ಟು ಜನ ಶಿಷ್ಯರು ಅನುಯಾಯಿಗಳು ಇದ್ದಾರೆ ಅವನ ಮನೆಯ ತುಂಬ ಸಾಮಾನು ಸಾಮಗ್ರಿ ಇದೆ. ಜನರು ಅವನಿಗೆ ಕಾಣಿಕೆಗಳನ್ನು ಒಪ್ಪಿಸುತ್ತಾರೆ. ಇವನಿಗೆ ಅಂಥ ಶಕ್ತಿ ಇದೆ ಇಷ್ಟ ಬಂದರೆ ಅವನು ಹತ್ತಾರು ಜನಕ್ಕೆ ಸಮಾರಾಧನೆ ಮಾಡಬಲ್ಲನು,' ಎನ್ನುತ್ತಾರೆ. ಇಂಥ ಗುರುವೃತ್ತಿ ವೇಶ್ಯೆಯ ವೃತ್ತಿಯ ತೆರನದು. ಇಷ್ಟು ಹಣ, ಇಷ್ಟು ಗೌರವ, ಇಷ್ಟು ಸುಖಕ್ಕಾಗಿ, ಆತ್ಮವನ್ನು ಮಾರಿಕೊಳ್ಳುವ ಕ್ರಮ ಈ ಅಲ್ಪ ಭಾಗ್ಯಗಳಿಗಾಗಿ ಮೈ, ಮನಸ್ಸು, ಆತ್ಮಗಳನ್ನು ದುರ್ವಿನಿ

ಯೋಗ ಮಾಡುವುದು ಸರಿಯಲ್ಲ ವಿಶಿಷ್ಟ ಶಕ್ತಿಗಳು ಇರುವುದು ದೈವವನ್ನು ಸೇರುವ ಸಲುವಾಗಿ ”

## ೧೦

## ಹೊಸಕಾಲದ ಸಾಧುಗಳು

ಇತ್ತೀಚೆಗೆ ನಮ್ಮಲ್ಲಿ ಹೊರಗೆ ಹೋಗಿ ಹೆಸರುಮಾಡಿ ಶಿಷ್ಯರನ್ನು ಸಂಪಾದಿಸಿ ಹಿರಿಯರೆನ್ನಿಸಿಕೊಳ್ಳುವ ಹಂಬಲ ನಮ್ಮ ಜಾಣ ಜನರಲ್ಲಿ ಹೆಚ್ಚಾಗುತ್ತಾ ಬಂದಿದೆ. ಧರ್ಮದ ಕ್ಷೇತ್ರದಲ್ಲಿ ಇದನ್ನು ಮೊದಲಲ್ಲಿ ಮಾಡಿದವರು ಸ್ವಾಮಿ ವಿವೇಕಾನಂದರು ಇದು ಆದದ್ದು ಈಗ ನೂರು ವರ್ಷದ ಹಿಂದೆ. ಆಗ ನಾವು ಒಂದು ಪರಾಧೀನ ಜನಾಂಗ ಆಗಿದ್ದೆವು ಹೊರಗಿನ ಜನಕ್ಕೆ ನಾವು ಕಡಮೆ ಅಲ್ಲ ಎಂದು ತೋರಿಸುವುದೇ ಅವಶ್ಯಕವಾಗಿತ್ತು. ಸ್ವಾಮಿ ವಿವೇಕಾನಂದರು ಗುರಿಯನ್ನು ಸಾಧಿಸುವುದಕ್ಕೆ ಪರದೇಶಕ್ಕೆ ಹೋಗಬೇಕಾಯಿತು. ಆಮೇಲಿನ ದಿನಗಳಲ್ಲಿ ಬೇರೆ ಕ್ಷೇತ್ರಗಳಲ್ಲಿ ಸಹ ನಾವು ಶಕ್ತರೆಂದು ತೋರಿಸುವುದಕ್ಕೆ ರವೀಂದ್ರನಾಥ ಠಾಕೂರರು, ಶ್ರೀ ವಿ ಎಸ್ ಶ್ರೀನಿವಾಸಶಾಸ್ತ್ರಿಗಳವರು, ಶ್ರೀ ರಾಧಾಕೃಷ್ಣನ್‌ರವರು ಮುಂತಾದ ಶ್ರೇಷ್ಠ ಕವಿ, ವಾಗ್ಮಿ, ತತ್ವಜ್ಞಾನಿಗಳು, ಹೊರಗಿನ ಜನರ ಪ್ರಶಂಸೆಯನ್ನು ಗಳಿಸಿದರು, ಜನಾಂಗದ ಪ್ರತಿಷ್ಠೆಯನ್ನು ಹೆಚ್ಚಿಸಿದರು. ಈಗ ನಾವು ಒಂದು ಸ್ವತಂತ್ರ ಜನಾಂಗ ಆಗಿದ್ದೇವೆ. ನಮ್ಮ ಶ್ರೇಷ್ಠ ಸಾಹಿತಿ ಕಲಾವಿದ ತತ್ವಜ್ಞಾನಿ, ವಾಗ್ಮಿ, ಪರದೇಶಗಳಿಗೆ ಹೋಗಿ ನಮ್ಮ ಪ್ರತಿಷ್ಠೆಯನ್ನು ಕಾಪಾಡಬೇಕಾದ ಸ್ಥಿತಿ ಏನೂ ಇಲ್ಲ. ಆದರೂ ಹಿಂದಿನ ಹಿರಿಯರು ಮಾಡಿದ ಪರದೇಶಯಾತ್ರೆಯ ಕ್ರಮ ಒಂದು ಚಟ ಎಂಬಂತೆ ನಮ್ಮಲ್ಲಿ ಬೆಳೆದುಕೊಂಡಿದೆ. ಇದಕ್ಕೆ ತಕ್ಕಂತೆ ಪಾಶ್ಚಾತ್ಯ ದೇಶಗಳಲ್ಲಿ ಸಂಸ್ಕೃತಿ ರೂಪದ ಸಾಮಾಜಿಕ ಚಟುವಟಿಕೆ ಕಡಿಮೆ ಆಗಿಯೋ, ಜನಸಾಮಾನ್ಯದ ಯಾವುದೋ ಒಂದು ಅಪೇಕ್ಷೆಯನ್ನು ಸಲ್ಲಿನದೆ ಇರುವುದರಿಂದಲೋ, ತಕ್ಕಷ್ಟು ಸಂಖ್ಯೆಯ ಜನ ಬಾಳುವೆಯಲ್ಲಿ ಹೊಸ ರೀತಿಗಳನ್ನು ಹುಡುಕುವುದು, ನಮ್ಮ ದೇಶದ ಸಂಸ್ಕೃತಿ ಸಂಪತ್ತಿನಿಂದ ಸಹಾಯವನ್ನು ನಿರೀಕ್ಷಿಸುವುದು, ವಾಡಿಕೆಗೆ

ಬಂದಿದೆ. ಇದರಿಂದ ನಮ್ಮ ಜೀವನದಲ್ಲಿ ಹಲವು ಅನಾರೋಗ್ಯ ಲಕ್ಷಣಗಳ ಪ್ರವೃತ್ತಿಗಳು ತಲೆ ಎತ್ತಿವೆ.

ಸ್ವಾಮಿ ವಿವೇಕಾನಂದರ ಉಪದೇಶ ಸರಣಿಯನ್ನು ಒಪ್ಪಿಕೊಂಡು ನಮ್ಮ ಸಂಸ್ಕೃತಿಯನ್ನು ಮೆಚ್ಚಿ ಸ್ವಾಮಿಗಳೊಂದಿಗೆ ಹಲವಾರು ಅಮೆರಿಕನ್ ಜನ ಆಂಗ್ಲ ಜನ ಬಂದದ್ದನ್ನು ಬಲ್ಲೆವು. ಇಂಥ ಜನರಲ್ಲಿ ಹಣವೊಂದಿಗರಾದವರು ಧನ ಸಹಾಯ ಮಾಡಿ, ಸ್ವಾಮಿ ನಮ್ಮ ದೇಶದಲ್ಲಿ ತಮ್ಮ ಪರಂಪರೆಯ ಹಲವು ಸಂಸ್ಥೆಗಳನ್ನು ನಿರ್ಮಿಸಿದರು ಈಚೆಗೆ ನಡೆದಿರುವ ಕೆಲವು ವ್ಯವಹಾರ ಆ ವ್ಯವಹಾರದಂತೆ ಕಾಣುತ್ತವೆ. ಆದರೆ ಅದರ ಲಕ್ಷಣಗಳು ಇವುಗಳಲ್ಲಿ ಕಾಣುವುದಿಲ್ಲ ಶ್ರೀ ಅರವಿಂದರವರ ಆಶ್ರಮವನ್ನು ದಕ್ಷತೆಯಿಂದ ಆಳಿ ಒಂದು ಶ್ರೇಷ್ಠ ಸಂಸ್ಥೆಯಾಗಿ ನಡೆಸಿದ ಸಹಯೋಗಿನಿ ತಾಯಿಯವರು ಕೊನೆಯ ದಿನಗಳಲ್ಲಿ, ಅರವಿಂದರ ಉಪದೇಶದಂತೆ ಬಾಳುವ ಜನರು ಪ್ರಪಂಚದ ಎಲ್ಲ ದೇಶಗಳವರೂ ಒಂದು ಕಡೆ ನೇರಿ ಆಧ್ಯಾತ್ಮದಲ್ಲಿ ಬೆಳೆಯಲಿ ಎಂಬ ಅಪೇಕ್ಷೆಯಿಂದ, 'ಆರೋವಿಲ್' ಎಂಬ ಒಂದು ನಗರವನ್ನು ನಿರ್ಮಿಸಲು ಯೋಚಿಸಿದರು ಸಹಯೋಗಿನಿ ಮಾತೆ ಇದ್ದಷ್ಟು ದಿವಸ ಈ ಸಂಸ್ಥೆ ತಕ್ಕಷ್ಟು ತೃಪ್ತಿಕರವಾಗಿಯೇ ನಡೆಯಿತು ಹಿರಿಯರು ಕಣ್ಮರೆಯಾದದ್ದೇ ಅದು ಬಣ್ಣಕೆಟ್ಟಿತು ಹೊರಗಿನಿಂದ ಬಂದ ಜನ, ನಮ್ಮ ರಾಷ್ಟ್ರದ ಜನ ಜೊತೆಯಾಗಿ ನಡೆಯಲಾರದೆ ದೊಡ್ಡ ಗೊಂದಲವೇ ಎದ್ದಿತು ಈಗಲೂ ಅದು ಮುಗಿದಿಲ್ಲ. ಎರಡು ಪಕ್ಷವೂ ತಮ್ಮ ವಾದ ಗೆಲ್ಲಬೇಕೆಂದು ಜಗ್ಗುತ್ತಿವೆ. ಅರವಿಂದರ ಅಥವಾ ಸಹಯೋಗಿನಿ ಮಾತೆಯ ಭಾವನೆಗಳು ಈ ಗೊಂದಲದಿಂದ ಬಿಡಿಸಿಕೊಂಡು ಫಲಿಸಿಯಾವು ಎಂದು ಯಾರೂ ನಿರೀಕ್ಷಿಸುವಂತಿಲ್ಲ.

ಆರೋವಿಲ್ಲಿಗೆ ವಿದೇಶದಿಂದ ಬಂದ ಜನ ಅಲ್ಲದೆ ಬೇರೆ ಜನ ಬಂದು ಇಲ್ಲಿ ನಮ್ಮ ಸ್ವಾಮಿಗಳ ರೀತಿ ವೇಷ ಹಾಕಿಕೊಂಡು, ನಮ್ಮ ಸ್ವಾಮಿಗಳ ರೀತಿ ಹೆಸರುಗಳನ್ನಿಟ್ಟುಕೊಂಡು, ತಾವೂ ಸ್ವಾಮಿಗಳೆಂದು ಓಡಾಡುತ್ತಿದ್ದಾರೆ. ಇವರಲ್ಲಿ ಒಬ್ಬರು ಸ್ವಾಮಿ ಅಗೇಹಾನಂದ ಎಂಬವರು ಇವರನ್ನು ನಾನು ಕಂಡಿಲ್ಲ ಇವರ ವಿಷಯ ಬೇರೆ ಏನೂ ನನಗೆ ತಿಳಿಯದು ಇವರು ಆಡಿದ ಒಂದು ಮಾತಿನ ವರದಿಯನ್ನು ಮಾತ್ರ ಪತ್ರಿಕೆಗಳಲ್ಲಿನೋಡಿ ಬೆಕ್ಕಸಗೊಂಡೆನು. ತಮ್ಮ ಲೇಖನ ಒಂದರಲ್ಲಿ ಅವರು, "ನಿಮ್ಮಲ್ಲಿ ಎಲ್ಲರೂ ನಾನು ಏನು

ತಿನ್ನುತ್ತೇನೆ, ಎಲ್ಲಿ ಮಲಗುತ್ತೇನೆ ಎನ್ನುವ ವಿಷಯ ತುಂಬ ಕುತೂಹಲದಿಂದ ಪ್ರಶ್ನಿಸುತ್ತೀರಿ ನಾನು ಮಾಂಸ ತಿಂದರೆ ಏನು ತಪ್ಪು? ಶ್ರೀರಾಮ ಸೀತೆ ಮಾಂಸ ತಿನ್ನಲಿಲ್ಲವೇ? ನಾನು ಯಾರೊಡನೆ ಮಲಗಿದೆ, ಅದರ ಮಾತು ನಿಮಗೇಕೆ?" ಎಂದು ಬರೆದರು ನಮ್ಮ ಜನ, ಸ್ವಾಮಿ ಎಂದು ಕರೆದು ಕೊಳ್ಳುವ ಜನರಿಂದ ಒಳ್ಳೆಯ ನಡತೆಯನ್ನು ನಿರೀಕ್ಷಿಸುತ್ತದೆ. ಅವರು ಜಿಹ್ವಾ, ಗುಹ್ಯ, ಎರಡರಲ್ಲೂ ನಿಷ್ಠೆಯಿಂದ ನಡೆಯಬೇಕು ಹೀಗೆ ಮಾಡದೆಯೂ ಒಬ್ಬ ಸ್ವಾಮಿಯಾಗಿರುತ್ತೇನೆ ಎಂದವರನ್ನು ಈ ಜನ ಸ್ವಾಮಿ ಎಂದು ಒಪ್ಪು ವುದಿಲ್ಲ. ಹೊರಗಿನಿಂದ ಬಂದು ಸ್ವಾಮಿಯಾಗಿ ಬಾಳುವೆವೆಂಬ ಜನ ಎಲ್ಲರಿಂದ ಒಳ್ಳೆಯವರು ಎನ್ನಿಸಿಕೊಳ್ಳಬೇಕು. ಎಲ್ಲರ ಒಪ್ಪಿಗೆಯನ್ನು ಗಳಿಸದೆ ಇಂಥ ಜನ ಅದೇ ಜನದ ಮಧ್ಯೆ ಒಬ್ಬ ಸ್ವಾಮಿಯಾಗಿ ಬಾಳಲು ಯತ್ನಿಸುವುದು ಯುಕ್ತ ಅಲ್ಲ

ಚೈತನ್ಯ ಪಂಥದ ಸಂನ್ಯಾಸಿ ಒಬ್ಬರು ಈಚೆಗೆ ಅಮೆರಿಕಾ ದೇಶಕ್ಕೆ ಹೋಗಿ ಪ್ರವಚನಗಳನ್ನು ಮಾಡಿ ಅನೇಕ ಜನರನ್ನು ಚೈತನ್ಯ ಗುರುವಿನ ಪಂಥದ ಶಿಷ್ಯರನ್ನಾಗಿ ಮಾಡಿಕೊಂಡರು ಆಂಗ್ಲ ಭಾಷೆಯಲ್ಲಿ ಮನುಷ್ಯರು 'Krishna conscious' ಆಗುವುದು ಒಂದೇ ಸರಿಯಾದ ಲಕ್ಷ್ಯ ಎಂದು ಇವರಲ್ಲಿ ನಂಬಿಕೆ ಯನ್ನು ಬಿತ್ತಿದರು ಶಿಷ್ಯರಾದ ಈ ಜನ, ನಮ್ಮ ಜನ ಭಜನೆಯಲ್ಲಿ 'ಹರೇ ರಾಮ, ಹರೇ ರಾಮ, ರಾಮ ರಾಮ ಹರೇ ಹರೇ, ಹರೇ ಕೃಷ್ಣ ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ' ಎಂದು ಭಜನೆ ಮಾಡುವ ರೀತಿಯಲ್ಲಿ ಭಜನೆ ಮಾಡುವುದನ್ನು ವಾಡಿಕೆಮಾಡಿಕೊಂಡರು. ಇಂಥ ಶಿಷ್ಯರು ಅನೇಕರು ನಮ್ಮ ದೇಶಕ್ಕೂ ಬಂದರು, ಮುಖ್ಯ ನಗರಗಳಲ್ಲಿ ಸಂಸ್ಥೆಗಳನ್ನು ಕಟ್ಟಿದರು, ಈ ಭಜನೆಯ ಕ್ರಮವನ್ನು ಹಿಡಿದು ಆಧ್ಯಾತ್ಮಿಕ ಜೀವನವನ್ನು ಆರಂಭಿಸಿದರು. ಇಂಥ ಜನರಲ್ಲಿ ಹಲವರು ತಕ್ಕಷ್ಟು ಹಣವೊಂದಿಗರಿರಬೇಕು. ತಮ್ಮ ಜೀವನಕ್ಕೆ ಅವಶ್ಯಕವಾದ ಹಣ ಅಷ್ಟೇ ಅಲ್ಲದೆ ಇಂಥ ಕೆಲಸದಲ್ಲಿ ಬಳಸಲು ಬೇಕಾಗುವ ಹಣವನ್ನು ಕೂಡ ಇವರು ಒದಗಿಸಬಲ್ಲರು ಎಂದು ಕಾಣುತ್ತದೆ. ತಮ್ಮ ಗುರು ರಚಿಸಿದ ಇಂಗ್ಲಿಷ್ ಭಾಷಾಂತರ ಹಲವನ್ನು ಇವರು ಪ್ರಕಟಿಸಿದ್ದಾರೆ. ಇವರಲ್ಲಿ ಇಬ್ಬರು ಎರಡು ವರ್ಷದ ಹಿಂದೆ ನನ್ನ ಬಳಿಗೆ ಬಂದರು. ತಮ್ಮ ಗುರುವಿನ ಗ್ರಂಥವೊಂದನ್ನು ನನಗೆ ಕೊಟ್ಟು ಅದರ ವಿಷಯ ನನ್ನ ಅಭಿಪ್ರಾಯ ಹೇಳ

ಬೇಕೆಂದು ಕೇಳಿದರು ಆ ಗ್ರಂಥ ಭಾಗವತದ ಒಂದು ಸ್ಕಂಧದ ಭಾಷಾಂತರ ಅದು ಮೂಲದ ಅರ್ಥವನ್ನು ಎಚ್ಚರದಿಂದ ಅನುಸರಿಸಿರಲಿಲ್ಲ ಭಾಷಾಂತರದ ಇಂಗ್ಲಿಷ್ ತಕ್ಕಷ್ಟು ಚೆನ್ನಾಗಿರಲಿಲ್ಲ ಹಲವು ಶ್ಲೋಕಗಳ ಭಾಷಾಂತರ ವನ್ನು ಓದಿ ನಾನು ನನಗೆ ಸರಿಯಲ್ಲ ಎಂದು ಕಂಡ ವಿವರಗಳನ್ನು ಗುರುತಿಸಿ ಇವರು ಮರಳಿ ಬಂದಾಗ ಇವರಿಗೆ ತಿಳಿಸಿದೆನು. ಅವರಿಗೆ ಅದು ರುಚಿಸಲಿಲ್ಲ ಉದಾಹರಣೆಗೆ ಭಾಷಾಂತರ ಒಂದು ಸಂದರ್ಭದಲ್ಲಿ benedicted ಎಂಬ ಪದವನ್ನು ಬಳಸಿತ್ತು. ಇದು ಸರಿಯಾದ ರೂಪ ಅಲ್ಲ ಇವರ ಮನೆ ಮಾತು ಇಂಗ್ಲಿಷ್. ಆದರೂ ಇವರು ಸರಿಯಾದ ಇಂಗ್ಲೀಷನ್ನು ಕಾಣರು 'Benediction' ಎಂದು ಕ್ರಿಯಾಪದ ಆಗುವುದಿಲ್ಲ ಎಂದು ನಾನು ಹೇಳಿದಾಗ, "'benedicted' ಎಂಬ ನಾಮಪದ ಇದೆ ಅಲ್ಲವೆ? ಅದಕ್ಕೆ ಮೂಲವಾಗಿ benedict ಎನ್ನುವ ಕ್ರಿಯಾಪದ ಇರಬೇಕು ಅಲ್ಲವೆ," ಎಂದರು Benedict ಎಂಬ ಕ್ರಿಯಾಪದ ಇಲ್ಲ ಎಂದು ನಾನು ಹೇಳಿದೆ ಡಿಕ್ಷನೆರಿ ನೋಡಿ ತಿಳಿಯು ತ್ತದೆ ಎಂದೆ ಅವರು ಡಿಕ್ಷನೆರಿಯನ್ನು ನೋಡಬಯಸಿದರು ಡಿಕ್ಷನೆರಿಯನ್ನು ಅವರ ಕೈಯಲ್ಲಿ ಕೊಟ್ಟೆ ಅದರಲ್ಲಿ ಹುಡುಕಿ ಪದವನ್ನು ಕಾಣದೆ ಅವರು ನನ್ನ ಮಾತನ್ನು ಒಪ್ಪಿಕೊಂಡರು ಮೊದಲು ನನಗೆ ಆ ಪುಸ್ತಕವನ್ನು ಕೊಡುವಾಗ ಅದನ್ನು ಉಚಿತವಾಗಿ ಕೊಟ್ಟಿರುವುದಾಗಿ ತಿಳಿಸಿದ್ದರು ಇಷ್ಟೆಲ್ಲ ಆದಮೇಲೆ "ಹಾಗಾದರೆ ನಾವು ಈ ಪುಸ್ತಕವನ್ನು ತೆಗೆದುಕೊಂಡು ಹೋಗು ತ್ತೇವೆ" ಎಂದರು. "ಅವಶ್ಯವಾಗಿ ತೆಗೆದುಕೊಂಡು ಹೋಗಿ," ಎಂದು ಹೇಳಿ ನಾನು ಅವರಿಗೆ ಪುಸ್ತಕವನ್ನು ಹಿಂದಕ್ಕೆ ಕೊಟ್ಟೆನು.

ಇಬ್ಬರೂ ನಮ್ಮ ಸಂಪ್ರದಾಯದ ಬ್ರಹ್ಮಚಾರಿಗಳಂತೆ ಜುಟ್ಟನ್ನು ಇಟ್ಟು ಕೊಂಡಿದ್ದರು ತಲೆಯ ಕೂದಲ ಉಳಿದ ಭಾಗದಲ್ಲಿ ಕ್ಷೌರ ಮಾಡಿಸಿ ಕೊಂಡಿದ್ದರು , ಮುಖಕ್ಕೆ ತಿಲಕವನ್ನಿಟ್ಟುಕೊಂಡಿದ್ದರು. ಕೃಷ್ಣನನ್ನು ಕುರಿತು ಏನೇನನ್ನು ತಿಳಿದುಕೊಂಡಿದ್ದರೋ ನಾನು ಕಾಣೆ "ಹರೇ ರಾಮ ಹರೇ ರಾಮ, ರಾಮ ರಾಮ ಹರೇ ಹರೇ, ಹರೇ ಕೃಷ್ಣ ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ" ಇಷ್ಟನ್ನು ಹೇಳಲು ಅಂತೂ ಕಲಿತಿದ್ದಿರಬೇಕು. ಇದು ಕೃಷ್ಣ ಕಾನ್‌ಷಸ್(Krishna conscious) ಸ್ಥಿತಿಅಂತೂ ಅಲ್ಲ, ಅದನ್ನು ಮುಟ್ಟಲು ಏರಬೇಕಾದ ಸೋಪಾನದಲ್ಲಿ ಮೊದಲ ಮೆಟ್ಟಲು ಇರಬಹುದು. ಆರಂಭದ ಈ

ಸ್ಥಿತಿಯಲ್ಲೇ ಈ ತರುಣರು ವಿದೇಶದಿಂದ ಬಂದು ನಮ್ಮ ಜನರಲ್ಲಿ ಕೃಷ್ಣಭಕ್ತಿಯನ್ನು ಪ್ರಚಾರಮಾಡಲು ತೊಡಗಿದ್ದರು

ಅಮೆರಿಕಾದಲ್ಲಿ ಈ ಪಂಥದ ಜನ ಗುಂಪುಗಳಾಗಿ ತಮಗೆ ಬೇಕಾದ ಹಣವನ್ನು ಬೆದರಿಕೆಯಿಂದ ಗಳಿಸುವುದು, ಅವಶ್ಯಕವೆಂಬ ಸ್ಥಳವನ್ನು ಕ್ರಮವಾಗಿ ಪಡೆಯದೆ ಆಕ್ರಮಿಸಿಕೊಳ್ಳುವುದು, ಮುಂತಾದ ಅಕ್ರಮ ವ್ಯವಹಾರದಲ್ಲಿ ತೊಡಗಿದ್ದಾರೆ ಎಂದು ಅಮೆರಿಕಾಕ್ಕೆ ಹೋಗಿಬಂದ ಮಿತ್ರರೊಬ್ಬರು ಹೇಳಿದರು. ಇದು ದಿಟ ಇರಬೇಕು, ಇಲ್ಲಿಂದ ಅಮೆರಿಕಾಕ್ಕೆ ಹೋದ ಒಬ್ಬ ಭಾರತೀಯನಿಗೆ ಇಂಥ ಮಾತು ಕಿವಿಗೆ ಬೀಳಬೇಕಾದರೆ ಅದಕ್ಕೆ ಕಾರಣವಾಗಿ ಯಾವುದೋ ವ್ಯವಹಾರ ಇದ್ದಿರಬೇಕು ಎಂದು ಊಹಿಸಬೇಕಾಗುತ್ತದ

ನಮ್ಮ ದೇಶದಲ್ಲಿ ಈ ಪಂಥದ ಜನಕ್ಕೆ ಬೇರೆ ಕೆಲವು ಜನಕ್ಕೆ ಮಧ್ಯೆ ಕಲಕತ್ತಾ ನಗರದಲ್ಲಿ ಏನೋ ಘರ್ಷಣೆ ನಡೆಯಿತೆಂದು ಪತ್ರಿಕೆಗಳಲ್ಲಿ ವರದಿಯಾಗಿತ್ತು. ಮುಂಬಯಿ ನಗರದ ಒಂದು ಭಾಗದಲ್ಲಿ ಈ ಸಂಸ್ಥೆಯ ಸದಸ್ಯರ ತಂಡವೊಂದು ಒಂದು ದೇವಾಲಯಕ್ಕೆ ಒಟ್ಟಿಗೆ ಹೋದಾಗ ಯಾವನೋ ಒಬ್ಬ ತರುಣ ಸಮುದಾಯದಲ್ಲಿದ್ದ ತರುಣಿ ಒಬ್ಬಳನ್ನು ಕೆಣಕಿ ತುಂಬಾ ಕೋಲಾಹಲ ಆಯಿತು ಎಂದೂ ಒಂದು ವರದಿ. 'ಕೃಷ್ಣ ಕಾನ್‌ಷಸ್' ಆಗುವುದು ಸುಲಭ ಅಲ್ಲ ಎನ್ನುವುದಂತೂ ಇದರಿಂದೆಲ್ಲ ಸ್ಪಷ್ಟ ಆಗುತ್ತದೆ.

ನಮ್ಮಲ್ಲಿ ಒಬ್ಬರು ಭಗವದ್ಗೀತೆಯನ್ನು ಕುರಿತು ಅನೇಕ ಉಪನ್ಯಾಸಗಳನ್ನು ಮಾಡಿ, ಜನರ ಪ್ರೀತಿ ಗೌರವಗಳನ್ನು ಗಳಿಸಿದ್ದಾರ ಉಪನ್ಯಾಸಗಳನ್ನು ನಾನು ಕೇಳಿಲ್ಲ, ಇವರು ಮಾಡಿದ ಒಂದು ರೇಡಿಯೋ ಭಾಷಣವನ್ನು ಕೇಳಿದೆನು ಅದರಲ್ಲಿ ಇವರು ವಿಶೇಷ ಸಂಗತಿ ಏನನ್ನಾದರೂ ತಿಳಿಸಿದ್ದು ನನಗೆ ಕಾಣಲಿಲ್ಲ ಉಪನ್ಯಾಸಗಳಿಗೆ ಜನ ಗುಂಪುಗುಂಪಾಗಿ ಹೋಗುತ್ತಾರೆ ಎಂದು ಕೇಳಿದ್ದೇನೆ ಗೀತೆಯ ವಿಷಯದಲ್ಲಿ ಜನಕ್ಕೆ ಆಸಕ್ತಿ ಇರುವುದು ಒಳ್ಳೆಯದು. ಈ ದೃಷ್ಟಿಯಿಂದ ಉಪನ್ಯಾಸಗಳು ಜನರಿಗೆ ಪ್ರಿಯವಾಗಿರುವುದು ಸಂತೋಷವೇ. ಇರುತ್ತ, ಇವರು ಆಡಿದ ಮಾತಿನ ವಿಷಯ ಎರಡು ನನ್ನ ಕಿವಿಗೆ ಬಿದ್ದು ನನ್ನ ಮನಸ್ಸಿಗೆ ಕಷ್ಟ ಆಯಿತು. ಇದನ್ನು ನಾನು ವಿಜ್ಞಾಪಿಸಬೇಕು. ಸಿಟಿ ಇನ್‌ಸ್ಟಿಟ್ಯೂಟ್ ವಿನೋದ ಮಂದಿರದ ಆವರಣದಲ್ಲಿ ಮಾಡಿದ ಒಂದು ಭಾಷಣ ಮಾಲೆಯ ಕೊನೆಯ ಭಾಷಣದಲ್ಲಿ ಭಾಷಣಕಾರರು, "ಗೀತೆಯ ವಿಷಯ

ನಾನು ಹೇಳಿರುವ ಈ ಮಾತು ಯಾವುದಾದರೂ ತಮ್ಮಲ್ಲಿ ಯಾರಿಗಾದರೂ ಸ್ಪಷ್ಟವಾಗದಿದ್ದಲ್ಲಿ ನನಗೆ ಕಾಗದ ಬರೆದು ಕೇಳಿರಿ, ನಾನು ಸಂಗತಿಯನ್ನು ವಿಶದಪಡಿಸಿ ಉತ್ತರ ಕೊಡುತ್ತೇನೆ. ಇಷ್ಟೇ ಹೀಗೆ ಮಾಡುವ ನೆಪದಲ್ಲಿ ಹೆಣ್ಣುಮಕ್ಕಳು ಯಾರೂ ನನಗೆ ಒಲವಿನ ಪತ್ರ (love letter) ಗಳನ್ನು ಬರೆಯಬೇಡಿರಿ," ಎಂದರಂತೆ ಆಗ ಶ್ರೋತೃಗಳ ಸಭೆಯಲ್ಲಿ ಅನೇಕ ಸ್ತ್ರೀಯರೇ ಇದ್ದಿದ್ದರೆ ಆಶ್ಚರ್ಯವಿಲ್ಲ. ಇಷ್ಟು ಜನರಲ್ಲಿ ಬುದ್ಧಿ ಸಾಲದ ತರುಣ ಸ್ತ್ರೀಯರು ನಾಲ್ಕುಜನ ಇದ್ದರೆ ಇದ್ದಿರಬಹುದು ಅವರು ಈ ಮುನ್ನ ಇವರಿಗೆ ಒಲವಿನ ಪತ್ರ ಬರೆದಿರಬಹುದು. ಇದನ್ನು ದೊಡ್ಡದು ಮಾಡಿಕೊಂಡು ನೀತಿಬೋಧಕರಾದ ಇಂಥ ಜನ ತಕ್ಕಷ್ಟು ವಯಸ್ಸಿನ ತಕ್ಕಷ್ಟು ತಿಳುವಳಿಕೆಯು, ಮರ್ಯಾದೆವಂತ ಮನೆವೊಂದಿಗ ಸ್ತ್ರೀಯರಿರುವ ಒಟ್ಟು ಸಭೆಗೆ ಇಂಥ ಮಾತನ್ನು ಹೇಳಿದರ ? ಇದು ನನಗೆ ಆಶ್ಚರ್ಯವಾಯಿತು, ಬೇಸರವಾಯಿತು

ಇದೇ ನೀತಿಬೋಧಕರ ಇನ್ನೊಂದು ಸಭೆಯಲ್ಲಿ ಮನೆಗಳ ಗಂಡಸರು ತಮ್ಮ ಮನೆಯ ಸ್ತ್ರೀಯರನ್ನು ಕರೆದುಕೊಂಡು ಬಂದು ಸಭೆಯಲ್ಲಿ ಕಲೆತು ಕುಳಿತಿದ್ದಾಗ ಉಪನ್ಯಾಸಕರು ಗಂಡಸರನ್ನು ಉದ್ದೇಶಿಸಿ, "ತಕ್ಕಷ್ಟು ವರಮಾನ ಇರುವ ಗಂಡಸರು ಎರಡು ಪಕ್ಕದಲ್ಲಿ ಇಷ್ಟರಾದ ಸ್ತ್ರೀಯರನ್ನು ಕೂರಿಸಿಕೊಂಡು ಬಲಗೈಯನ್ನು ಬಲದ ಚೆಲುವೆಯ ಭುಜದ ಮೇಲೆ, ಎಡಗೈಯನ್ನು ಎಡದ ಚೆಲುವೆಯ ಭುಜದ ಮೇಲೆ ಚಾಚಿ ಲೋಲುಪ್ತರಾಗಿರುವಾಗ ಗೀತೆಯ ಮಾತು ನಿಮಗೆ ಹೇಗೆ ರುಚಿಸಬೇಕು," ಎಂಬ ಅರ್ಥದ ಮಾತನ್ನಾಡಿದರಂತೆ. ಈ ಮಾತುಗಳನ್ನು ಆಡುತ್ತ ಭುಜಗಳನ್ನು ಮೇಲಕ್ಕೆ ಕೆಳಕ್ಕೆ ಆಡಿಸಿ ಲೋಲುಪ್ತಿಯನ್ನು ನಟಿಸಿ ತೋರಿಸಿದರಂತೆ. ಇದನ್ನು ನನಗೆ ತಿಳಿಸಿದ ಮಿತ್ರರು, "ಇದನ್ನು ಕೇಳಿ ಸಭೆಯ ಬಹು ಜನ ಘೊಳ್ಳೆಂದು ನಕ್ಕರು, ನನಗೆ ಈ ಮಾತು ಹದ ತಪ್ಪಿತು, ಎನ್ನಿಸಿತು," ಎಂದರು.

ಈ ಮಾತನ್ನು ಕೇಳಿದಾಗ ನನಗೂ ಹಾಗೆಯೇ ಎನ್ನಿಸಿತು. ಇಂಥ ಮಾತನ್ನು ಕೇಳಿ ನಗಬಲ್ಲ ಜನ ಗೀತೆಯನ್ನು ಕುರಿತ ಉಪನ್ಯಾಸವನ್ನು ಎಷ್ಟು ತಿಳಿದುಕೊಳ್ಳಬಲ್ಲರು ಎಂದು ನನಗೆ ಸಂದೇಹ ಆಯಿತು.

ಈಚೆಗೆ ಸ್ಕಾಟ್ಲೆಂಡಿನ ಒಬ್ಬ ನಿವಾಸಿ ಬೆಂಗಳೂರಿಗೆ ಬಂದು ಆಧ್ಯಾತ್ಮ ಜೀವನದಲ್ಲಿ ನಿಂತರು. ಕೆಲವು ಕಾಲದ ಬಳಿಕ ನಗರದಿಂದ ಹಲವು ಮೈಲಿ

ದೂರದ ಒಂದು ಗ್ರಾಮದಲ್ಲಿ ಒಂದು ಆಶ್ರಮವನ್ನು ಮಾಡಿಕೊಂಡರು. ಒಂದು ಇಂಗ್ಲಿಷ್ ಭಾಷೆಯ ಪತ್ರಿಕೆಯನ್ನು ಪ್ರಕಟಿಸಲು ಆರಂಭಿಸಿದರು. ಸಂನ್ಯಾಸಿ ಆದರೆಂದು ಕಾಣುತ್ತದೆ. ಅವರ ಶಿಷ್ಯರು ಈಗ ಅವರ ಹೆಸರಿಗೆ 'ಸ್ವಾಮಿ' ಶಬ್ದವನ್ನು ಸೇರಿಸಿದ್ದಾರೆ. ಪತ್ರಿಕೆಯ ಹೆಸರು "ವ್ಯಾಲ್ಯೂಸ್." ಬರವಣಿಗೆ ತಕ್ಕಷ್ಟು ಒಳ್ಳೆಯ ಮಟ್ಟದ್ದು ಕೇರಳದ ಒಬ್ಬ ಗುರುಗಳ ಪರಂಪರೆ ಈ ಸಂನ್ಯಾಸಿಗಳಿಗೆ ರುಚಿಸಿತ್ತು ಎನ್ನುವುದು ಪತ್ರಿಕೆಯಿಂದ ಕಾಣುತ್ತಿತ್ತು ಇವರಲ್ಲಿ ಸಂಸ್ಕೃತದ ಸ್ತೋತ್ರ ಗ್ರಂಥ ಒಂದರ ಭಾಷಾಂತರವೂ ಪ್ರಕಟವಾಗುತ್ತಿತ್ತು. ಇರುತ್ತ ಒಂದು ಸಂಗತಿಯಲ್ಲಿ ಈ ಸ್ವಾಮಿಗಳು ಹಿಡಿದ ನಿಲುವು ಅಪಾಯದ್ದೆಂದು ನನಗೆ ಕಂಡಿತು ನಾಗರಿಕತೆ ಬೆಳೆಸಿ ತಂದಿರುವ ಅನೇಕ ನಿರ್ಬಂಧಗಳು ಕೆಟ್ಟವು ಎಂದು ಪಶ್ಚಿಮ ದೇಶಗಳಲ್ಲಿ ಈಗ ಒಂದು ವಾದ ಪ್ರಬಲವಾಗಿ ತಲೆಯೆತ್ತಿದೆ ಈ ನಿರ್ಬಂಧಗಳಲ್ಲಿ ಒಂದು, ಜನ ವಸ್ತ್ರಗಳನ್ನು ಧರಿಸಿರಬೇಕು ಎನ್ನುವುದು. ಯಾರೇ ಆಗಲಿ ಹತ್ತು ಜನರ ಮಧ್ಯೆ ನಡೆಯುವಾಗ ಬಟ್ಟೆಗಳನ್ನು ಧರಿಸಿರಬೇಕು, ಬೆತ್ತಲೆ ಇರಕೂಡದು. ಕಲವರು "ನಿಮ್ಮ ನಾಗರಿಕತೆ ನಮಗೆ ಬೇಕಿಲ್ಲ, ಈ ನಿರ್ಬಂಧ ದುಷ್ಟ, ಇದನ್ನು ನಾವು ತ್ಯಜಿಸಿದ್ದೇವೆ," ಎಂದು ಬೆತ್ತಲೆ ಓಡಾಡಲು ಯತ್ನ ಮಾಡಿ, ನಗರಗಳ ಪೋಲೀಸ್ ಜನ ಅವರನ್ನು ತಡೆದು ಆ ದೇಶಗಳಲ್ಲಿ ಸಣ್ಣಪುಟ್ಟ ಗೊಂದಲ ಆಗಿರುವುದುಂಟು. ನಮ್ಮಲ್ಲಿ ಕೆಲವು ವಿಶೇಷ ಸಂದರ್ಭಗಳಲ್ಲಿ ನಗ್ನತೆಯ ಉಪಾಸನೆ ನಡೆದಿದೆ ದಿಗಂಬರ ಜೈನರಲ್ಲಿ ನಿರ್ಗ್ರಂಥಿಗಳೆಂಬ ಕೂಟದ ಸಂನ್ಯಾಸಿಗಳು ಬೆತ್ತಲೆ ಇರುತ್ತಾರೆ. ಆದರ ಇವರು ಹತ್ತು ಜನರ ಎದುರಲ್ಲಿ ನಡೆದಾಡುವುದಿಲ್ಲ, ತಮ್ಮಷ್ಟಕ್ಕೆ ತಾವು ಉಪಾಸನೆಯಲ್ಲಿ ಇರುತ್ತಾರೆ. ಪರಮಹಂಸ ರಾಮಕೃಷ್ಣರು ದಕ್ಷಿಣೇಶ್ವರದ ತಮ್ಮ ನಿವಾಸದಲ್ಲಿ ಬೆತ್ತಲೆ ಕುಳಿತಿರುತ್ತಿದ್ದರು. ಶಿಷ್ಯರು ಹೆಣ್ಣು ಗಂಡು ಎಂಬ ಭೇದ ಇಲ್ಲದೆ ಅವರ ಹತ್ತಿರ ಬರುವರು, ಸುತ್ತಲೂ ಕುಳ್ಳಿರುವರು, ಉಪದೇಶವನ್ನು ಕೇಳಿ ಹಿಂದಿರುಗುವರು. ಹೀಗೆ ಹೊರತಾಗಿ ಸಾಧು ಎಂಬ ಕಾರಣದಿಂದ ಯಾವನೇ ಆಗಲಿ ಬರಿಮೈಯಲ್ಲಿ ಬೀದಿಯಲ್ಲಿ ನಡೆಯುವುದು ನಮ್ಮ ದೇಶದಲ್ಲೂ ಒಂದು ಅಪರಾಧವೇ ಆಗುತ್ತದೆ ದೆಹಲಿ ನಗರದಲ್ಲಿ ತಾನು ಸಾಧು ಎಂದು ಒಬ್ಬಾತ ಒಂದುದಿನ ಬೀದಿಯಲ್ಲಿ ಬರಿಮೈಯಲ್ಲಿ ನಡೆಯಲು ಹೊರಟನಂತೆ. ಪೋಲೀಸ್

ಜನ ಇದಕ್ಕೆ ಅಡ್ಡಿಮಾಡಿದರು. ಅವನು ಹಟ ಮಾಡಿದ. ಪೋಲೀಸರು ಅವನನ್ನು ಹಿಡಿದರು. ಬೇಡವೆಂಬ ಮಾತಿಗೆ ಒಪ್ಪದ ಕಾರಣ ಅಪರಾಧಿ ಎಂದು ಕೋರ್ಟಿನ ಎದುರಲ್ಲಿ ನಿಲ್ಲಿಸಿದರು ಈ ವಿಷಯವನ್ನು ಹಿಡಿದು ಟೀಕೆ ಮಾಡುತ್ತ 'ವ್ಯಾಲ್ಯೂಸ್' ಪತ್ರಿಕೆಯಲ್ಲಿ ನಮ್ಮ ಸ್ವಾಮಿ ವಿಷಾದವನ್ನು ವ್ಯಕ್ತಪಡಿಸಿದರು. "ಸಂಕುಚಿತ ಮನೋಧರ್ಮದ ಪಾಶ್ಚಾತ್ಯದೇಶಗಳಲ್ಲಿ ಇಂಥ ನಡತೆ ಅನಿವಾರ್ಯ. ಭರತವರ್ಷದಂಥ ಅತ್ಯಂತ ಉದಾರ ವರ್ತನೆಯ ದೇಶದಲ್ಲಿ ಕೂಡ ಮನುಷ್ಯರಲ್ಲಿ ಬೆತ್ತಲೆ ಓಡಾಡುವುದಕ್ಕೆ ಸ್ವಾತಂತ್ರ್ಯ ಇಲ್ಲವಾದುದು ತಪ್ಪು," ಎಂದರು. ಭರತವರ್ಷ ಉದಾರ ಮನೋಧರ್ಮದ ದೇಶ ಅಹುದಾದರೂ ಇದರಲ್ಲಿ ಇಷ್ಟ ಬಂದವರು ಎಲ್ಲೆಂದರೆ ಅಲ್ಲಿ ಎಲ್ಲರೆದುರು ಬರಿಮೈಯಲ್ಲಿ ನಡೆದಾಡುವುದಕ್ಕೆ ಅವಕಾಶ ಇರಬೇಕು ಎನ್ನುವ ಸ್ವಾತಂತ್ರ್ಯದ ಕಲ್ಪನೆ ತೀರ ಅತಂತ್ರ. ಹೊರಗಿಂದ ಬರುವ ಇಂಥ ಜನ ನಮ್ಮ ಜನಸಾಮಾನ್ಯರಲ್ಲಿ ಸಮಾಜದ ನಿಯಮಗಳ ವಿಷಯದಲ್ಲಿ ಎಂತಹ ವಿಚಿಕಿತ್ಸೆಯನ್ನು ಬಿತ್ತಿಯಾರು ಹೇಳು ವಂತಿಲ್ಲ ಈಚೆಗೆ ಆಂಧ್ರಪ್ರದೇಶದ ಒಂದು ಕೋರ್ಟಿನಲ್ಲಿ ಒಂದು ಅಪರಾಧಕ್ಕೆ ಕಾರಣಳೆಂಬ ದೂರು ಹೊತ್ತು ನಿಲ್ಲಬೇಕಾದ ಮಂಗಮ್ಮ ಎಂಬಾಕೆ, "ತಾನು ಬೆತ್ತಲೆಯ ವ್ರತವನ್ನು ಹಿಡಿದಿದ್ದೇನೆ, ಕೋರ್ಟಿಗೆ ಬರಿಮೈಯಲ್ಲಿ ಬರಲು ಅಪ್ಪಣೆ ಬೇಕು," ಎಂದು ಬೇಡಿದರು ಎಂದು ವರದಿ ಆಯಿತು. ಕೋರ್ಟು ಮೊದಲಲ್ಲಿ ಆಕೆಯ ಅಪೇಕ್ಷೆಯನ್ನು ನಿರಾಕರಿಸಿತು ಆಮೇಲೆ ಮೇಲ್ಪಟ್ಟ ಕೋರ್ಟಿನ ಅಪ್ಪಣೆಯಂತೆ, ಈಕೆ ಬೆತ್ತಲೆ ಇರಬಹುದು, ಆದರೆ ಈಕೆಯ ಶಿಷ್ಯರು ಇವಳ ಮೈಯನ್ನು ಮರೆಸಿ ಸುತ್ತ ಒಂದು ಬಟ್ಟೆಯನ್ನು ಹಿಡಿದಿರ ಬೇಕು ಎಂದು ಒಪ್ಪಿಗೆ ಕೊಟ್ಟಿತು.

## ೧೧

## ಯೋಗ

ಈಚೆಗೆ ನಮ್ಮಲ್ಲಿ ಅತಿಯಾಗಿ ಬೆಳೆಯುತ್ತಿರುವ ಒಂದು ಪ್ರಚಾರ ಯೋಗವನ್ನು ಕುರಿತಿದೆ ಈ ಪ್ರಚಾರದ ವಿಷಯ ದಿಟದಲ್ಲಿ ಪೂರ್ವದಲ್ಲಿ

'ಹಟಯೋಗ' ಎಂದು ಕರೆಯುತ್ತಿದ್ದ ಯೋಗದ ಒಂದು ಭಾಗವನ್ನು ಮಾತ್ರ ಕುರಿತಿರುತ್ತದೆ. ಹಟಯೋಗ ದೇಹದ ಆರೋಗ್ಯವನ್ನು ಕಾಪಾಡಿಕೊಂಡು ಅದನ್ನು ಸ್ವಾಧೀನವಾಗಿರುವ ಮನಸ್ಸಿನ ಅಧೀನದಲ್ಲಿ ಇರಿಸಿಕೊಳ್ಳುವುದು. ಯೋಗದಲ್ಲಿ ಎಂಟು ಅಂಗಗಳಿವೆ ಹಟಯೋಗ ಆ ಅಂಗಗಳಲ್ಲಿ ಒಂದಾದ ಆಸನವನ್ನು ಕುರಿತದ್ದು. ಈ ಆಸನಗಳನ್ನು ಅಭ್ಯಾಸಮಾಡುವುದು ಒಳ್ಳೆಯದೇ ಆದರೆ ಇಷ್ಟರಿಂದ ಸಿದ್ಧಿಸುವ ಫಲ ತೀರ ಅಲ್ಪ ಆಸನಗಳ ಸಾಧನೆಗೆ ಮೊದಲು ಯೋಗಿಯಾಗಲೆಳಸುವವನು ಯಮನಿಯಮಗಳನ್ನು ಸಾಧಿಸಬೇಕು ಈ ಮೂರು ಸಾಧನೆಯಿಂದ ದೇಹವನ್ನು ಅಧೀನಕ್ಕೆ ತಂದುಕೊಂಡಮೇಲೆ ಪ್ರಾಣಾಯಾಮ ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬ ಭಾಗಗಳನ್ನು ಕ್ರಮವಾಗಿ ಸಾಧಿಸಬೇಕು ಯಮನಿಯಮ, ಎಂದರೆ ಏನು ? ಪ್ರಾಣಾಯಾಮ ಮಾಡುವುದು ಹೇಗೆ ? ಪ್ರತ್ಯಾಹಾರ ಎನ್ನುವುದು ಏನು? ಧ್ಯಾನ, ಧಾರಣಗಳ ಕ್ರಮ ಏನು ? ಸಮಾಧಿ ಎಂಬ ಅವಸ್ಥೆ ಎಂಥದು ? ಇದನ್ನೆಲ್ಲ ತಿಳಿದುಕೊಳ್ಳದೆ ಆಸನ ಎಂಬ ಒಂದು ಭಾಗದಲ್ಲಿ ವ್ಯವಸಾಯ ನಡೆಯುವುದು ಸಾಧನೆಯ ಮಾರ್ಗವಲ್ಲ ಸಮಾಧಿ ಎನ್ನುವುದು ಯೋಗದ ಮಾರ್ಗವನ್ನು ಹಿಡಿದುಹೊರಟ ಎಷ್ಟು ಸಾಧಕರಲ್ಲಿ ಒಬ್ಬನಿಗೆ ಸಿದ್ಧಿಸಬಹುದೋ ಹೇಳುವಂತಿಲ್ಲ. ಹೊಸಕಾಲದಲ್ಲಿ ಹಾಗೆ ಸಿದ್ಧಿಪಡೆದವರು ಹಲವರು ಇದ್ದದ್ದು ಕಾಣಲಿಲ್ಲ ರಾಮಕೃಷ್ಣ ಪರಮಹಂಸ ಗುರು ಒಬ್ಬರು ಸಮಾಧಿಗೆ ಇಳಿದು ಹೊರಕ್ಕೆ ಬರುತ್ತಿದ್ದರು, ಅವರ ಈ ಸಿದ್ಧಿಯನ್ನು ಅನೇಕ ಜನ ನೋಡಿದ್ದರು, ಎಂದು ಅವರ ಪರಂಪರೆಯಲ್ಲಿ ಹೇಳಿದೆ ಕೋಟಿಯಲ್ಲಿ ಒಬ್ಬರಿಗೆ ದೊರಕಿದ ಸಿದ್ಧಿಯನ್ನು ಹಲವರು ಗಳಿಸಬಹುದು ಎಂದು ತಿಳಿಯುವುದು ತಪ್ಪು. ಅದರಲ್ಲೂ ಎಂಟು ಅಂಗದ ಯೋಗದಲ್ಲಿ ಒಂದು ಅಂಗವನ್ನು ಯೋಗ ಎಂದು ಕರೆದು, ಅದರ ಹಿಂದುಮುಂದಿನ ಅಂಗಗಳ ಪರಿವೆ ಇಲ್ಲದೆ ಅದನ್ನು ಸಾಧಿಸತೊಡಗುವುದು ವಿವೇಕದ ಕ್ರಮವಲ್ಲ. ಇದೇ ಕಾರಣದಿಂದಲೇ ನಮ್ಮ ಪೂರ್ವಿಕರು ಹಟಯೋಗದ ಮಾರ್ಗದಿಂದ ಸಾಧಿಸುವ ಸಮಾಧಿಯ ಸಾಧನೆಯ ಕ್ರಮವನ್ನು ಕೆಲವರಿಗೆ ಮಾತ್ರ ದಕ್ಕಬಹುದಾದ ಕ್ರಮವೆಂದು ಒಂದು ಬದಿಗಿಟ್ಟರು, ಸಾಮಾನ್ಯಜನರಿಗೆ ಅದರ ಗೋಜು ಬೇಡ ಎಂದರು ಭಗವದ್ಗೀತೆ ಒಂದೊಂದು ಅಧ್ಯಾಯದ ವಿಷಯವನ್ನು ಒಂದು ಯೋಗ ಎಂದು ಕರೆದಿದೆ. ಎಂದರೆ

ಗೀತೆಯ ಪ್ರಕಾರ ಹದಿನೆಂಟು ಯೋಗಗಳು ಇವೆ. ಅವುಗಳಲ್ಲಿ ನಮ್ಮ ಹಿರಿಯರು ಮೂರನ್ನು ಶ್ರದ್ಧೆ ಉಳ್ಳ ಸಾಮಾನ್ಯ ಜನ ಉಪಾಸಿಸಬಹುದಾದ ಯೋಗಗಳು ಎಂದು ಆರಿಸಿದರು. ಕರ್ಮಯೋಗ, ಜ್ಞಾನಯೋಗ, ಭಕ್ತಿ ಯೋಗ, ಹಾಗೆ ಆರಿಸಿದ ಯೋಗಗಳು ಕರ್ಮಯೋಗ, ಜೀವನದಲ್ಲಿ ಮಾಡುವ ಎಲ್ಲ ಕಾರ್ಯವೂ ದೇವರಸೇವೆ ಎಂದು ನೆನೆದು ಅದನ್ನು ತಪ್ಪಿಲ್ಲದೆ ನಡೆಸುವುದು. ಇದರಲ್ಲಿ ಒಬ್ಬೊಬ್ಬನ ವರ್ಣ, ಆಶ್ರಮಗಳಿಗೆ ಸಂಬಂಧಿಸಿದ ಕೆಲಸವೂ ಸೇರಿದೆ ಎಲ್ಲ ಕೆಲಸವನ್ನೂ ವಿಧ್ಯುಕ್ತ ರೀತಿಯಲ್ಲಿ ಲೋಪವಿಲ್ಲದೆ ನಡೆಸುವುದೆನ್ನುವುದು ಪ್ರಾಯಶಃ ಸಾಧ್ಯವೇ ಅಲ್ಲ. ಜ್ಞಾನಯೋಗ ಪರತತ್ವದ ಸ್ವರೂಪವನ್ನು ತಿಳಿದು ಆ ತಿಳಿವನ್ನು ಭದ್ರಪಡಿಸಿಕೊಳ್ಳುವ ಕ್ರಮ. ಈ ತಿಳಿವು ಹೀಗೆ ಭದ್ರವಾದಾಗ ಮನುಷ್ಯ ತನ್ನ ಆತ್ಮ ಪರಮಾತ್ಮನಿಂದ ಬೇರೆ ಅಲ್ಲ ಎಂದೋ, ಪರಮಾತ್ಮದ ಒಂದು ಭಾಗ ಎಂದೋ, ಪರಮಾತ್ಮನ ಎದುರಲ್ಲಿ ಸೇವೆಗೆ ನಿಂತಿರುವ ಒಂದು ಭಾಗ ಆದ ಆತ್ಮ ಎಂದೋ ಭಾವಿಸುತ್ತಾನೆ ಈ ಸ್ಥಿತಿ ಸಿದ್ಧಿಸುವುದು ಸುಲಭವೇನೂ ಅಲ್ಲ ಭಕ್ತಿಯೋಗ, ಲೋಕವನ್ನು ನಡೆಸುತ್ತಿರುವ ಶಕ್ತಿ ಒಂದಿದೆ. ಮನುಷ್ಯನಾದವನು ಅದರ ಸ್ವರೂಪವನ್ನು ಪೂರ್ಣವಾಗಿ ತಿಳಿಯುವುದು ಸಾಧ್ಯವಲ್ಲ, ಅದು ಬಹು ದೊಡ್ಡ ಶಕ್ತಿ, ಸದ್ಗುಣಪೂರ್ಣ, ದೋಷರಹಿತ, ಸರ್ವವ್ಯಾಪಿ, ಸರ್ವಶಕ್ತ, ಕೃಪಾಲು, ಎನ್ನುವುದನ್ನು ಗ್ರಹಿಸಿ, ಅದರ ಕೃಪೆಯನ್ನು ಬೇಡಿ, ಅದರ ಎದುರಲ್ಲಿ ಬಾಗಿ ನಡೆಯುವುದು. ಕರ್ಮ, ಜ್ಞಾನಯೋಗಗಳ ಜೊತೆಗೆ ಹೋಲಿಸಿದರೆ ಇದು ಅವಕ್ಕಿಂತ ಸುಲಭವಾದ ಒಂದು ಕ್ರಮ ಎನ್ನುವುದು ಸ್ಪಷ್ಟ ಇದಕ್ಕೆ ಮುಖ್ಯವಾಗಿ ಬೇಕಾದದ್ದು ದೇವರನ್ನು ಕುರಿತು ಸರಿಯಾದ ಕಲ್ಪನೆ ಸರಿ ಎನ್ನುವುದರ ಅರ್ಥ ದೈವ ನಮ್ಮನ್ನು ಕಾಪಾಡುತ್ತಿರುವ ಶ್ರೇಷ್ಠ ಮಹಾತತ್ತ್ವ ಎಂದು ನಂಬುವ ಮನೋಧರ್ಮ. ದೇವರು ಎಷ್ಟು ದೊಡ್ಡವನು ಎಂದು ನಾವು ತಿಳಿಯಬೇಕಾದದ್ದಿಲ್ಲ ಅವನು ಲೋಕವನ್ನು ನಡೆಸುತ್ತಿದ್ದಾನೆ ಎಂದಮೇಲೆ ಅವನು ನಮ್ಮ ಬುದ್ಧಿಗೆ ಊಹೆಗ ನಿಲುಕಲಾಗದಷ್ಟು ದೊಡ್ಡವನು ಎಂದು ಮನವುಟ್ಟಿದರೆ ಸಾಕು. ಅವನ ಎದುರಿಗೆ ತಗ್ಗಿ ನಡೆಯುವುದು ಕಷ್ಟವಾಗುವುದಿಲ್ಲ ದೇವರು ಒಳ್ಳೆಯ ಗುಣವನ್ನು ಒಪ್ಪುತ್ತಾನೆ, ದುರ್ಗುಣವನ್ನು ಒಪ್ಪುವುದಿಲ್ಲ. ಇದು ಸದ್ಗುಣಗಳ ಆಕರನಾದ ಅವನ ಲಕ್ಷಣ ಆದ್ದರಿಂದ ನಾವು ಒಳ್ಳೆಯದಾಗಿ ಬಾಳಬೇಕು.

ಈ ಒಳ್ಳೆಯದು ಎನ್ನುವುದು ಯಾವುದು ? ಇದನ್ನು ಈ ಮುನ್ನ ಹೇಳಿದೆ ಈ ಒಳ್ಳೆಯದು ಎನ್ನುವುದನ್ನೆಲ್ಲ ಒಬ್ಬ ಮನುಷ್ಯ ಮಾಡಬರುವುದೇ ? ಬರುವುದಿಲ್ಲ ಎಂದಮೇಲೆ ತಪ್ಪು ಆಗಿಯೇ ಆಗುತ್ತದೆ ಇದರಿಂದೆಲ್ಲ ಮೂಡುವ ಫಲ ಇದು. "ಅಪಾರ ಮಹಿಮೆಯ ನನ್ನ ದೇವರಾದ ನಿನ್ನೆದುರು ನಾನು ಏನೂ ಅಲ್ಲ ನಿನ್ನನ್ನು ನಾನು ನನ್ನಂಥ ಒಂದು ಪುರುಷನೆಂದು ಭಾವಿಸಿ ನಿನ್ನ ಕಾಲಮೇಲೆ ಬಿದ್ದಿದ್ದೇನೆ ನನ್ನ ಒಳಗಿನ ಸತ್ವವಾಗಿರುವ ನೀನು ನನ್ನನ್ನು ಸರಿಯಾಗಿ ನಡೆಸು, ನನ್ನ ತಪ್ಪುಗಳನ್ನು ಮನ್ನಿಸು, ನನ್ನನ್ನು ಕಾಪಾಡು," ಎಂದು ಬೇಡಿಕೊಳ್ಳುವುದು ಇದನ್ನು ನಮ್ಮ ಪೂರ್ವಿಕರು ಶರಣಾಗತಿ ಎಂದು ಕರೆದರು. ಹತ್ತಾರು ಸಾವಿರ ವರ್ಷಗಳ ನಮ್ಮ ಧರ್ಮದ ಸಾಧನ ಪರಂಪರೆಯ ಈ ಕೊನೆಯ ಹಂತ ಎಂಥ ಸಾಮಾನ್ಯ ಚೇತನಕ್ಕೂ ಸುಲಭ ಆದದ್ದು. ನಮ್ಮ ಜನತೆಯ ಜೀವನ ಹಲವು ಶತಮಾನಗಳ ಕಾಲದಿಂದ ಈ ಹಂತದಲ್ಲಿ ನಡೆದು ಬಂದಿದೆ. ಅನೇಕ ಮನೋಧರ್ಮಗಳ ಕೋಟ್ಯಂತರ ಜನರ ಉಪಾಸನೆಯ ಮಾರ್ಗವಾದ ಕಾರಣದಿಂದ ಇದರ ಸದ್ಯದ ಉಪಾಸನೆಯಲ್ಲಿ ಕೆಲವು ಕೊರತೆಗಳು ಸೇರಿಕೊಂಡಿವೆ. ಈ ಕೊರತೆಗಳನ್ನು ಗುರುತಿಸಿ, ಜೀವನ ಕ್ರಮದಿಂದ ಅವನ್ನು ನಿವಾರಿಸಿ, ಭಕ್ತಿಯೋಗವನ್ನು ಪರಿಷ್ಕರಿಸಿ ಜನರಲ್ಲಿ ಪ್ರಚಾರ ತರುವುದೇ ಜನ ಸಾಮಾನ್ಯರ ಉದ್ಧಾರವನ್ನು ಬಯಸುವ ನಮ್ಮ ಧರ್ಮದ ಗುರುವರ್ಗ ಇಂದು ಕೈಗೊಳ್ಳಬೇಕಾಗಿರುವ ಕಾರ್ಯ

## ೧೨

## ರಹಸ್ಯಗಳು

ಪೂರ್ವದಿಂದ ಬಂದಿರುವ ನಮ್ಮ ಸಂಪತ್ತಿನಲ್ಲಿ ನಮಗೆ ಎಷ್ಟೋ ಭಾಗ ಈಗಲೂ ಉಳಿದಿದೆ. ಆದರೂ ಅನೇಕ ಭಾಗ ಕಳೆದುಹೋಗಿದೆ. ಮರೆವು, ಅನಾದರ, ಆಲಸ್ಯ ಅಲ್ಲದೆ, ಈ ನಷ್ಟ ನಮ್ಮ ಜ್ಞಾನದ ಜೊತೆಯಲ್ಲಿ ಬೆಳೆದು ಬಂದಿರುವ ಒಂದು ದುಷ್ಟ ಸಂಪ್ರದಾಯದಿಂದ ಉಂಟಾಗಿದೆ ಈ ಸಂಪ್ರದಾಯ ಬಲ್ಲ ಜನ ಅನೇಕವೇಳೆ ತಾವು ಕಲಿತ ಸಂಗತಿಯನ್ನು ರಹಸ್ಯ ಎಂದು ತಮ್ಮಲ್ಲೇ

ಇಟ್ಟುಕೊಂಡು ಇತರರಿಗೆ ಹೇಳದೆ ಕೊನೆಗಾಣಿಸಿದ್ರು. ನಾವು ಬಲ್ಲಂತೆ ವೈದಿಕ ಸಂಪ್ರದಾಯ ಗಾಯತ್ರೀ ಮಂತ್ರವನ್ನು ಒಂದು ರಹಸ್ಯವಾಗಿ ಕಾಣುತ್ತಾ ಬಂದಿದೆ ಇದೇನು ಬ್ರಾಹ್ಮಣರು ಇತರ ಜಾತಿಯವರಿಗೆ ಹೇಳದೆ ಬಚ್ಚಿಟ್ಟು ಕೊಂಡ ಶ್ರೇಷ್ಠ ಸಂಪತ್ತು ಎಂದಲ್ಲ, ದ್ವಿಜರಲ್ಲೇ ಇದು ಗುರುವಿನಿಂದ ಪಡೆದು ಬರುವ ರಹಸ್ಯ ಮಂತ್ರ ಉಪನಯನದಲ್ಲಿ ಪುರೋಹಿತರ ಅನುಮತಿಯಿಂದ ತಂದೆ ಮಗನಿಗೆ ಮಂತ್ರವನ್ನು ಉಪದೇಶಿಸಬೇಕು ಈ ಉಪದೇಶವೇ ಉಪನಯನ ಸಂಸ್ಕಾರದ ಮುಖ್ಯ ಭಾಗ ಈ ಮಂತ್ರವನ್ನು ಹೀಗೆ ರಹಸ್ಯವಾಗಿ ಇಡಬೇಕಾದ ಕಾರಣ ಏನಿತ್ತು ? ಇದನ್ನು ರಹಸ್ಯ ಎಂದವರು ಏಕೆ ಹಾಗೆಂದರೋ ನನಗೆ ತಿಳಿಯುತ್ತಿಲ್ಲ ಈಗ ನೋಡಿದರ ನಮಗೆ ಇದನ್ನು ರಹಸ್ಯವಾಗಿಡಬೇಕಾದ ಕಾರಣ ಏನೂ ಇಲ್ಲ ಎನ್ನಿಸುತ್ತದೆ. "ನಮ್ಮ ಅಂತರ್ಯ ವನ್ನು ಪ್ರಚೋದಿಸುವ ದೇವತೆ ಸವಿತೃನ ತೇಜಸ್ಸನ್ನು ನೆನೆಯೋಣ. ಒಳಗಿರುವ ಅರಿವಿನ ಆ ದೈವ ನಮ್ಮನ್ನು ಚೆನ್ನಾಗಿ ನಡೆಸಲಿ" ಈ ಪ್ರಾರ್ಥನೆ ಯನ್ನು ಯಾರೂ ಮಾಡಬಹುದು, ಎಲ್ಲಿಯೂ ಮಾಡಬಹುದು ಎಲ್ಲರೂ ಮಾಡಬೇಕು, ಎಲ್ಲೆಲ್ಲಿಯೂ ಮಾಡಬೇಕು ಎಲ್ಲ ಮನಸ್ಯರೂ ಒಳ್ಳೆಯ ಪ್ರೇರಣೆಯನ್ನೇ ಬಯಸಿ ಒಳ್ಳೆಯ ಪ್ರೇರಣೆಯನ್ನೇ ಪಡೆದು ಒಳ್ಳೆಯದಾಗಿಯೇ ನಡೆದರಾದರೆ ಭೂಮಿ ಭೂಮಿಯಾಗಿರುವುದಿಲ್ಲ, ಸ್ವರ್ಗ ಆಗುತ್ತದೆ ಈ ಪ್ರಾರ್ಥನೆ ರಹಸ್ಯವಾಗಿರಲಿ ಎನ್ನುವಲ್ಲಿ ನಮ್ಮ ಹಿರಿಯರು ಒಂದು ದುಷ್ಟ ಆದ ಮೇಲ್ಪಂಕ್ತಿಯನ್ನು ಹಾಕಿಕೊಟ್ಟರೋ ? ಇದರಂತೆಯೇ ಭಾಗವತ ಧರ್ಮದ ಅಷ್ಟಾಕ್ಷರಿಯ ಮಂತ್ರ ಭಕ್ತಜನರಲ್ಲಿ ಬಹು ರಹಸ್ಯವಾಗಿ ಸಾಗಿಬಂದಿತು. ಆಚಾರ್ಯ ರಾಮಾನುಜರು ಶ್ರೀರಂಗದ ಗುರುಪೀಠವನ್ನು ಏರಿದ ಮೇಲೆ ಇದರ ಉಪದೇಶಕರ ಬಳಿಗೆ ಹಲವಾರು ಬಾರಿ ಹೋಗಿ ಕೊನೆಗೆ ಅವರಿಂದ ಇದನ್ನು ಪಡೆದರಂತೆ. ಇದನ್ನು ಹೇಳಿಕೊಡುವ ಮೊದಲು ಉಪದೇಶಕ ಮಹನೀಯರು ಆಚಾರ್ಯರಿಗೆ, "ಇದು ರಹಸ್ಯ ಇದನ್ನು ಪ್ರಕಟಮಾಡೀಯೇ ಜೋಕೆ ಹಾಗೆ ಏನಾದರೂ ಮಾಡಿದರೆ ನೀನು ನರಕಕ್ಕೆ ಹೋಗುವೆ," ಎಂದರಂತೆ ಆಚಾರ್ಯರು ಉಪದೇಶ ಪಡೆದು ಹೊರಗಡೆ ಬಂದು ದೇವಾಲಯದ ಮುಂದಿನ ಮಂಟಪದ ಮೇಲೆ ಏರಿ, "ಓಂ ನಮೋ ನಾರಾಯಣಾಯ, ಎನ್ನುವುದು ತಾರಕಮಂತ್ರ ಎಲ್ಲರೂ ಇದನ್ನು ಜಪಮಾಡಿಬನ್ನಿ," ಎಂದು ಕೂಗಿ ಹೇಳಿದರಂತೆ ಉಪದೇಶಕ

ಮಹನೀಯರಿಗೆ ಇದು ತಿಳಿದು ಅವರು ಆಚಾರ್ಯರಿಗೆ, "ರಹಸ್ಯವನ್ನು ಬಿಟ್ಟು ಕೊಟ್ಟರೆ ನಿನಗೆ ನರಕ ಎಂದು ಹೇಳಿದೆನಲ್ಲ ನನ್ನ ಮಾತನ್ನು ಏಕೆ ಮೀರಿದೆ?" ಎಂದರಂತೆ ಆಚಾರ್ಯರು. "ಗುರುವಿನ ಆಜ್ಞೆ ಉಲ್ಲಂಘ್ಯ ಅಲ್ಲ, ಬಲ್ಲೆ ಆದರೆ ಉಲ್ಲಂಘಿಸಿದರ ನಾನು ಒಬ್ಬ ನರಕಕ್ಕೆ ಹೋಗುತ್ತೇನೆ ಮಂತ್ರವನ್ನು ತಿಳಿದು ಜಪಿಸುವ ಕೋಟಿ ಜನ ವೈಕುಂಠಕ್ಕೆ ಹೋಗುತ್ತಾರೆ ಇದು ಒಳ್ಳೆಯದು, ಎನ್ನಿಸಿತು. ಆದ್ದರಿಂದ ತಮ್ಮ ಮಾತನ್ನು ಮೀರಿದೆ," ಎಂದರಂತೆ ಉಪದೇಶಕ ಆಮೇಲೆ, "ನಿನ್ನ ಔದಾರ್ಯ ನನಗೆ ಇಲ್ಲದೆ ಹೋಯಿತು," ಎಂದು ಶಿಷ್ಯನನ್ನು ಕ್ಷಮಿಸಿ ಹೊಗಳಿದರಂತೆ ಗಾಯತ್ರೀ ಮಂತ್ರದಂತೆ ಈ ಜಪದ ವಾಕ್ಯವಾದರೂ ಯಾರು ಬೇಕಾದರೂ, ಎಲ್ಲಿ ಬೇಕಾದರೂ ನುಡಿಯಬಹುದಾದದ್ದು. "ಲೋಕದ ಸೃಷ್ಟಿ ಸ್ಥಿತಿ ಲಯಗಳ ಕರ್ತೃ ಏಕೈಕ ದೈವಕ್ಕೆ ನಾನು ನಮಸ್ಕಾರ ಮಾಡು ತ್ತೇನೆ" ಈ ಮಾತು ರಹಸ್ಯವಾಗಿರಬೇಕಾದದ್ದಲ್ಲ ಇದು ರಹಸ್ಯವಾಗಿಡ ಬೇಕು ಎಂದವರು ಪೂರ್ವದಿಂದ ಬಂದಿದ್ದ ದುಷ್ಟವಾದ ಒಂದು ಸಂಪ್ರದಾಯ ವನ್ನು ಪಾಲಿಸುತ್ತ ಬಂದರು ನಮ್ಮ ಧರ್ಮವನ್ನು ಕುರಿತ ಮಾತುಗಳಲ್ಲಿ ಚಿದಂಬರ ರಹಸ್ಯ, ರಹಸ್ಯತ್ರಯಸಾರ, ಗೀತಾರಹಸ್ಯ ಮುಂತಾದ ಪದಪುಂಜಗಳು ಬರುತ್ತಲೇ ಇರುತ್ತವೆ ಈಚೆಗೆ ಈ ಸಂಪ್ರದಾಯ ಹತ್ತಾರು ವಿಷಯದಲ್ಲಿ ಕಾಲುಹಾಕಿ ಮತದ ಸಂಗತಿಗಳಲ್ಲೇ ಅಲ್ಲ ಇಂಥ ಇತರ ಅನೇಕ ಸಂಗತಿಗಳಲ್ಲಿ ಹಾನಿಗೆ ಕಾರಣವಾಗಿದೆ. ನಮ್ಮಲ್ಲಿ ಆಗಾಗ ಈ ಮಾತು ಕೇಳಿಬರುವುದುಂಟು "ಈ ಗುರುಗಳು ಸಿದ್ಧಪುರುಷರು, ಆಶ್ರಯಿಸಿದವರಿಗೆ ಆಪ್ತವಾಗಿ ದೀಕ್ಷೆ ಕೊಡುತ್ತಾರೆ. ದೀಕ್ಷೆ ಪಡೆಯುವವರು ಕಠಿಣವಾದ ನಿಯಮಗಳನ್ನು ಪಾಲಿಸಿದ ಮೇಲೆಯೇ ದೀಕ್ಷೆ ಕೊಡುವುದು. ಈ ನಿಯಮಗಳು ಕೆಲವುವೇಳೆ ವಿಚಿತ್ರವಾಗಿರುತ್ತವೆ. ಅಮಾವಾಸ್ಯೆಯ ದಿನ ಅರ್ಧ ರಾತ್ರಿಯ ಸಮಯ ನದಿಯಲ್ಲೋ ಬಾವಿಯಲ್ಲೋ ಸೊಂಟದಮಟ್ಟದ ನೀರಿನಲ್ಲಿ ನಿಂತು ಉಪದೇಶ ಪಡೆಯಬೇಕು," ಇತ್ಯಾದಿ ಇತ್ಯಾದಿ ದೀಕ್ಷೆಯ ಸ್ವರೂಪ ಏನು ಅದನ್ನು ಪಡೆದವನೊಬ್ಬ ಬಲ್ಲ, ಅವನು ಅದನ್ನು ಯಾರಿಗೂ ಬಿಟ್ಟುಕೊಡಕೂಡದು ಇದರಂತೆ ವೈದ್ಯದಲ್ಲಿ, ಕಲೆಗಳಲ್ಲಿ ರಹಸ್ಯಗಳು ನನ್ನ ಪರಿಚಯದ ವೈದ್ಯರೊಬ್ಬರು ಆಸ್ಪತ್ರೆಯಲ್ಲಿ ತಮ್ಮ ಕೈಕೆಳಗೆ ಕೆಲಸದಲ್ಲಿ ಇದ್ದ ಒಬ್ಬ ಸೇವಕನ ಕತೆಯನ್ನು ಹೇಳಿದ್ದುಂಟು ಒಬ್ಬ ರೋಗಿ ಇವರ ಬಳಿಗೆ ಚಿಕಿತ್ಸೆಗೆ ಬಂದನು. ಇವರು ಅವನಿಗೆ ತನಗೆ ತಿಳಿದ ಎಲ್ಲ

ಚಿಕಿತ್ಸೆಯನ್ನು ಮಾಡಿನೋಡಿದರು ರೋಗ ವಾಸಿಯಾಗಲಿಲ್ಲ. ಒಂದುದಿನ ಸೇವಕ ಇವರಿಗೆ, "ಸ್ವಾಮಿ ನಾನು ಒಂದು ಸೊಪ್ಪನ್ನು ಬಲ್ಲೆ. ಅದರ ರಸವನ್ನು ಹಚ್ಚಿದರೆ ಈ ರೋಗ ವಾಸಿ ಆಗುತ್ತೆ, ನೋಡುತ್ತೀರಾ ?" ಎಂದು ಕೇಳಿದನು ಇವರು, ನೋಡೋಣ ತಾ, ಎಂದರು ಅವನು ಏತರದೋ ಸೊಪ್ಪನ್ನು ಚೆನ್ನಾಗಿ ಹಿಸುಕಿ ಯಾವ ಸೊಪ್ಪು ಎಂದು ಗುರುತು ತಿಳಿಯದಂತೆಮಾಡಿ ಇವರಿಗೆ ಒಪ್ಪಿಸಿದನು ಇವರು ಅದನ್ನು ರೋಗಿಗೆ ಹಚ್ಚಿದರು. ರೋಗ ವಾಸಿ ಆಯಿತು. ಈ ವೈದ್ಯರು ಸೇವಕನನ್ನು ಇದು ಯಾವ ಸೊಪ್ಪು ಎಂದು ಕೇಳಿದರು ಅವನು, "ಇದು ಗುಟ್ಟು ಸ್ವಾಮಿ, ಈ ಗುಟ್ಟನ್ನು ನನಗೆ ತಿಳಿಸಿದವರು ಅದನ್ನು ಯಾರಿಗೂ ಬಿಟ್ಟುಕೊಡುವುದಿಲ್ಲ ಎಂದು ನನ್ನಿಂದ ಆಣೆ ತೆಗೆದುಕೊಂಡಿದ್ದಾರೆ ಆಣೆ ಮುರಿದರ ನನಗೆ ಕೆಡಕಾಗುತ್ತದೆ" ಎಂದು ಹೇಳಿದನು. ವೈದ್ಯ ಒಡೆಯ ಇನ್ನೂರು ಮುನ್ನೂರು ರೂಪಾಯಿಯನ್ನು ಕೊಡುತ್ತೇನೆ, ಎಂದರೂ ಸೇವಕ ಗುಟ್ಟನ್ನು ಬಿಟ್ಟುಕೊಡಲಿಲ್ಲ. ಈಚೆಗೆ ಅವನು ತೀರಿಕೊಂಡಿದ್ದಾನೆ. ಅವನ ಗುಟ್ಟು ಆತನೊಂದಿಗೇ ಕಳೆದುಹೋಗಿದೆ ಹಳೆಯ ಕಾಲದ ವೈದ್ಯಪಂಡಿತರ ಮೊಮ್ಮಕ್ಕಳು ಹಲವರ ಮನೆಗಳಲ್ಲಿ ಈಗಲೂ ಹಿಂದಿನ ಕಾಲನಲ್ಲಿ ಅವರ ತಾತಂದಿರು ಮಾಡಿಸಿದ ಕುಪ್ಪಿ ಪಾತ್ರೆಗಳು ಎಂದು ಕರೆಯುವ ಸಣ್ಣ ದೊಡ್ಡ ಗಾತ್ರದ ಹತ್ತಾರು ಪಾತ್ರೆಗಳ ಗಂಟು ಒಂದು ಇರುತ್ತದೆ. ಯಾವ ಪಾತ್ರೆ ಯಾವ ವ್ಯಾಧಿಗೆ ಚಿಕಿತ್ಸೆ, ಅದನ್ನು ಬಳಸುವ ರೀತಿ ಏನು, ಇದು ಈ ಮೊಮ್ಮಕ್ಕಳಿಗೆ ತಿಳಿಯದು. ಅಂದಿನ ಪಂಡಿತರ ಜ್ಞಾನ ಹೀಗೆ ನಷ್ಟ ಆಗಿದೆ

ಚಿತ್ರಕಲೆಯಲ್ಲಿ ನಮ್ಮ ಪೂರ್ವಿಕರು ಯಾವಯಾವವೋ ವಸ್ತುಗಳನ್ನು ಸೇರಿಸಿ ವರ್ಣಗಳನ್ನು ಮಾಡಿ ಚಿತ್ರಗಳನ್ನು ರಚಿಸುತ್ತಿದ್ದರು. ಎಂದೋ ಬರೆದ ಚಿತ್ರಗಳ ಬಣ್ಣ ಈಗಲೂ ಹಿಂದಿನಂತೆಯೇ ಸ್ಪಷ್ಟವಾಗಿ ಉಳಿದಿದೆ. ಆದರೆ ಅಂದಿನ ಆ ಚಿತ್ರಕಾರರು ಬಣ್ಣವನ್ನು ಹೇಗೆ ಮಾಡಿದರು, ಇದನ್ನು ಇಂದಿನ ನಮ್ಮ ಚಿತ್ರಕಾರರು ಕಾಣರು. ಹಿಂದಿನ ಕಾಲದಲ್ಲಿ ನಮ್ಮ ಚನ್ನಪಟ್ಟಣದಲ್ಲಿ ಕಮ್ಮಾರರು ಒಂದು ರೀತಿಯ ಉಕ್ಕನ್ನು ಮಾಡುತ್ತಿದ್ದರು. ಅದರಿಂದ ವೀಣೆಯ ತಂತಿಗಳನ್ನು ಮಾಡುತ್ತಿದ್ದರು. ಹಿಂದಿನ ಕಾಲದ ವೀಣೆಗಳ ಆ ತಂತಿಯಂತೆ ಈಗ ಬರುವ ಯಾವ ತಂತಿಯೂ ಇಲ್ಲ. ಆ ತಂತಿಯನ್ನು ಮಾಡುವ ಕ್ರಮ

ಅಂದಿನ ಕಮ್ಮಾರರ ಮನೆತನಗಳಲ್ಲಿ ಉಳಿದು ಬಂದಿಲ್ಲ. ಎಷ್ಟೋ ನೂರು ವರ್ಷಗಳ ಹಿಂದೆ ಕಟ್ಟಿದ ನಮ್ಮ ಹಳೆಯ ಕೋಟೆಗಳ ಗಾರೆ ಈಗಲೂ ಭದ್ರವಾಗಿದೆ, ಇನ್ನಷ್ಟು ದಿನ ಉಳಿಯುವಂತೆ ಇದೆ. ಆ ಗಾರೆಯನ್ನು ಆ ಜನ ಹೇಗೆ ಮಾಡಿದರು ? ಆ ವಿವರ ನಮ್ಮ ಗಾರೆಕಾರ ಮನೆತನಗಳ ಜನಗಳಲ್ಲಿ ಉಳಿದು ಬಂದಿಲ್ಲ. ಹೀಗೆಯೇ ಇತರ ಕುಶಲಕರ್ಮಗಳಲ್ಲಿ ಎಷ್ಟು ವಿವರದ ಎಷ್ಟು ರಹಸ್ಯ, ಬಲ್ಲ ಜನ ಅವನ್ನು ರಹಸ್ಯ ಎಂದು ಮುಚ್ಚಿಟ್ಟ ಕಾರಣದಿಂದ ನಷ್ಟವಾದವೋ ಹೇಳುವಂತಿಲ್ಲ. ಈಗಲೂ ಬೇರೆಬೇರೆ ಚಿಕಿತ್ಸೆ ಒಂದೊಂದನ್ನು ಬಲ್ಲ ಒಬ್ಬೊಬ್ಬರು ಅಲ್ಲಲ್ಲಿ ಇದ್ದಾರೆ. ಅವರು ಚಿಕಿತ್ಸೆ ಮಾಡಬಲ್ಲ ರೋಗದ ಜನ ಅವರ ಹೆಸರನ್ನು ಕೇಳಿ ಬಳಿಗೆ ಹೋದರೆ ಚಿಕಿತ್ಸೆಮಾಡಿ ರೋಗಿಗಳನ್ನು ಕಾಪಾಡಿದ್ದಾರೆ. ಆದರೆ ಚಿಕಿತ್ಸೆಯ ರೀತಿಯನ್ನು ಬೇರೆಯವರಿಗೆ ಹೇಳಿಕೊಡುವುದಿಲ್ಲ. ಗುಟ್ಟನ್ನು ಗುಟ್ಟಾಗಿಯೇ ಇರಿಸಬೇಕೆಂಬ ಈ ಮೂಢನಂಬಿಕೆ ಕೊನೆಗೊಂಡಲ್ಲದೆ ಇಂಥ ರಹಸ್ಯಗಳು ಮುಂದಿನ ತಲೆಮಾರಿಗೆ ಉಳಿಯಲಾರವು, ನಮ್ಮ ಜನ ಅವನ್ನು ಕಳೆದುಕೊಳ್ಳಬೇಕಾಗುತ್ತದೆ.

## ೧೩

## ಮತಪರಿವರ್ತನ

ಹಿಂದೂ ಸಮಾಜದ ಒಂದು ದೋಷದ ಕಾರಣ ನಮ್ಮ ಕೆಲವು ಸಮುದಾಯಗಳು ಬೇರೆಯ ಮತಗಳನ್ನು ಸೇರುತ್ತಿರುವ ಸಂಗತಿಯನ್ನು ಪ್ರಬಂಧದ ಆರಂಭದಲ್ಲಿಯೇ ಹೇಳಿದೆ. ಹೀಗೆ ಮತದ ದೃಷ್ಟಿಯಿಂದಲ್ಲದೆ ಬೇರೆಯ ಕಾರಣಕ್ಕಾಗಿ ನಡೆಯುವ ಮತಪರಿವರ್ತನ ವ್ಯರ್ಥವ್ಯಾಪಾರ ಎಂದು ನಮ್ಮ ಹರಿಜನರ ಸಮಸ್ಯೆಯನ್ನು ಕುರಿತ ಪ್ರಸಂಗದಲ್ಲಿ ವಿವರಿಸಿ ಆಗಿದೆ. ಪೂರ್ವದಲ್ಲಿ ಇಂಥ ಮಾತಿಗೆ ಹಿಂದೂ ಸಮಾಜ ಎಂದೂ ಏನೂ ಹೇಳುತ್ತಿರಲಿಲ್ಲ. ಈಗ ರಾಜಕೀಯದಲ್ಲಿ ಸಮುದಾಯಗಳ ಸಂಖ್ಯೆಗೆ ಪ್ರಾಮುಖ್ಯ ಒಂದು ಹಿಂದೂ ಜನರಿಗೆ ಈ ವ್ಯವಹಾರ ಒಂದು ಕುತ್ತವಾಗಿ ಕಾಣುತ್ತಿದೆ. ಹೀಗಾಗಿ

ಧರ್ಮದ ದೃಷ್ಟಿಯಿಂದ ಈ ವಿಷಯವನ್ನು ಮತ್ತಷ್ಟು ವಿವರವಾಗಿ ಪರಿಶೀಲಿಸು ವುದು ಅವಶ್ಯಕವಾಗಿದೆ.

ಸುಮಾರು ಒಂದು ವರ್ಷದ ಹಿಂದೆ ತಮಿಳುನಾಡಿನ ಮೀನಾಕ್ಷಿಪುರ ಎಂಬ ಊರಿನಲ್ಲಿ ಹರಿಜನರು ಹಲವರು ಹಿಂದೂ ಮತವನ್ನು ಬಿಟ್ಟು ಮುಸ್ಲಿಮ ರಾದರು ಇದಕ್ಕೆ ಕಾರಣ ಗ್ರಾಮಜೀವನದಲ್ಲಿ ಇವರ ಮತ್ತು ಇತರ ಹಿಂದೂಗಳ ಮಧ್ಯೆ ಮೂಡಿದ ಒಂದು ವಿರಸ ಈ ಸಂದರ್ಭದಲ್ಲಿ ಮತ್ತೊಂದು ಮಾತು ಕೇಳಿಬಂದಿತು "ಮುಸ್ಲಿಂ ಮತದ ಪ್ರಮುಖರು ಹಣದ ಆಸೆ ತೋರಿಸಿ ಹಿಂದೂಗಳನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳಲು ತೊಡಗಿದ್ದಾರೆ, ಇದಕ್ಕೆ ಅರಬೀಯ ಮುಸ್ಲಿಮರ ಬೆಂಬಲ ಇವೆ, ಎಣ್ಣೆಯ ಉತ್ಪಾದನದಿಂದ ತುಂಬ ಹಣ ಗಳಿಸಿರುವ ಈ ದೇಶಗಳ ಮುಸ್ಲಿಮರು ಇಲ್ಲಿಯ ನಮ್ಮ ಮುಸ್ಲಿಮರಿಗೆ ಹಣ ಕೊಡಲು ಒಪ್ಪಿದ್ದಾರೆ," ಎನ್ನುವುದು ಈ ಮಾತು ಇದು ಹೌದೇ ಅಲ್ಲವೇ ಅದು ಮುಖ್ಯವಲ್ಲ , ಇದರಿಂದ ನಮ್ಮ ಸಮಾಜದ ಹಿರಿಯರಿಗೆ ಭಯ ಆದದ್ದು ಸಹಜ ಒಳಗಿನ ಹಲವು ಕುತ್ತಗಳಿಗೆ ಈಡಾಗಿ ಈ ಸಮಾಜ ಈಗಾಗಲೇ ಅಪಾಯದ ಸ್ಥಿತಿಯಲ್ಲಿದೆ ಈ ಸ್ಥಿತಿಯಲ್ಲಿ ಈ ಕುತ್ತ ಬೇರೆ ಒದಗಿದರೆ ಏನು ಗತಿ ?

ಹಿಂದೂ ಧರ್ಮ ಮೂಲತಃ ಇತರ ಮತಗಳನ್ನು ಆದರದಿಂದ ಕಾಣುವ ಧರ್ಮ. ನಮ್ಮ ದೇಶಕ್ಕೆ ಬಂದ ಬೇರೆಯ ಧರ್ಮಗಳ ಜನರು ಈ ಕಾರಣದಿಂದ ಇಲ್ಲಿ ಸ್ವಾಗತ ಪಡೆದರು. ಇದರಲ್ಲಿ ಮುಸ್ಲಿಂ ಕ್ರೈಸ್ತ ಈ ಎರಡು ಮತಗಳ ಜನ ಪ್ರಚಾರದಲ್ಲಿ ತೊಡಗಿ ಈ ದೇಶದ ನಿವಾಸಿಗಳನ್ನು ತಮ್ಮ ಮತಕ್ಕೆ ಸೇರಿಸಿ ಕೊಳ್ಳಲು ಪ್ರಬಲವಾದ ಪ್ರಯತ್ನಗಳನ್ನು ಮಾಡಿದರು ಮುಸ್ಲಿಂ ಪ್ರಭುಗಳು ಹಿಂದೂ ಧರ್ಮವನ್ನು ಕುಗ್ಗಿಸುವ, ಇಸ್ಲಾಂ ಧರ್ಮವನ್ನು ಶಕ್ತಗೊಳಿಸುವ, ಯತ್ನದಲ್ಲಿ ನಿಸ್ಸಂಕೋಚವಾಗಿ ಬಲಪ್ರಯೋಗ ಮಾಡಿದರು ಕ್ರೈಸ್ತ ಪ್ರಮುಖರೂ ಸಹ ಮೊದಲಲ್ಲಿ ಹೀಗೆಯೇ ಮಾಡಿ ಗೋವಾ ಪ್ರಾಂತದಲ್ಲಿ ಕ್ರೈಸ್ತ ಮತವನ್ನು ಬೆಳೆಸಿದರು. ಈಚೆಗೆ ಮುಸ್ಲಿಂ ಪ್ರಚಾರಕರು ಈ ದಾರಿಯಲ್ಲಿ ನಡೆಯದಿದ್ದರೂ, ಕ್ರೈಸ್ತ ಪಾದರಿಗಳು ಮಾತ್ರ ತಮ್ಮ ಕೆಲಸವನ್ನು ನಡೆಸು ತ್ತಲೇ ಬಂದಿದ್ದಾರೆ ಧಾತು ಈಶ್ವರ ಸಂವತ್ಸರಗಳ ಕ್ಷಾಮದಲ್ಲಿ ನಮ್ಮ ಜನ ಅನೇಕರು ಅನ್ನಕ್ಕಾಗಿ ಕ್ರೈಸ್ತರಾದರು ಈಗಲೂ ಕ್ರೈಸ್ತ ಮಿಷನರಿಗಳು

ಇಂಥ ಯಾವುದಾದರೂ ಒಂದು ಆಸೆಯನ್ನು ತೋರಿ ಜನರನ್ನು ತಮ್ಮ ಧರ್ಮಕ್ಕೆ ಸೇರಿಸಿಕೊಳ್ಳಲು ಹಿಂಜರಿಯುವುದಿಲ್ಲ

ಹಿಂದೂಮತ ಎಲ್ಲ ಮತಗಳನ್ನೂ ಒಪ್ಪಿಕೊಳ್ಳುವ ಮತ ಎಂದಿದೆ. ಇದರಿಂದಲೇ ಜಾರತೂಷ್ಟ್ರನ ಮತ ಅದರ ಮೂಲಭೂಮಿಯಲ್ಲಿ ಅಳಿಸಿ ಹೋಗಿದ್ದರೂ ಈಗಲೂ ಭರತವರ್ಷದಲ್ಲಿ ಜೀವಿಸಿಕೊಂಡಿದೆ. ಇದೇ ಕಾರಣ ದಿಂದಲೇ ಕ್ರೈಸ್ತ ಧರ್ಮವನ್ನು ಅಂಗೀಕರಿಸಿರುವ ದೇಶಗಳಲ್ಲಿ ಒಟ್ಟು ಜನಾಂಗ ಗಳೇ ಕ್ರೈಸ್ತ ಆಗಿರುವಲ್ಲಿ. ಮಹಮ್ಮದೀಯ ಮತವನ್ನು ಅಂಗೀಕರಿಸಿರುವ ದೇಶಗಳಲ್ಲಿ ಒಟ್ಟು ಜನಾಂಗಗಳೇ ಮುಸ್ಲಿಂ ಆಗಿರುವಲ್ಲಿ, ಭರತವರ್ಷದಲ್ಲಿ ಕ್ರೈಸ್ತ ಮತ, ಮಹಮ್ಮದೀಯ ಮತ ಹಿಂದೂ ಮತದೊಂದಿಗೆ ಜೊತೆಯಾಗಿ ಬಾಳು ತ್ತಿವೆ. ಆದ್ದರಿಂದ ನಮ್ಮ ರಾಷ್ಟ್ರಶಾಸನ ಪ್ರಜೆಗಳು ತಮಗೆ ಇಷ್ಟಬಂದ ಮತ ವನ್ನು ಸೇರಬಹುದು ಎಂದು ಸ್ವಾತಂತ್ರ್ಯವನ್ನು ನೀಡಿದೆ. ಎಂದಮೇಲೆ ಬೇರೆಯ ಮತಗಳ ಪ್ರಚಾರಕರು ಹಿಂದೂಗಳನ್ನು ತಮ್ಮ ಮತಗಳಿಗೆ ಸೇರಿಸಿ ಕೊಳ್ಳಲು ಅವಕಾಶ ಇದೆ ಇರುತ್ತ ಇತರ ಮತವನ್ನು ನೇರುವವರು ವಯಸ್ಕ ರಾಗಿರಬೇಕು, ಹಣದ ಆಸೆಯಿಂದ, ಇತರ ಪ್ರಯೋಜನದ ಅಪೇಕ್ಷೆಯಿಂದ ಅಲ್ಲ, ಮತದ ದೃಷ್ಟಿಯಿಂದ ತಮ್ಮ ಮತವನ್ನು ಬಿಡುವವರಾಗಿರಬೇಕು. ಮತಪರಿವರ್ತನದ ಅನೇಕ ಸಂದರ್ಭಗಳಲ್ಲಿ ಈ ಅವಶ್ಯಲಕ್ಷಣಕ್ಕೆ ಗಮನ ದೊರೆಯದೆ ಶಾಸನ ನೀಡಿರುವ ಸ್ವಾತಂತ್ರ್ಯದ ದುರುಪಯೋಗ ನಡೆಯುತ್ತಿದೆ.

ನಮ್ಮ ರಾಷ್ಟ್ರ ಸ್ವತಂತ್ರ ಆಗಿ ಒಂಭತ್ತು ವರ್ಷದ ಬಳಿಕ (೧೯೫೫) ಹೈದರಾಬಾದ್ ರಾಜ್ಯದ ಹಿಂದೂ ಧರ್ಮರಕ್ಷಕ ಸಂಸ್ಥೆ ಒಂದು, "ರಾಜ್ಯದಲ್ಲಿ ಕೆಲವರು ಕ್ರೈಸ್ತ ಪಾದ್ರಿಗಳು ಹಿಂದೂ ಸಮಾಜದ ಜನರಿಗೆ ಒಂದಲ್ಲ ಒಂದು ಆಸೆ ತೋರಿ ಗುಂಪು ಗುಂಪು ಜನರನ್ನು ಕ್ರೈಸ್ತರನ್ನಾಗಿ ಮಾಡುತ್ತಿದ್ದಾರೆ, ಇದನ್ನು ತಡೆಯಬೇಕು" ಎಂದು ದೂರು ಹೊತ್ತಿತು ಕೇಂದ್ರ ಗೃಹಮಂತ್ರಿ ಗೋವಿಂದವಲ್ಲಭ ಪಂತರು ವಿಷಯವನ್ನು ವಿಚಾರಿಸುತ್ತೇವೆ ಎಂದು ಅಪ್ಪಣೆ ಕೊಟ್ಟರು ವಿಚಾರಣೆ ನಡೆಯಿತೇ, ಮುಂದೆ ಏನಾಯಿತು, ಇದರ ವಿಷಯ ವರದಿ ಯಾವುದೂ ಕಾಣಲಿಲ್ಲ.

ಮಧ್ಯಪ್ರದೇಶದಲ್ಲಿ ಎರಡು ವರ್ಷಗಳ ಹಿಂದೆ ಕ್ರೈಸ್ತ ಪಾದ್ರಿ ಒಬ್ಬ ಹಣಕಾಸಿನ ಸಹಾಯದ ಆಸೆಯನ್ನು ತೋರಿ ಹಿಂದುಳಿದ ವರ್ಗಗಳ ನಮ್ಮ

ಜನರನ್ನು ಕ್ರೈಸ್ತರನ್ನಾಗಿ ಮಾಡುತ್ತಿದ್ದುದು ಗಮನಕ್ಕೆ ಬಂದು ಸರಕಾರ ಅವನನ್ನು ತಡೆಯಿತು. ಅವನು ಒಡನೆ ತಾನು ಪಾದ್ರಿ ವೃತ್ತಿಯನ್ನು ಬಿಟ್ಟಿದ್ದೇನೆ ಎಂದನು, ಇದ್ದಲ್ಲಿಯೇ ಉಳಿದನು, ಪಾದ್ರಿ ಅಲ್ಲದೆಯೇ ತನ್ನ ಚೇಷ್ಟೆಯನ್ನು ಮುಂದರಿಸಿದನು. ಈಗ ಇವನ ನಡತೆ ಹೇಗಿದೆಯೋ ಪತ್ರಿಕೆಗಳಿಂದ ತಿಳಿಯುತ್ತಿಲ್ಲ.

ಕೆಲವು ವರ್ಷಗಳ ಹಿಂದೆ ಮದರಾಸಿನಲ್ಲಿ ಒಬ್ಬ ಕ್ರೈಸ್ತ ತರುಣ ಹದಿನಾಲ್ಕು ವರ್ಷದ ಒಬ್ಬ ಹಿಂದೂ ಹುಡುಗಿಯನ್ನು ಒಬ್ಬ ಪಾದ್ರಿಯ ಬಳಿಗೆ ಕರೆತಂದು, "ನಾವು ಮದುವೆಯಾಗಲು ಬಯಸುತ್ತೇವೆ, ಇವಳಿಗೆ ಕ್ರೈಸ್ತ ದೀಕ್ಷೆ ಕೊಡಿ, ನಮಗೆ ಮದುವೆಮಾಡಿ," ಎಂದು ಹೇಳಿದನು.

ಭರತವರ್ಷದ ಕಾನೂನಿನ ಪ್ರಕಾರ ಈ ಹುಡುಗಿಗೆ ದೀಕ್ಷೆ ಕೊಡಬೇಕಾದರೆ ಅವಳಿಗೆ ಇಪ್ಪತ್ತೊಂದು ವರ್ಷವಾಗಿರಬೇಕು. ಅವಳು ತನ್ನ ಅಪೇಕ್ಷೆಯನ್ನು ಪ್ರಕಟಿಸಬೇಕು. ಕ್ರೈಸ್ತ ಪಾದ್ರಿ ಈ ಹುಡುಗಿಗೆ ಇಪ್ಪತ್ತೊಂದು ವರ್ಷವಾಗಿದೆ ಎಂದು ನಂಬಿದೆ ಎಂದು ಅವಳಿಗೆ ದೀಕ್ಷೆ ಕೊಟ್ಟು ಮದುವೆಯನ್ನು ನಡೆಸಿದನಂತೆ. ಪೋಲೀಸರಿಗೆ ದೂರು ಬಂದು ವಿಚಾರಣೆ ನಡೆಯಿತು. ಆ ಕ್ರೈಸ್ತ ತರುಣ, ಈ ಕ್ರೈಸ್ತ ಪಾದ್ರಿ ಇಬ್ಬರ ವರ್ತನೆಯೂ ತಪ್ಪು ಎಂದು ಮ್ಯಾಜಿಸ್ಟ್ರೇಟರು ಅಭಿಪ್ರಾಯಪಟ್ಟರು.

ಇಂಥ ವ್ಯವಹಾರದಲ್ಲಿ ಇಂಥ ಪಾದ್ರಿಗಳಿಂದ ಕ್ರಿಸ್ತ ಗುರುವಿಗೆ, ಅವನ ಧರ್ಮಕ್ಕೆ ಎಷ್ಟು ಗಣನೆ ದೊರೆಯುತ್ತದೆ ಎನ್ನುವುದನ್ನು ಹೇಳುವ ಕೆಲಸ ಇಲ್ಲ.

ಕ್ರೈಸ್ತ ಮತಪ್ರಸಾರ ಬಹುವೇಳೆ ಈ ರೀತಿ ಯಾವುದೋ ಬೇರೆ ಕಾರಣದಿಂದ ನಡೆಯುತ್ತಿರುವುದನ್ನು ಬಿಳಿಯ ಜನ ಬಲ್ಲರು. ಆದರೂ ಇವರು ತಮ್ಮ ಮಿಷನರಿ ಜನರಿಗೆ ಕ್ರೈಸ್ತ ಮತವನ್ನು ಪ್ರಚಾರ ಮಾಡುವುದಕ್ಕೂ ಜನರನ್ನು ಕ್ರೈಸ್ತ ಮತಕ್ಕೆ ಸೇರಿಸಿಕೊಳ್ಳುವುದಕ್ಕೂ ಅಧಿಕಾರ ಇರಬೇಕು ಎಂದು ಬಯಸುತ್ತಾರೆ. ಪ್ರಚಾರಕರಿಗೆ ಧನಸಹಾಯ ಮಾಡುತ್ತಾರೆ, ಬೆಂಬಲ ನೀಡುತ್ತಾರೆ. "ಸ್ವಾತಂತ್ರ್ಯವನ್ನು ಗೌರವಿಸುವ ಜನಾಂಗ ಇಂಥ ವಿಷಯದಲ್ಲಿ ಯಾವ ಅಡ್ಡಿಯನ್ನೂ ಒಡ್ಡಕೂಡದು" ಎಂದು ಬೇರೆ ಹೇಳುತ್ತಾರೆ. ಇದು ನಮ್ಮ ರಾಷ್ಟ್ರ ಶಾಸನ ಮತದ ವಿಷಯವನ್ನು ಕುರಿತು ಒದಗಿಸಿರುವ ಸ್ವಾತಂತ್ರ್ಯದ ಪೂರ್ಣ ದುರುಪಯೋಗ.

ಪಾಶ್ಚಾತ್ಯ ಮಿಷನರಿಗಳ ಈ ಎಲ್ಲ ಪ್ರಯತ್ನದ ಹಿಂದೆ ಅವರ ರಾಜಕೀಯ ಮನೋಧರ್ಮ ಹುದುಗಿಕೊಂಡಿದೆ. ಇಲ್ಲಿನ ಜನ ಹೆಚ್ಚಾಗಿ ಕ್ರೈಸ್ತರಾದರೆ ಅಷ್ಟುಮಟ್ಟಿಗೆ ಇಲ್ಲಿ ತಮ್ಮ ಪ್ರಭಾವ ಹೆಚ್ಚುತ್ತದೆ, ಈ ಜನತೆಯನ್ನು ಹಿಡಿಯುವುದು ತಮಗೆ ಸುಲಭವಾಗುತ್ತದೆ. ಎನ್ನುವುದು ಇವರ ಯೋಚನೆ.

ಪೆಟ್‌ನವ್ ಪೀಲ್ ಎಂಬ ಆಂಗ್ಲ ಲೇಖಕ ಅರವತ್ತು ವರ್ಷದ ಹಿಂದೆ ಬರೆದ ಪುಸ್ತಕದಲ್ಲಿ, "ಆಫ್ರಿಕನ್ ಜನರನ್ನು ಮುಸ್ಲಿಂ ಮತಕ್ಕೆ ಸೇರಲು ಬಿಡಬಾರದು, ಕ್ರೈಸ್ತ ಮತಕ್ಕೆ ಸೇರಿಸಿಕೊಳ್ಳಬೇಕು ಆಗ ಅವರನ್ನು ನಮ್ಮಂತೆ ನಡೆಸಿಕೊಳ್ಳುವುದು ಸಾಧ್ಯವಾಗುತ್ತದೆ," ಎಂದು ಸ್ಪಷ್ಟವಾಗಿ ಹೇಳಿದನು

ಅಂದಿನ ಅವನ ಮಾತು ಇಂದೂ ಅವನ ಜನರಿಗೆ ದೀಪದಂಡವಾಗಿದೆ.

ಪೂರ್ವದಲ್ಲಿ ಬಲಾತ್ಕಾರದಿಂದ ಅಥವಾ ಇತರ ಕಾರಣದಿಂದ ಕ್ರೈಸ್ತ ಮುಸ್ಲಿಂ ಆದ ಜನರ ಸಂತಾನ ದೊಡ್ಡದಾಗಿ ಬೆಳೆದು ಈ ಕಾಲದಲ್ಲಿ ಭರತವರ್ಷ ಎರಡು ರಾಷ್ಟ್ರ ಆಗಿ ವಿಭಾಗ ಆಗಬೇಕಾಯಿತು ಮುಸ್ಲಿಮರಿಗೆ ಒಂದು ರಾಷ್ಟ್ರ ಆದಂತೆ ತಮಗೂ ಒಂದು ರಾಷ್ಟ್ರ ಆಗಲಿ ಎಂದು ಕೆಲವರು ಕ್ರೈಸ್ತ ಪ್ರಮುಖರು ಯೋಚಿಸಿದಂತೆ ಕಾಣುತ್ತದೆ. ಹೀಗಾಗಿ ನಾಗಾ ಪ್ರದೇಶದ ಒಂದು ಕ್ರೈಸ್ತ ಸಮುದಾಯ ತಮ್ಮ ಮೂಲೆಯ ಭೂಮಿ ನಾಗಾಲ್ಯಾಂಡ್ ಎಂದು ಒಂದು ರಾಷ್ಟ್ರ ಆಗಬೇಕು ಎಂದು ಪ್ರಚಾರ ನಡೆಸಿದೆ ಫಿಜೋ ಎಂಬ ಒಬ್ಬ ನಾಗಾ ನಾಯಕ ಈ ಚಳುವಳಿಯ ಮುಂದಾಳು ಪ್ರಕಟವಾಗಿ ಅಲ್ಲ, ಮರೆಯಿಂದ ಇವರಿಗೆ ಸಹಾಯವಾಗಿ ಮೈಕೆಲ್ ಸ್ಕಾಟ್ ಎಂಬ ಒಬ್ಬ ಕ್ರೈಸ್ತ ಮಿಷನರಿ ಬೆಂಬಲಿಗ ಈ ಚಳುವಳಿಯನ್ನು ಹಿಡಿತಕ್ಕೆ ತರುವುದೇ ನಮ್ಮ ಕೇಂದ್ರ ಸರಕಾರಕ್ಕೆ ಕಷ್ಟ ಆಯಿತು. ತಾಳುವಷ್ಟು ತಾಳಿ ಸಹಿಸುವಷ್ಟು ಸಹಿಸಿ ಸರಕಾರ ಕೊನೆಗೆ ನಾಗರಭೂಮಿ ಬೇರೆಯ ಪ್ರಾಂತ ಆಗಬಹುದು ಎಂದು ಒಪ್ಪಿಗೆ ಕೊಟ್ಟು ನಾಗಾಲ್ಯಾಂಡ್ ಎಂದು ಒಂದು ಪ್ರಾಂತವನ್ನು ಮಾಡಿತು ರಾಷ್ಟ್ರ ಆಗದ ನಿರಾಶೆಯಿಂದ ಫಿಜೋ ದೇಶವನ್ನು ತೊರೆದು ಇಂಗ್ಲೆಂಡಿಗೆ ಹೋಗಿ ಆ ರಾಷ್ಟ್ರದ ಪ್ರಜೆ ಆಗಿದ್ದಾರ ಈ ಗೊಂದಲಕ್ಕೆ ಕಾರಣರಾದ ಮೈಕೆಲ್ ಸ್ಕಾಟ್ ಮಹನೀಯರಿಗೆ ಸರಕಾರ ರಾಷ್ಟ್ರದಿಂದ ಹೊರಕ್ಕೆ ಹೋಗಬೇಕೆಂದು ಅಪ್ಪಣೆ ಮಾಡಿತು

ನಾಗರಂತೆಯೇ ಮಿಜೋ ಎಂಬ ಆದಿವಾಸಿ ಸಮುದಾಯದ ಕೆಲವರು

ತಾವು ಕ್ರೈಸ್ತರಾದ ಕಾರಣದಿಂದ ತಮ್ಮ ಮೂಲೆಯೂ ಬೇರೆ ರಾಷ್ಟ್ರ ಆಗ ಬೇಕೆಂದು ಬಯಸಿದರು. ಇವರ ನಾಯಕ ಲಾಲ್‌ಡೇಂಗಾ ಎಂಬ ಒಬ್ಬ ಕ್ರೈಸ್ತ ಪ್ರಮುಖ ರಾಷ್ಟ್ರ ಶಾಸನದ ಪರಿಧಿಯೊಳಗೆ ಇದ್ದುಕೊಂಡೇ ಮಿಜೋ ಜನರ ಭೂಮಿ ಸ್ವಾಯತ್ತವಾಗಿ ಬಾಳಲು ಒಪ್ಪುತ್ತದೆ ಎಂದು ಹೇಳುತ್ತ ಈ ಕ್ರೈಸ್ತ ನಾಯಕ ಸಂಧಾನ ನಡೆಸಿದರು ಹೊರಕ್ಕೆ ಚೆನ್ನಾಗಿ ನಡೆದುಕೊಂಡರು ಅಂತರ್ಯದಲ್ಲಿ ಇವರಿಗೆ ಕೆಟ್ಟ ಎಣಿಕೆ ಇದೆ ಎನ್ನುವುದು ಇವರ ನಡತೆಯಿಂದ ಕಂಡಿತು. ಈಗ ಇವರ ಸಂಧಾನ ಮುಗಿದು ಮಿಜೋ ಭೂಮಿ ತಕ್ಕಷ್ಟು ಸಮಾಧಾನವಾಗಿ ನಡೆಯುತ್ತಿದೆ ಇದರಿಂದೆಲ್ಲ ನಮ್ಮ ಜನ ಕ್ರೈಸ್ತರಾಗುವುದು ಮತದ ದೃಷ್ಟಿಯಿಂದ ಮಾತ್ರ ಅಲ್ಲ, ಮತವನ್ನು ಬಿಡುವಂತೆ ರಾಷ್ಟ್ರವನ್ನೂ ಬಿಡಬೇಕು ಎನ್ನುವ ಬುದ್ಧಿಯನ್ನು ಬೆಳೆಸಿದೆ ಎನ್ನುವುದು ಕಾಣುತ್ತದೆ ಇಂಥ ನಡತೆಗೆ ರಾಷ್ಟ್ರಜೀವನದಲ್ಲಿ ಅವಕಾಶ ಇರಕೂಡದು ಇದು ಅನ್ಯಮತ ಸ್ವೀಕಾರ ಮಾತ್ರ ಅಲ್ಲ, ರಾಷ್ಟ್ರದ್ರೋಹ.

ಧರ್ಮದ ಕಾರಣದಿಂದಲ್ಲದ ಬೇರೆ ಕಾರಣಕ್ಕಾಗಿ ತಮ್ಮ ಧರ್ಮವನ್ನು ಸೇರಲು ಬಯಸುವವರಿಗೆ ಕ್ರೈಸ್ತ ಮಹಮ್ಮದೀಯ ಬೌದ್ಧ ಮತಗಳ ಹಿರಿಯರು ಪ್ರೋತ್ಸಾಹ ಕೊಡುವುದು ಶುದ್ಧಾಂಗವಾಗಿ ಅನುಚಿತ ವಿಶ್ವ ಹಿಂದೂ ಪರಿಷತ್ತಿನ ಪ್ರಮುಖರು ಈ ಇತರ ಮತಗಳ ಪ್ರಮುಖರೊಂದಿಗೆ ಈ ವಿಷಯ ದಲ್ಲಿ ಚರ್ಚೆ ನಡೆಸುವುದು ಅವಶ್ಯಕ, ಉಚಿತ

ಹಿಂದೂಮತ ಯಾರಿಗೂ "ನೀನು ಹಿಂದೂ ಆಗು, ಆಗದೆ ನಿನಗೆ ಉದ್ಧಾರವಿಲ್ಲ" ಎಂದು ಹೇಳುವುದಿಲ್ಲ. "ನೀನು ಯಾವ ಮತದವನೇ ಆಗಲಿ ಅದರಲ್ಲಿಯೇ ಇರುತ್ತ ಒಳ್ಳೆಯ ಮನುಷ್ಯನಾಗು. ನಿನ್ನ ಧರ್ಮ ನಿನ್ನಿಂದ ಇದನ್ನು ನಿರೀಕ್ಷಿಸುತ್ತದೆ. ಅದನ್ನು ಪಾಲಿಸಿ ನೀನು ಉದ್ಧಾರವಾಗುತ್ತೀಯೆ," ಎನ್ನುತ್ತದೆ ಎಂದರ ಹಿಂದೂ ಧರ್ಮದ ಪ್ರಕಾರ ಯಾವನೇ ಆಗಲಿ ಉದ್ಧಾರ ಕ್ಕಾಗಿ ತನ್ನ ಮತವನ್ನು ಬಿಟ್ಟು ಬೇರೆ ಮತವನ್ನು ಸ್ವೀಕರಿಸುವುದು ಅನವಶ್ಯಕ.

ಈ ವಿಷಯದಲ್ಲಿ ಮುಖ್ಯವಾದ ವಿವರ ಶೀಲ, ಮತ ಅಲ್ಲ. ಮತಗಳ ಉದ್ದೇಶ ಮನುಷ್ಯನನ್ನು ಒಳ್ಳೆಯವನಾಗಿ ಮಾಡುವುದು ಒಬ್ಬ ಮನುಷ್ಯ ಒಳ್ಳೆಯವನೆ? ಅಹುದು ಎಂದಮೇಲೆ ಅವನ ಮತ ಯಾವುದು ಎನ್ನುವುದ

ರಿಂದ ಆಗಬೇಕಾದ್ದೇನೂ ಇಲ್ಲ. ಒಳ್ಳೆಯುವನಲ್ಲ, ಆಗಲೂ ಅಷ್ಟೇ. ಅವನ ಮತ ಯಾವುದು ಎನ್ನುವುದರಿಂದ ಆಗಬೇಕಾದದ್ದೇನು ?

ಮಹಮ್ಮದ್ ಗುರು ಧರ್ಮದಲ್ಲಿ ಬಲಾತ್ಕಾರಕ್ಕೆ ಎಡೆ ಇಲ್ಲ ಎಂದರು, ಜೊತೆಗೆ ತಮಗೂ ಮೊದಲಿಂದ ಇಸ್ಲಾಂ ಧರ್ಮವನ್ನು ನಡೆಸಿದವರು ಇದ್ದರು ಎಂದರು ಇಸ್ಲಾಂ ಎಂದರೆ ದೇವರಲ್ಲಿ ಶರಣಾಗತರಾಗುವುದು ಇದರ ಮೇಲೆ "ತಮ್ಮಂತೆ ಇತರ ಪ್ರವಾದಿಗಳನ್ನು ಬೇರೆಬೇರ ಜನತೆಗಳಿಗೂ ದೇವರು ಕಳುಹಿಸಿದ್ದಾರೆ" ಎಂದರು. ಈ ಮಾತುಗಳನ್ನು ಆಡಿದ ಗುರು ತನ್ನ ಅನುಯಾಯಿಗಳು ಯಾರನ್ನೇ ಆಗಲಿ ಬಲಾತ್ಕಾರದಿಂದ ತಮ್ಮ ಮತಕ್ಕೆ ಸೇರಿಸುವ ಕ್ರಮವನ್ನು ಒಪ್ಪುತ್ತಿದ್ದರೇ ? ಕ್ರೈಸ್ತ ಗುರುವಿನ ಮಾತು ಇದೇ ಅರ್ಥಕ್ಕೆ ಬರುತ್ತದೆ. ಜನ ಒಳ್ಳೆಯವರಾಗಿರಬೇಕು, ಹಸಿದವನಿಗೆ ಅನ್ನ ಕೊಡಬೇಕು, ಬೆತ್ತಲೆಗೆ ಬಟ್ಟೆ ಕೊಡಬೇಕು ಹೀಗೆ ನಡೆದುಕೊಂಡವರು ತೀರಿಕೊಂಡು ಮುಂದಿನ ಗತಿಯೇನು ಎಂದು ತಿಳಿಯಲು ದೇವರ ಸನ್ನಿಧಿಯಲ್ಲಿ ನಿಂತಾಗ ಗುರು ತಂದೆದೇವರ ಪಕ್ಕದಲ್ಲಿ ಕುಳಿತಿರುವುದನ್ನು ಕಾಣುತ್ತಾರೆ ಅವನು ಅವರಿಗೆ "ಬನ್ನಿ, ನಾನು ಹಸಿದಿದ್ದಾಗ ನೀವು ನನಗೆ ಅನ್ನ ಕೊಟ್ಟಿರಿ, ಬರಿಮೈಯಲ್ಲಿ ಕಷ್ಟದಲ್ಲಿದ್ದಾಗ ಬಟ್ಟೆಯನ್ನು ಕೊಟ್ಟಿರಿ ನಾನು ನಿಮಗೆ ಸದ್ಗತಿಯನ್ನು ಕೊಡುತ್ತೇನೆ," ಎನ್ನುತ್ತಾರೆ ಈ ಜನ "ಪ್ರಭು, ನಾವು ನಿಮ್ಮನ್ನು ನೋಡಿಯೇ ಇಲ್ಲ, ನಿಮಗೆ ಅನ್ನ ಬಟ್ಟೆಯನ್ನು ಯಾವಾಗ ಕೊಟ್ಟೆವು ?" ಎಂದು ಕೇಳುತ್ತಾರೆ ಗುರು, "ನೀವು ಹಸಿದ ಯಾವನಿಗೇ ಅನ್ನ ಕೊಟ್ಟದ್ದೂ, ಬೆತ್ತಲೆಯಾದವನಿಗೆ ಬಟ್ಟೆ ಕೊಟ್ಟದ್ದೂ ನನ್ನನ್ನು ಮುಟ್ಟಿತು," ಎಂದು ಇವರಿಗೆ ಸದ್ಗತಿಯನ್ನು ಕೊಡುತ್ತಾರೆ. ಒಳ್ಳೆಯತನ ಮುಖ್ಯ ಮುಕ್ತಿಗೆ ಅರ್ಹನಾಗಲು ಮನುಷ್ಯ ಕ್ರೈಸ್ತನಾಗಿರಬೇಕಾದದ್ದಿಲ್ಲ, ಕ್ರೈಸ್ತ ಗುರುವಿನ ಹೆಸರನ್ನು ಕೇಳಿರಬೇಕಾದದ್ದೂ ಇಲ್ಲ.

ಈ ಸಂದರ್ಭದಲ್ಲಿ 'ಹಿಂದೂ' ಪತ್ರಿಕೆಯಲ್ಲಿ ಈ (೧೯೮೨) ಡಿಸೆಂಬರ್ ತಿಂಗಳ ಐದನೇ ತಾರೀಖು ಪ್ರಕಟವಾದ ಈ ಸುದ್ದಿ ತುಂಬ ಪ್ರಸ್ತುತವಾಗಿದೆ.

Pope John Paul II has paid a tribute to India and stressed the need for freedom to pursue religious truth openly and without fear of discrimination

Receiving credentials from India's new envoy to the Vatican, Ambasador Mr Thomas Abraham, the Pontiff said ' One of the fundamental values the Vatican promoted was freedom to follow the dictates of conscience in search for truth especially religious truth "

ಭಾರತ ದೇಶದಲ್ಲಿ ಕ್ರೈಸ್ತ ಧರ್ಮದ ಪ್ರಚಾರದಲ್ಲಿ ತೊಡಗಿರುವ ತಮ್ಮ ಶಿಷ್ಯ ಪಾದ್ರಿಗಳು conscienceನ dictatesಗೆ ಎಷ್ಟು ಬೆಲೆ ಕೊಡುತ್ತಿದ್ದಾರೆ ಎನ್ನುವುದನ್ನು ಈ ವರಿಷ್ಠ ಗುರು ಗಮನಿಸಬೇಕು.

ಒಂದು ಮತವನ್ನು ಬಿಟ್ಟು, ಇಲ್ಲ ಬಿಡಿಸಿ, ಬೇರೆ ಮತವನ್ನು ಸೇರುವ, ಇಲ್ಲ ಅದಕ್ಕೆ ಸೇರಿಸುವ, ವಿಷಯದಲ್ಲಿ ಮಹಾತ್ಮಾ ಗಾಂಧಿಯವರ ಮನಸ್ಸು ಹೇಗಿತ್ತು ಎನ್ನುವುದು ಅವರ ಈ ವಾಕ್ಯಗಳಿಂದ ತಿಳಿಯುತ್ತದೆ .

"After long study and experience I have come to the conclusion that the object of the fellowship of international faiths ought to be to help a Hindu to be a better Hindu, a Mussalman to become a better Mussalman, the Christian to become a better Christian It takes a man all his time to become a good Hindu, a good Christian or a good Mussalman It takes me all my time to be a good Hindu and I have none left over for evangelising the animist I cannot really believe that he is my inferior. If some people think that they ought to change their religious etiquette I cannot deny that they are free to do so but I am sorry to see i "

"ಬಹುಕಾಲದ ಪರ್ಯಾಲೋಚನೆ ಅನುಭವಗಳಿಂದ ನಾನು ಒಂದು ನಿಶ್ಚಯಕ್ಕೆ ಬಂದಿದ್ದೇನೆ. ಮತಗಳ ಮಧ್ಯೆ ಸ್ನೇಹವನ್ನು ಆಶಿಸುವ ಉದ್ದೇಶದಿಂದ ಹೊರಟಿರುವ ಸಂಸ್ಥೆ ಮಾಡಬೇಕಾದ ಕೆಲಸ ಇದು. ಒಬ್ಬ ಹಿಂದುವನ್ನು ಈಗ ಇರುವುದಕ್ಕಿಂತ ಒಳ್ಳೆಯಹಿಂದುವನ್ನಾಗಿ ಮಾಡಬೇಕು , ಒಬ್ಬ ಮುಸಲ್ಮಾನನನ್ನು ಈಗ ಇರುವುದಕಿಂತ ಹೆಚ್ಚು ಒಳ್ಳೆಯ ಮುಸಲ್ಮಾನನನ್ನಾಗಿ ಮಾಡಬೇಕು, ಒಬ್ಬ ಕ್ರೈಸ್ತನನ್ನು ಈಗ ಇರುವುದಕ್ಕಿಂತ ಒಳ್ಳೆಯ ಕ್ರೈಸ್ತನನ್ನಾಗಿ ಮಾಡ

ಬೇಕು ಹಿಂದೂ ಮುಸ್ಲಿಂ ಕ್ರೈಸ್ತ ಆಗಿರುವ ಒಬ್ಬ ಮನುಷ್ಯ ಒಳ್ಳೆಯ ಹಿಂದು, ಮುಸ್ಲಿಂ, ಕ್ರೈಸ್ತ ಆಗಬೇಕು. ಆಗಲು ಬಯಸಿದನೇ ಅದಕ್ಕಾಗಿ ಸತತ ಯತ್ನ ಮಾಡಬೇಕಾಗುತ್ತದೆ ಈ ಯತ್ನ ಇಲ್ಲದೆ ಅವನು ಒಳ್ಳೆಯ ಹಿಂದು, ಒಳ್ಳೆಯ ಕ್ರಿಶ್ಚಿಯನ್, ಒಳ್ಳೆಯ ಮುಸ್ಲಿಮ್ ಆಗಲಾರ ನನ್ನ ಮಾತನ್ನು ಹೇಳಬಹುದಾದರೆ, ಒಳ್ಳೆಯ ಹಿಂದು ಆಗುವುದಕ್ಕೆ ನಾನು ಸದಾ ಯತ್ನಮಾಡಬೇಕಾಗಿದೆ. ಈ ಯತ್ನದಲ್ಲಿ ನನಗೆ ಕೀಳೆಂಬ ಮತದ ಒಬ್ಬ ಮನುಷ್ಯನನ್ನು ಹಿಂದೂ ಮಾಡಲು ಯತ್ನಿಸಲು ಬಿಡುವಿರುವುದಿಲ್ಲ. ಮೇಲಾಗಿ ಆ ಮನುಷ್ಯ ನನಗಿಂತ ಕೀಳು ಎಂದು ನಾನು ದಿಟವಾಗಿ ನಂಬಲಾರ ಕೆಲವು ಜನ ತಮ್ಮ ಮತವನ್ನು ಮಾರ್ಪಡಿಸಿಕೊಳ್ಳಬೇಕಾಗಿದೆ ಎಂದು ಯೋಚಿಸಿದರೆ ಅವರು ಹಾಗೆ ಮಾಡುವುದಕ್ಕೆ ಸ್ವತಂತ್ರರು. ಹಾಗೆ ಮಾಡಬೇಡಿ ಎಂದು ನಾನು ಹೇಳುವುದಿಲ್ಲ ಇರುತ್ತ ಅಯ್ಯೋ ಇವರ ಬುದ್ಧಿ ಹೀಗೆ ಹರಿಯಿತೆ ಎಂದು ನನಗೆ ವ್ಯಥೆ ಆಗುತ್ತದೆ"

ಮಹಾತ್ಮರ ಈ ಅಭಿಪ್ರಾಯ ತೀರಾ ಸಾಧು ಎಂದು ಯಾರಿಗೂ ತೋರಬೇಕು

ಈಗ ಹಿಂದೂ ಆಗಿರುವ ನಮ್ಮ ಜನವೆಲ್ಲ ಒಳ್ಳೆಯವರಾಗಿದ್ದಾರೆಯೆ ? ಈಗ ಮುಸ್ಲಿಂ ಆಗಿರುವ, ಕ್ರೈಸ್ತ ಆಗಿರುವ, ಎಲ್ಲ ಒಳ್ಳೆಯವರಾಗಿ ಇದ್ದಾರೆಯೆ ? ಕ್ರೈಸ್ತ ಪ್ರಚಾರಕರು ನಮ್ಮ ದೇಶದಲ್ಲಿ ರೇಡಿಯೋ ಮೂಲಕ ಪ್ರತಿದಿನವೂ ನಮ್ಮ ಜನರಿಗೆ ಕ್ರೈಸ್ತರಾಗಿ ಎಂದು ಕರೆಕೊಡುತ್ತಿದ್ದಾರೆ. ಮಾತಿಗೆ ಮೊದಲು, ದೇವರು ಹೀಗೆ ಹೇಳಿದ್ದಾನೆ, ಎನ್ನುತ್ತಾರೆ. ದೇವರು ಹೇಳಿರುವುದು ಏನನ್ನು ? ಯೆಹೂದ್ಯರ ಹಳೆಯ ಒಡಂಬಡಿಕೆ, ಕ್ರೈಸ್ತರ ಹೊಸ ಒಡಂಬಡಿಕೆ, ಎಂಬ ಗ್ರಂಥಗಳಲ್ಲಿ ಹೇಳಿರುವ ವಾಕ್ಯಗಳನ್ನು ದೇವರು ಹೇಳಿರುವ ವಾಕ್ಯಗಳು ಎಂದು ಇವರು, ಅವನ್ನು ಬರೆದವರು ಹೇಳಬಹುದು. ಆದರೆ ದೇವರೇ ಅವನ್ನು ಹೇಳಿದನೇ ? ಇವರು ಕೇಳಿದರೇ ? ಇಷ್ಟಾಗಿ ಈ ಮಾತುಗಳನ್ನು ನಂಬಿ ಎಂದೋ ಕ್ರೈಸ್ತರಾದ ಜನಾಂಗದವರು ಅವನ್ನು ಆಗ ನಂಬುತ್ತಿದ್ದಾರೆಯೇ ? ನಂಬಿ ಸುಖವನ್ನು ಶಾಂತಿಯನ್ನು ಕಾಣುತ್ತಿದ್ದಾರೆಯೆ ? ಕ್ರೈಸ್ತ ಮತಾವಲಂಬಿಗಳಾದ ಹತ್ತು ರಾಷ್ಟ್ರಗಳು ಹತ್ತು ಗುಂಪಾಗಿ ನಿಂತಿವೆ. ಒಂದರೊಡನೊಂದು ಸ್ಪರ್ಧಿಸುತ್ತಿವೆ ; ಕೆಲವುವೇಳೆ ಕಾದುತ್ತಿವೆ ಈ ರಾಷ್ಟ್ರಗಳ

ಒಳಗೆ ಸಹ ಜನಗಳು ಗುಂಪುಗಳಾಗಿ ಭಾಗವಾಗಿದ್ದಾರೆ, ಪರಸ್ಪರ ಸಿಂದಿಸುತ್ತ ಕೂಗು ಹಾಕಿ ಕಚ್ಚಾಡುತ್ತಿದ್ದಾರೆ ಮುಸ್ಲಿಂ ರಾಷ್ಟ್ರಗಳ ಮಾತೂ ಅಷ್ಟೇ. ಅರಬ್ಬೀ ರಾಷ್ಟ್ರಗಳ ಹಿಂದಿನ ಅವಸ್ಥೆ ಇಂದಿನ ಅವಸ್ಥೆ ಏನು ? ಇದನ್ನು ನಾವೆಲ್ಲ ಬಲ್ಲೆವು. ಮಹಮ್ಮದ್ ಗುರು ತೀರಿಕೊಂಡ ಕೆಲವು ವರ್ಷಗಳಲ್ಲಿ ಮುಸ್ಲಿಂ ಜನ ಸುನ್ನಿ ಷಿಯಾ ಎಂದು ಭಾಗವಾಗಿ ತಮ್ಮಲ್ಲೇ ಕಡಿದಾಡಿದರು ಆ ಕ್ರಮ ಈಗಲೂ ನಡೆಯುತ್ತಿದೆ ಇರಾನ್ ಇರಾಕ್ ಎರಡೂ ಮುಸ್ಲಿಂ ರಾಷ್ಟ್ರಗಳು. ಇವುಗಳ ಮಧ್ಯೆ ಸದ್ಯ ಒಂದು ಸಮರ ನಡೆಯುತ್ತಿದೆ.

ಹಿಂದುಗಳೊಡನೆ ಬಾಳಲಾರೆವು, ನಮಗೆ ಬೇರೆ ರಾಷ್ಟ್ರ ಬೇಕು, ಎಂದು ಭಾರತೀಯ ಮುಸ್ಲಿಮರು ಪಾಕಿಸ್ತಾನವನ್ನು ಮಾಡಿಕೊಂಡರು. ಪಾಕಿಸ್ತಾನ ಎಂದರೆ ಪುಣ್ಯಭೂಮಿ ಸದ್ಯಕ್ಕೆ ಪುಣ್ಯಭೂಮಿಯ ಒಂದು ದೊಡ್ಡ ಲಕ್ಷಣ ಅದರಲ್ಲಿ ಹಿಂದೂಗಳು ಇಲ್ಲದಿರುವುದು , ಅಥವಾ ಇದ್ದರೂ ಯಾವ ಲೆಕ್ಕಕ್ಕೂ ಬಾರದಿರುವುದು. ಹೀಗೆ ಪುಣ್ಯವನ್ನು ಸಾಧಿಸಿದ ಜನ ಇಪ್ಪತ್ತೈದು ವರುಷದ ಬಳಿಕ ಒಂದಾಗಿ ಬಾಳಲಾರದ ಹೋಯಿತು , ಮತ್ತೆ ಎರಡು ಭಾಗವಾಯಿತು. ಪಶ್ಚಿಮಕ್ಕೆ ಪಾಕಿಸ್ತಾನ , ಪೂರ್ವದ ಅರ್ಧ ಬಾಂಗ್ಲಾದೇಶ ಅವಕಾಶ ಸಿಕ್ಕಿದರೆ ಪಾಕಿಸ್ತಾನದ ಮುಸ್ಲಿಂ ಜನ ಮತ್ತೆ ನಾಲ್ಕು ಭಾಗವಾಗಲು ಯತ್ನಿಸೀತು ಎಂದು ಕಾಣುತ್ತದೆ. ಸೈನ್ಯಾಧಿಕಾರಿ ಒಬ್ಬ ಜನತೆಯ ಸ್ವಾತಂತ್ರ್ಯವನ್ನು ಕಸಿದು ಅದನ್ನು ಮೆಟ್ಟಿ ನಿಂತಿರುವುದರಿಂದ ಈ ದುರ್ದೆಶೆ ತಪ್ಪಿದೆ

ಮತಗಳ ಪ್ರಚಾರಕರು ಮತಗಳ ದೃಷ್ಟಿಯಿಂದಲೇ ದುಡಿಯುವವರಾದರೆ ಈಗ ನಮ್ಮ ರಾಷ್ಟ್ರದಲ್ಲಿ ಕ್ರೈಸ್ತ ಮತವನ್ನು ಹರಡಲು ತೊಡಗಿರುವ ಜಾಣ ಜನ ತಮ್ಮ ರಾಷ್ಟ್ರಗಳಿಗೆ ಹಿಂದಿರುಗಬೇಕು , ತಮ್ಮದೇ ಜನಕ್ಕೆ ದಿಟವಾಗಿ ಕ್ರೈಸ್ತರಾಗುವುದನ್ನು ಕಲಿಸಲು ಉಪದೇಶ ಮಾಡಬೇಕು. 'Physician heal thyself,' ಎನ್ನುವುದು ಒಂದು ಆಂಗ್ಲ ನಾಣ್ನುಡಿ, 'ಅಯ್ಯಾ ವೈದ್ಯ, ಮೊದಲು ನಿನ್ನ ರೋಗದಿಂದ ಗುಣಹೊಂದು, ಆಮೇಲೆ ನನಗೆ ಚಿಕಿತ್ಸೆಮಾಡುವ ಯೋಚನೆ ಮಾಡು'. ಒಳ್ಳೆಯ ಹಿಂದೂ ಒಳ್ಳೆಯ ಕ್ರೈಸ್ತ ಒಳ್ಳೆಯ ಮುಸ್ಲಿಂ ಆಗುವುದು ಅಷ್ಟೇನೂ ಸುಲಭವಲ್ಲ ಮಹಾತ್ಮಾ ಗಾಂಧಿ ತಮ್ಮ ಉನ್ನತೋನ್ನತ ಗುಣಗಳಿಂದ ಬೆಳಗಿದಾಗ ಕ್ರೈಸ್ತ ಉಪದೇಶಕರೊಬ್ಬರು "There is only one Christian in the world today , and that man is a

Hindu" ಎಂದರು ಜನರನ್ನು ಒಳ್ಳೆಯವರನ್ನು ಮಾಡುವ ಉಪದೇಶಕನಿಗೆ ತನ್ನ ಕಾರ್ಯಕ್ಷೇತ್ರ ತಾನು ಇರುವಲ್ಲಿಯೇ ಇದೆ ಅವನು ಬೇರೆಕಡೆಗೆ ಹೋಗಿ ಧರ್ಮದ ಬೀಜವನ್ನು ಬಿತ್ತಬೇಕಾದ ಪ್ರಮೇಯ ಇಲ್ಲ

ಇಷ್ಟಕ್ಕೆ ಈ ಜನದ ಉಪದೇಶದ ಮತಗಳಿಂದ ಯಾರು ಉದ್ಧಾರವಾದರು ? ಆಂಗ್ಲ ಜಾಣ ಒಬ್ಬಾತ ಒಮ್ಮೆ 'We have enough religion to hate, not to love, one another,' ಎಂದನು ಈ ಮತಗಳನ್ನು ನಂಬಿ ಯಾವ ಜನತೆ ಬದುಕಿತು ? ಪುರಂದರದಾಸರು ತನ್ನ ದೇವರನ್ನು ವಿನೋದದಲ್ಲಿ "ಯಾರು ಬದುಕಿದರು ಹರಿ ನಿನ್ನ ನಂಬಿ," ಎಂದು ಪ್ರಶ್ನಿಸಿದರು. ಮತಗಳ ವಿಷಯಗಳನ್ನು ಕುರಿತು ಯೋಚಿಸುವ ಭಾವುಕ ಜನ ಇಂದು ಒಂದೊಂದು ಮತವನ್ನು ಕುರಿತೂ "ಯಾರು ಬದುಕಿದರು ಮತ ನಿನ್ನ ನಂಬಿ," ಎಂದು ದಿಟದಲ್ಲಿಯೆ ಪ್ರಶ್ನೆ ಮಾಡಬಹುದಾಗಿದೆ

ಆದ್ದರಿಂದ ಮಹಾತ್ಮರ ಸೂಚನೆಯಂತೆ ಎಲ್ಲ ಮತಗಳ ಜನರೂ ತಮ್ಮಲ್ಲಿ ಒಳ್ಳೆಯತನ ಬೆಳೆಯುವುದಕ್ಕೆ ಏನು ಮಾಡಬೇಕು ಎಂದು ಯೋಚಿಸಬೇಕು ಒಂದು ಮತದವರು ಬೇರೆ ಮತಗಳಿಂದ ಜನರನ್ನು ಕಸಿಯುತ್ತಿರುವ ಇಂದಿನ ಅಸಾಧು ಪ್ರವೃತ್ತಿಯನ್ನು ಬಿಡಬೇಕು

ಹೀಗಿದ್ದೂ ಒಂದು ಮಾತು ಹಿಂದೆ ಹಿಂದೂ ಮತವನ್ನು ಬಿಟ್ಟು ಬೇರೆ ಮತಕ್ಕೆ ಹೋದ ಜನರು ಅವರ ಸಂತಾನ ಹಿಂದಕ್ಕೆ ಬರಲಿ ಎಂದು ಬಯಸುವುದು, ಹಾಗೆ ಬಂದವರನ್ನು ಮತ್ತೆ ಸಮಾಜಕ್ಕೆ ಸೇರಿಸಿಕೊಳ್ಳುವುದು, ಯುಕ್ತ.

ಹಿಂದೆ ಇಂಥ ಮಾತಿಗೆ ನಮ್ಮ ಸಮಾಜದ ಸಂಪ್ರದಾಯವಾದಿ ಹಿರಿಯರು ಒಪ್ಪುತ್ತಿರಲಿಲ್ಲ ಕಾಶ್ಮೀರದಲ್ಲಿ ಹಿಂದೂಗಳನ್ನು ಮುಸಲ್ಮಾನರನ್ನಾಗಿ ಮಾಡುವ ಕ್ರಮ ಬಹುಪಾಲು ನಡೆದು ನೂರರಲ್ಲಿ ತೊಂಬತ್ತೈದರಷ್ಟು ಪ್ರಜೆ ಮಹಮ್ಮದೀಯ ಆಯಿತು. ಹತ್ತೊಂಬತ್ತನೆಯ ಶತಮಾನದ ಮಧ್ಯದಲ್ಲಿ ಆ ರಾಜ್ಯದ ದೊರೆ ಒಬ್ಬ ಈ ಜನರಲ್ಲಿ ಬಹುಸಂಖ್ಯೆಯ ಅನೇಕರು ಸಮುದಾಯ ಸಮುದಾಯವಾಗಿ ಮತ್ತೆ ಹಿಂದೂಗಳಾಗಲು ಬಯಸುತ್ತಿರುವುದನ್ನು ಕಂಡನು ಈ ಜನರನ್ನು ಹೀಗೆ ಮರಳಿ ಹಿಂದುಗಳಾಗಿ ಸೇರಿಸಿಕೊಳ್ಳಬಹುದೇ ಎಂದು ತಿಳಿಯಲು ಅವನು ವಾರಣಾಸಿಯ ಪಂಡಿತ ಮಂಡಲಿಗೆ ಒಂದು ನಿಯೋಗವನ್ನು ಕಳುಹಿಸಿದನು. ಪಂಡಿತ ಮಂಡಲಿ ಇದು ತಮಗೆ ಶುದ್ಧಾಂಗವಾಗಿ ಒಪ್ಪಿಗೆ

ಇಲ್ಲ ಎಂದು ತಿಳಿಸಿದರು. ದೊರೆಯ ಅಪೇಕ್ಷೆ ಹೀಗೆ ಕೊನೆಗೊಂಡಿತು. ಈಗ ನಮ್ಮ ಜನರ ಮನಸ್ಸಿನ ಸ್ಥಿತಿ ಬೇರೆಯಾದೆ. ಹೀಗಾಗಿ ಆರ್ಯಸಮಾಜ ಎಷ್ಟೋ ವರುಷಗಳಿಂದ ಈ ಕೆಲಸವನ್ನು ಮಾಡುತ್ತ ಬಂದಿದೆ ಈಚೆಗೆ ಇಂಥ ಜನ ಬೇರೆ ಮತಗಳಿಂದ ಹಿಂದೂ ಮತಕ್ಕೆ ಹಿಂದಿರುಗಿ ಬಂದರು ಎಂದು ವರದಿಯೂ ಆಗಿದೆ. ನಮ್ಮ ಸಮಾಜ ಈ ವಿಷಯದಲ್ಲಿ ಇನ್ನಷ್ಟು ಕಾರ್ಯೋನ್ಮುಖ ಆಗಬೇಕು. ಇದುವರೆಗೆ ಈ ಕೆಲಸವನ್ನು ಮಾಡದ ಈ ಸಮಾಜ ಇದರಲ್ಲಿ ತೊಡಗಿದರೆ ಕ್ರೈಸ್ತ ಮುಸ್ಲಿಂ ಮತಗಳವರು ತೀರ ಸಹಜವಾಗಿ ಬೇಸರ ಪಟ್ಟಾರು. ಅವರಿಗೆ ನಾವು, "ಅಪ್ಪಾ, ನಾವು ಪೂರ್ವದಿಂದ ಮುಸ್ಲಿಮ ರಾದವರನ್ನು ನಮ್ಮಲ್ಲಿ ಬಂದು ಸೇರಿ ಎಂದು ಕರೆಯುತ್ತಿಲ್ಲ. ನಮ್ಮವರಾಗಿದ್ದು ಯಾವುದೋ ಕಾರಣದಿಂದ ನಮ್ಮನ್ನು ಬಿಟ್ಟು ಬೇರೆ ಮತಗಳಿಗೆ ಹೋದ ನಮ್ಮವರನ್ನು ಹಿಂದಕ್ಕೆ ಬರಮಾಡಿಕೊಳ್ಳುತ್ತಿದ್ದೇವೆ ಅಷ್ಟೆ," ಎಂದು ಸಮಾಧಾನ ಹೇಳಬೇಕು.

ನಮ್ಮ ಧರ್ಮಸಂಸ್ಥೆಗಳ ಹಿರಿಯರು ಕೆಲವರು ಹಿಂದೂಸಮಾಜ ಅದರ ಒಂದು ಭಾಗವನ್ನು ಕುರಿತು ಅವಮರ್ಯಾದೆಯಿಂದ ನಡೆದು ಅದರ ಜನ ಬೇರೆ ಮತಕ್ಕೆ ಹೋಗುವಂತೆ ಮಾಡುವುದು ತಪ್ಪು ಎಂದು ನಿಶ್ಚಯಿಸಿ ನಮ್ಮ ಧರ್ಮವನ್ನು ರಕ್ಷಿಸುವ ಸಲುವಾಗಿ ವಿಶ್ವ ಹಿಂದೂ ಪರಿಷತ್ ಎಂಬ ಒಂದು ಸಂಸ್ಥೆಯನ್ನು ನಿರ್ಮಿಸಿಕೊಂಡ ಸಂಗತಿಯನ್ನು ಈ ಮುನ್ನ ನಿವೇದಿಸಿದ್ದಾಗಿದೆ.

ಮೇಲ್ಪಟ್ಟವೆಂಬ ಸಮುದಾಯಗಳು ಕೆಳಗಿನವು ಎಂಬ ಸಮುದಾಯ ಗಳನ್ನು ತಮಗೆ ಸಮ ಎಂದು ಕಾಣುವುದು ಈ ಜನರನ್ನು ಕಳೆದುಕೊಳ್ಳ ಬಾರದು ಎಂಬ ದೃಷ್ಟಿಯಿಂದ ಮಾತ್ರ ಅಲ್ಲ, ದಿಟದಲ್ಲಿ ನಮ್ಮ ಧರ್ಮ ಇದನ್ನೇ ಅಪೇಕ್ಷಿಸುತ್ತದೆ ಎಂಬ ಕಾರಣದಿಂದ ಆಗಬೇಕು ಈ ಅರ್ಥದಲ್ಲಿ ನಮ ಧರ್ಮದ ನಿಲುವಿನಲ್ಲಿ ಒಂದು ಮಾರ್ಪಾಡು ಅವಶ್ಯಕ ಆಗುತ್ತದೆ.

ಈ ವಿಷಯದಲ್ಲಿ ತಕ್ಕ ಎಚ್ಚರ ವಹಿಸದೆ ಬಿಟ್ಟರೆ ಹಿಂದೂ ಮತದ ಔದಾರ್ಯ ಒಂದು ಗುಣವಾಗುವುದಕ್ಕೆ ಪ್ರತಿಯಾಗಿ ದೌರ್ಬಲ್ಯ ಆಗುತ್ತದೆ.

# ೧೪

## ಧರ್ಮ ಪರಿಷ್ಕರಣ

ಹಿಂದೂ ಮತ ಸಂಪ್ರದಾಯಗಳ ಕೊರತೆಗಳನ್ನು ಕುರಿತು ಈ ಮುನ್ನ ಹೇಳಿರುವ ಎಲ್ಲ ಮಾತೂ ಹಿಂದೂ ಧರ್ಮದ ಅನುಯಾಯಿ ಒಬ್ಬ ತನ್ನ ಧರ್ಮದ ಇಂದಿನ ಸ್ಥಿತಿಯ ಪರೀಕ್ಷಣದಲ್ಲಿ ಆಡಿರುವ ಮಾತು ಈ ಮಾತುಗಳನ್ನು ಆಡುವಲ್ಲ ನಾನು, ನಮ್ಮ ಧರ್ಮವನ್ನು ಹಳಿದು ಹಿಂದೆ ಸಂತೋಷಪಟ್ಟ, ಈಗ ಸಂತೋಷಪಡುವ, ಅಸ್ವದೇಶೀಯ ಅಥವಾ ಭಾರತೀಯ ಜನರ ದನಿಗೆ ದನಿಗೂಡಿಸುತ್ತಿದೇನೆಂದು ಯಾರೂ ಭಾವಿಸಬಾರದು ಆ ಜನ ಈ ಧರ್ಮವನ್ನು ಹೀಯಾಳಿಸಬಯಸುವವರು ನಾನು ಭಾವನೆಗಳಲ್ಲಿ ಆಚಾರ ಗಳಲ್ಲಿ ಕಂಡಿರುವ ಕುಂದುಗಳನ್ನು ಗುರುತಿಸಿ ಇವನ್ನು ಸರಿಪಡಿಸಬೇಕು ಎಂದು ಬಯಸುವವನು, ಇಷ್ಟು ಕುಂದು ಕಂಡಮೇಲೂ ಈ ಧರ್ಮ ಇನ್ನೂ ಜೀವಂತ ವಾಗಿದೆ, ನಮ್ಮ ಜನತೆಯನ್ನು ಕಾಪಾಡಬಲ್ಲದ್ದಾಗಿದೆ, ಅಷ್ಟೇ ಅಲ್ಲ, ಲೋಕ ವನ್ನೇ ಕಾಪಾಡಬಲ್ಲದ್ದಾಗಿದೆ, ಎಂದು ನಂಬಿರುವವನು ನಮ್ಮ ಧರ್ಮ ಐದು ಸಾವಿರ ವರ್ಷಗಳಿಗೂ ಹೆಚ್ಚಿನ ಹಿಂದಿನ ಕಾಲದಿಂದ ಬೆಳೆದುಬಂದಿರುವ ಧರ್ಮ ಇಷ್ಟು ದೀರ್ಘಕಾಲ ನಮ್ಮ ದೇಶದ ಜೀವನದಲ್ಲಿ ಬಂದುಹೋದ ಇತಿಹಾಸ ಸಂಗತಿಗಳ ಪ್ರಭಾವದಿಂದ ಇದು ಕಾಲಕ್ಕೆ ತಕ್ಕಂತೆ ಮಾರ್ಪಟ್ಟು ಬೆಳೆಯುತ್ತಾ ಬಂದಿದೆ. ಸ್ಥಿತಿ ಬೇರೆಯಾದಂತೆ ಇದರ ವಿಷಯಗಳು ಬೇರೆಯಾದವು ಎಷ್ಟೋ ಬಾರಿ ಇಂಥ ಮಾರ್ಪಾಡು ಆಗಿ ವೇದದ ಆರಂಭದ ಸನಾತನ ಧರ್ಮ ಇಂದಿನ ನಮ್ಮ ಹಿಂದೂ ಧರ್ಮ ಆಗಿದೆ. ಅಂದಂದು ಆದ ಮಾರ್ಪಾಡು ಅಂದಿನ ಜಾಣ ಜನರಿಗೆ ಅವಶ್ಯಕವೆಂದು ಒಳ್ಳೆಯದು ಎಂದು ಕಂಡ ಅಷ್ಟರಿಂದ ಎಲ್ಲಕಾಲಕ್ಕೂ ಒಗ್ಗಬಹುದು ಎಂದು ನಿರೀಕ್ಷಿಸುವಂತಿಲ್ಲ. ಹೀಗಾಗಿ ಸನಾತನ ಧರ್ಮ ವೇದಗಳ ದಿನದ ತನ್ನ ತಿಳಿಯಾದ ರೂಪದಿಂದ ಇಂದಿನ ಒಂದು ಬಗ್ಗಡದ ರೂಪಕ್ಕೆ ಬಂದಿದೆ. ಹಿಮಗಿರಿಯಿಂದ ಗಂಗೋತ್ರಿಯಲ್ಲಿ ಹೊರಕ್ಕೆ ಬರುವ ನೀರು ಹಿಮ ಕರಗಿ ಜಲ ಆದ ಪರಿಶುದ್ಧವಾದ ತಿಳಿನೀರು. ವಾರಣಾಸಿಗೆ ಬರುವಲ್ಲಿಗೆ ದಾರಿಯಲ್ಲಿ ಎಷ್ಟೋ ತೆರನ ನೀರು ಬಂದು ಅದರಲ್ಲಿ ಸೇರಿ ಗಂಗೆಯ ಹೊನಲ

ಲಕ್ಷಣ ಬಹಳ ಬೇರೆ ಆಗಿರುತ್ತದೆ. ಮುಂದಿನ ಹರಿವಿನಲ್ಲಿ ಪಟ್ಟಣಗಳ ಕೊಳಚೆ ನೀರೆಷ್ಟೋ ಈ ಪ್ರವಾಹದಲ್ಲಿ ಸ್ನಾನ ಪಡೆದು ಗಂಗೆ ಕಲ್ಕತ್ತೆಗ ಬರುವ ವೇಳೆಗೆ ಗಂಗೋತ್ರಿಯ ತಿಳಿನೀರಿನಿಂದ ಮತ್ತಷ್ಟು ಬೇರೆಯಾದ ಒಂದು ರೂಪವನ್ನು ಮುಟ್ಟಿರುತ್ತದೆ ಎಲ್ಲ ಧರ್ಮವೂ ಈ ವಿಷಯದಲ್ಲಿ ಗಂಗೆಯನ್ನು ಹೋಲುತ್ತದೆ ಹಿಂದೂ ಧರ್ಮ ಹೀಗೆಯೇ ಆಗಿದೆ

ಧರ್ಮದ ಬೆಳವಣಿಗೆಯಲ್ಲಿ ಆಗಿರುವ ಮಾರ್ಪಾಡು ಆಯಾ ದಿನದಲ್ಲಿ ತಕ್ಕಷ್ಟು ಒಲ್ಲ ಜನರಿಗೆ ಒಳ್ಳೆಯದೆಂದು ಕಂಡದ್ದು ಎಂದಿದೆ ವೇದದ ಋಷಿಗಳು ಆರಂಭದಲ್ಲಿ ಕರ್ಮಕ್ಕೆ ಪ್ರಾಧಾನ್ಯ ಕೊಟ್ಟರು. ದೈವವನ್ನು ಹಲವು ಹೆಸರಿನಿಂದ ಕರೆದರು ಸ್ವಲ್ಪಕಾಲ ಕಳೆದು ಈ ಬೇರ ಬೇರೆ ಹೆಸರಿನ ದೇವರೆಲ್ಲ ಒಂದೇ ಎಂದು ಕಂಡರು. ಯಜ್ಞಯಾಗಗಳಲ್ಲಿ ಅಷ್ಟೇ ಅಲ್ಲ, ಜೀವನವನ್ನು ಕುರಿತ ವಿಚಾರದಲ್ಲಿ ಮನಸ್ಸನ್ನು ತೊಡಗಿಸಿದರು ಉನ್ನತ ಜ್ಞಾನ ಮನುಷ್ಯನ ಗುರಿ ಎಂದರು ಮತ್ತಷ್ಟು ಕಾಲ ಹರಿದು, ಈ ಜ್ಞಾನದ ಮುಖ್ಯ ವಸ್ತು ಪರತತ್ವ, ಅದು ಲೋಕದ ಏಕೈಕ ದೈವ, ಅದರ ಸೇವೆಯನ್ನು ಮಾಡುವುದರಿಂದ ಜನ್ಮ ಸಾರ್ಥಕ ಆಗುತ್ತದೆ, ಜೀವನದ ಅಂತಿಮ ಶುಭ ಲಭಿಸುತ್ತದೆ, ಎಂದು ನಿಶ್ಚಯಿಸಿದರು. ಈ ಸೇವೆ ಮಾಡುವುದರಲ್ಲಿ ಇಹದ ಪರದ ಎರಡರದೂ ಶುಭ ಲಭಿಸುತ್ತದೆ ಎಂದು ತೀರ್ಮಾನಿಸಿದರು. ದೈವ ಎಲ್ಲವನ್ನೂ ಸೃಷ್ಟಿಸಿದೆ, ಅಷ್ಟೇ ಅಲ್ಲ, ತಾನೇ ಎಲ್ಲವೂ ಆಗಿದೆ, ಅದು ಸರ್ವವ್ಯಾಪಿ, ಸರ್ವಶಕ್ತ, ಕೃಪಾಳು, ಪುರುಷತತ್ವ ಎಂದು ಗ್ರಹಿಸಿದರು. ಅದು ಲೋಕದಲ್ಲಿ ಅನೇಕ ರೂಪದಿಂದ ಅವತರಿಸಿ ಕಂಡಿದೆ, ಎಂದರು. ಅದನ್ನು ಆ ಎಲ್ಲ ರೂಪಗಳಲ್ಲಿ ಗುರುತಿಸುವುದು ಮನುಷ್ಯನ ಧರ್ಮ ಎಂದು ತಿಳಿದರು.

ದೈವ ಇಷ್ಟು ಹತ್ತಿರದ ವಸ್ತು ಆದಮೇಲೆ ಅದಕ್ಕೆ ಒಂದು ರೂಪವನ್ನು ಕೊಟ್ಟು ಪೂಜಿಸುವ ಕ್ರಮ ಒಂದು ಏರ್ಪಟ್ಟಿತು ಸಮುದಾಯ ಪೂಜೆ ನಡೆಸುವುದಕ್ಕೆ ಹೊರಗಡೆ ಒಂದು ಆಲಯ, ಸಂಸಾರದಲ್ಲಿ ಪೂಜಿಸುವುದಕ್ಕೆ ಮನೆಯಲ್ಲಿ ದೇವರ ಮಂಟಪ ಪೂಜೆಯನ್ನು ಹೇಗೆ ನಡೆಸಬೇಕೆಂಬ ನೇಮ, ಇತ್ಯಾದಿ ವಿವರಗಳು ರೂಪುಗೊಂಡವು. ದೇವರೆಂಬ ಕಲ್ಪನೆಯನ್ನು ಮನಸ್ಸಿಗೆ ದಿಟ ಮಾಡಿಕೊಳ್ಳುವುದಕ್ಕೆ ದಿನವೂ ಮನೆಯಲ್ಲಿ ಪೂಜೆ ದೇವರು ಸಂಸಾರವನ್ನು ಕಾಪಾಡುವುದಕ್ಕೆ ಮನೆಯಲ್ಲಿ ನೆಲೆಸಿರುವ ಹಿರಿಯ, ಅವನಿಗೆ ಉಪಚಾರ,

ಅದರ ಒಂದು ಅಂಗವಾಗಿ ನೈವೇದ್ಯ ಮನೆಯಲ್ಲಿ ಮಾಡಿರುವ ಅಡಿಗೆ ಹಾಗೆ ಪ್ರಸಾದ ಆಗಬೇಕು, ಮನೆಯ ಜನ ದಿನವೂ ಉಣ್ಣುವುದು ಈ ಪ್ರಸಾದವನ್ನೇ ಸಮುದಾಯದ ಹೊರಗಣ ದೇವಾಲಯದಲ್ಲೂ ಇದೇ ಭಾವನೆ. ಹೀಗೆಯೇ ನೈವೇದ್ಯ ಸಮುದಾಯದ ಜನ ಪ್ರಸಾದವನ್ನು ಪಡೆದು ಮನೆಗೆ ಹೋಗುವುದು. ಪೂಜೆಯನ್ನು ಮಾಡುವುದರಲ್ಲಿ ಜಾಣರಾದ ಐದು ಜನಕ್ಕೆ ತೋರಿದ ಐದು ರೀತಿ ಉಂಟು ಐದೂ ಸರಿಯೇ ಮೊದಲಲ್ಲಿ ಆರ್ಯರು ಮಾತ್ರ ಜೊತೆಯಾಗಿ ನಡೆದುಕೊಳ್ಳುತ್ತಿದ್ದು, ಅವರು ಬೇರೆಬೇರೆ ಪ್ರದೇಶಗಳಿಗೆ ಹೋಗಿ ವಾಸ ಮಾಡಲು ತೊಡಗಿ ಅಲ್ಲಿಯ ಪೂರ್ವದ ನಿವಾಸಿಗಳೊಡನೆ ಸಂಪರ್ಕ ಬೆಳೆಸಿ, ಅವರು ಪೂಜಿಸುತ್ತಿದ್ದ ದೈವಗಳನ್ನು ಆ ಜನರ ಸ್ನೇಹದ ಸಲುವಾಗಿ ಒಪ್ಪಿಕೊಳ್ಳಬೇಕಾಗಿ ಬಂದು, ದೈವದ ಕಲ್ಪನೆ ಬೇರೆ ಆಯಿತು ಸ್ನೇಹದಿಂದ ಬಾಳುವ ಸಲುವಾಗಿ ಯಾರ ಭಾವನೆಯೂ ತಪ್ಪು ಎನ್ನುವಂತಿಲ್ಲ ಎಲ್ಲವನ್ನೂ ತಾವೂ ಪೂಜಿಸಬೇಕಾಗಿಲ್ಲ, ಇರುತ್ತ ಒಟ್ಟು ಸಮಾಜದ ಜೀವನದಲ್ಲಿ ಅದಕ್ಕೆ ಸ್ಥಾನ ಉಂಟು. ಹೀಗೆ ಸಮಾಜ ಬೆಳೆದು ಬೆಳೆದು ಬಹುತೆರನ ಜನರನ್ನು ಒಳಗೊಂಡಂತೆ ದೈವ ಹಲವು, ಅವನ್ನು ಕುರಿತ ಕತೆಗಳು ನೂರು, ಅವನ್ನು ಪೂಜಿಸುವ ಕ್ರಮ, ಅಲ್ಲಲ್ಲಿ ವಾಡಿಕೆ ಇದ್ದದ್ದು, ಸರ್ವಸಾಮಾನ್ಯ ಆದವು ಕೆಲವುಕಾಲ ದೈವಕ್ಕೆ ಜೀವಬಲಿ ಇಷ್ಟ; ಅದರಲ್ಲಿ ಕೆಲವುಕಾಲ ನರಬಲಿಯೂ ಇಷ್ಟ ಆಮೇಲೆ ಕೆಲವುಕಾಲ ಕೋಣ ಕೋಳಿ ಯಾವುದೋ ಜೀವ ಸಾಕು. ಇನ್ನು ಕೆಲವುಕಾಲ ಅಥವಾ ಕೆಲವು ಸಮುದಾಯಗಳಲ್ಲಿ ಹೂವು ಹಣ್ಣು ಸಾಕು, ಜೀವಬಲಿ ಬೇಡ. ಹೀಗೆ ನೂರು ದೈವ ಆದಂತೆ ಪೂಜಾಕ್ರಮ ನೂರು ಆಯಿತು ಧರ್ಮದಲ್ಲಿ ನನ್ನ ಮಾತೇ ಸರಿ ಎಂದು ಯಾವನೂ ಇನ್ನೊಬ್ಬನನ್ನು ಬಲವಂತಪಡಿಸಬಾರದು. ಹೀಗೆ ಔದಾರ್ಯ ವಿಸ್ತಾರವಾಗಿ ಹೋಗಿ ಒಂದು ಮುಖವಾಗಿದ್ದ ಆರ್ಯ ಧರ್ಮಕ್ಕೆ ನೂರು ಮುಖ ಬಂದಿತು. ಜೊತೆಗೆ ಆರಂಭದಲ್ಲಿನ ನಾಲ್ಕು ಆರ್ಯವರ್ಣಗಳ ಸಮಾಜ ವ್ಯವಸ್ಥೆ ಬೇರೆ ಸಮಾಜಗಳನ್ನು ಒಳಗೆ ಸೇರಿಸಿಕೊಂಡಂತೆ, ಆಯಾ ಜನ ಅವರವರ ಪದ್ಧತಿಯಂತೆ ಬಾಳಬಹುದು ಎಂದು ಬೆಳೆಯಿತು ಪದ್ಧತಿಗಳು ಬೇರೆಯಾದ ಸಂದರ್ಭದಲ್ಲಿ ಒಬ್ಬರೊಡನೆ ಒಬ್ಬರು ಬೆರೆಯಬೇಕಾದದ್ದಿಲ್ಲ; ಹಾಗೆಯೇ ಇತರ ಪದ್ಧತಿಗಳನ್ನು ಕುರಿತು ಟೀಕೆ ಮಾಡುವಂತಿಲ್ಲ, ಬೇಸರ ತೋರುವಂತಿಲ್ಲ. ಈ ಕ್ರಮದ

ಲವಾಗಿ ವರ್ಣ ಜಾತಿಯಾಯಿತು , ಜಾತಿ ಸಾವಿರ ಆಯಿತು. ದೇಶ ಬೇರೆ
ಂಬ ಕಾರಣದಿಂದ ಒಂದೇ ಜಾತಿಯು ಬೇರೆಬೇರೆ ಪ್ರದೇಶಗಳ ಜನ ಬೇರೆಬೇರೆ
ಪಜಾತಿಗಳಾದುವು. ಆರಂಭದಲ್ಲಿ ಪದ್ಧತಿ ಬೇರೆ ಎಂಬ ಕಾರಣದಿಂದ ಯಾರೂ
ಚ್ಚಿಲ್ಲ ಯಾರೂ ಕಡಿಮೆಯಿಲ್ಲ ಇದ್ದದ್ದು ಬರುಬರುತ್ತಾ ಸಮಾಜದ ದೃಷ್ಟಿ
ಸಕಾಯಿತು ಹೆಚ್ಚು ಕಡಿಮೆ ಎಂಬ ಭಾವ ಬೆಳೆದುಕೊಂಡಿತು ಸಣ್ಣ
ಷಯವನ್ನು ಕುರಿತೋ ದೊಡ್ಡ ವಿಷಯವನ್ನು ಕುರಿತೋ ಅಭಿಪ್ರಾಯ ಬೇರೆ
ದಾಗ ವಿರೋಧಗಳು ಮೊಳೆತವು , ವೈಷಮ್ಯಗಳು ಹುಟ್ಟಿದವು ; ಜಗಳ
ಳಾದುವು ಒಲ್ಲದವರು, ಮೇಲುಪಟ್ಟಿದವರು, ಎನ್ನಬಹುದಾದ ಸಮುದಾಯ
ಈ ಭಾವನೆಗಳ ಪ್ರಭಾವದಿಂದ ವಿರೋಧಗಳು ಒಂದು ರೀತಿಯಲ್ಲಿ ಬಗೆಹರಿದು
ಮಾಜದ ಕೆಲವು ಭಾಗಗಳು ಪರಸ್ಪರ ಹೊಂದಿಕೊಂಡು ಜೊತೆಯಾಗಿ
ಾಳುವುದು ವಾಡಿಕೆಗೆ ಬಂದಿತು. ಇದಿಷ್ಟರ ಮೂಲಭಾವ ವೇದದ ಕಾಲದ
ರಿಯದು ಪರಸ್ಪರ ಸಹಿಸಿಕೊಳ್ಳುವ ಅನುಷ್ಠಾನಮಾಡಿದ ಸ್ಮರಣೆ, ಇದರಿಂದ
ಮಾಡಿದ ಉದಾರ ಮನೋಧರ್ಮ ಈ ಔದಾರ್ಯದ ಈ ಅತಿರೇಕದ ಫಲವಾಗಿ
ಶ್ರವವನ್ನು ಕುರಿತು ಎಂಥ ಎಂಥ ಕತೆಗಳೂ ಧರ್ಮ ಸಾಹಿತ್ಯದಲ್ಲಿ ಎಡೆ
ದೊರೆಯಿತು ಇದನ್ನು ಪುರಾಣಗಳನ್ನು ಕುರಿತ ಪ್ರಸಂಗದಲ್ಲಿ ವಿವರಿಸಿದ್ದಾಗಿದೆ.

ಹೀಗೆಲ್ಲ ಆಗಿ ವೇದದ ಸನಾತನ ಧರ್ಮ ಇಂದಿನ ಹಿಂದೂ ಧರ್ಮ ಆಗಿ
ಂತಿದೆ ಒಳ್ಳೆಯ ಉದ್ದೇಶದಿಂದ ಮಾಡಿದ ಏರ್ಪಾಡು, ಬರೆದ ಬರಹ,
ೇಳಿದ ಕತೆ, ರೂಪಿಸಿದ ಕಟ್ಟಳೆ, ಕಾಲಕ್ರಮದಲ್ಲಿ ಇಷ್ಟೋ ಅಷ್ಟೋ ಮಾರ್ಪಟ್ಟು
ರೂಪು ಕೆಟ್ಟು ಇಂದು ಸಂಪ್ರದಾಯ ಎಂಬ ನೆಲೆಯಲ್ಲಿ ಸಮಾನವಾಗಿ ಸ್ಥಾನ
ಡೆದಿವೆ.

ಕಾಲಕ್ರಮದಲ್ಲಿ ತಪ್ಪಾಗಿ ಬೆಳೆದ ವಾಡಿಕೆಗಳನ್ನೂ ಒಲ್ಲ ಜನ ಆಗಾಗ
ದ್ದಿದ್ದೂ ಉಂಟು. ನಾವು ವೇದ ಧರ್ಮ ಎಂದು ಕರೆಯುತ್ತಿರುವ ಮತದ
ೀವಹಿಂಸೆಯ ಯಜ್ಞ ಕರ್ಮಗಳು ಬೇಡ ಎಂದು ವೇದಗಳ ಆರಂಭದ ಕಾಲ
ಲ್ಲಿಯೇ ಅಡ್ಡಿಮಾಡಿದ ಒಂದು ಸಮುದಾಯದ ಮತ ಇದ್ದಿರಬೇಕು.
ಮೇಲಿನ ಕಾಲದಲ್ಲಿ ಬೌದ್ಧಮತ ಹೀಗೆಯೇ ರೂಪುಗೊಂಡಿತು. ಕಾಲಕ್ರಮ
ಲ್ಲಿ ವೀರಶೈವ ಮತ, ಸಿಖ್ ಮತ, ಆ ಬಳಿಕ ರಾಮಾನಂದ ಕಬೀರ
ುಂತಾದ ಸುಧಾರಕರ ಪಂಥಗಳು, ಜೊತೆಗೆ ದಕ್ಷಿಣ ದೇಶದ ಶೈವ ವೈಷ್ಣವ

ಭಕ್ತಿಪಂಥಗಳು, ಉತ್ತರದ ವಲ್ಲಭ, ಬಂಗಾಳದ ಚೈತನ್ಯದೇವನ ಪಂಥ, ಹೀಗೆ ಸಂಪ್ರದಾಯಗಳಲ್ಲಿ ಬೆಳೆದುಬಂದಿದ್ದ ತಪ್ಪುಗಳನ್ನು ತಿದ್ದುವ ಪ್ರಯತ್ನ ಆಗಾಗ ನಡೆದವು. ಈ ಇನ್ನೂರು ವರ್ಷವಲ್ಲಿ ರಾಜಾರಾಮ ಮೋಹನರಾಯ್, ಸ್ವಾಮಿ ದಯಾನಂದ ಸರಸ್ವತಿ, ಶ್ರೀ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಅರವಿಂದ ಯೋಗಿಗಳವರು, ಶ್ರೀ ರಮಣಮಹರ್ಷಿ ಮುಂತಾಗಿ ಹಲವು ಮಹಿಮಾವಂತ ಗುರುಜನರು ಉದಿಸಿ, ಕೆಟ್ಟಿದ್ದ ಧರ್ಮವನ್ನು ತಿದ್ದಿ ಉಳಿಸಲು ಯತ್ನ ನಡೆಸಿದರು. ಇದೆಲ್ಲದರ ಫಲವಾಗಿ ಜನತೆ ಎಚ್ಚೆತ್ತು ಈಗ ನಮ್ಮ ಧರ್ಮವನ್ನು ಅದರ ಮೂಲಗಳ ಉನ್ನತ ಧ್ಯೇಯಗಳಿಗೆ ಸಾಧಕವಾಗುವಂತೆ ಪರಿಷ್ಕರಿಸಬೇಕು ಎಂದು ನಿಶ್ಚಯಕ್ಕೆ ಬಂದಿರುವುದು ಕಾಣುತ್ತದೆ.

ಜೊತೆಗೆ ಈಚೆಗೆ ನಮ್ಮ ಸಮಾಜದ ಕೆಲವು ಸಮುದಾಯದ ಜನ ಈ ಸಮಾಜದಲ್ಲಿ ತಮಗೆ ಇರುವ ಸ್ಥಾನವನ್ನು ಕುರಿತು ಅತೃಪ್ತರಾಗಿ ಬೇರೆ ಮತಗಳಿಗೆ ಸೇರುತ್ತಿರುವುದನ್ನು ಕಂಡು, ನಮ್ಮ ಸಮಾಜ ಹಿರಿಯರು ಹೀಗೆ ಮತದ ಅನುಯಾಯಿಗಳನ್ನು ಕಳೆದುಕೊಳ್ಳುವುದು ಸರಿಯಲ್ಲ ಎಂದು ಹಿಂದೂ ಧರ್ಮವನ್ನು ಸಂರಕ್ಷಿಸಲು ಮನಸ್ಸು ಮಾಡಿದ್ದಾರೆ ಈ ಯೋಚನೆ ತುಂಬ ಉಚಿತ, ತುಂಬ ಪ್ರಸ್ತುತ, ತೀರ ಅವಶ್ಯಕ

ಹೀಗೆ ಅವಶ್ಯಕವಾಗಿ ನಡೆಯಬೇಕಾಗಿರುವ ಧರ್ಮಸಂರಕ್ಷಣದ ಕಾರ್ಯದ ವಿವರಣೆಗಳನ್ನು ನಿಶ್ಚಯಿಸಿಕೊಳ್ಳಬೇಕಾದ ಕಾಲ ಬಂದಿದೆ ಉಳಿದ ಎಲ್ಲ ವಿಷಯಕ್ಕಿಂತಲೂ ಮೊದಲು ನಾವು ಮನಸ್ಸಿಗೆ ತಂದುಕೊಂಡು ಸಾಧಿಸಬೇಕಾದದ್ದು, ಹಿಂದೂ ಸಮಾಜ ತಾನು ಒಂದು ಸಮಾಜ ಎಂಬ ಭಾವದಿಂದ ಒಂದುಗೂಡಿ ನಡೆಯುವಂತೆ ಮಾಡುವುದು. ಇದೇನು ನಮ್ಮ ದುರದೃಷ್ಟವೋ, ಅಭಿಪ್ರಾಯ ಬೇರೆ ಆದಂತೆ ನಮ್ಮ ಧರ್ಮದಲ್ಲಿ ಬೇರೆ ಅಭಿಪ್ರಾಯದ ಜನ ನಮ್ಮ ಧರ್ಮವನ್ನು ಬಿಟ್ಟು ತಾವು ಬೇರೆ ಧರ್ಮ ಎಂದುಕೊಂಡು ಬರುವುದು ಒಂದು ವ್ಯಾಧಿ ಎಂಬಂತೆ ವಾಡಿಕೆ ಆಗಿಬಿಟ್ಟಿದೆ ಜೈನಧರ್ಮ ಸನಾತನ ಧರ್ಮದಿಂದ ಬೇರೆ ಅಲ್ಲ ಆದರೂ ವೈದಿಕ ಧರ್ಮದಿಂದ ಬೇರೆ ಆದದ್ದರಿಂದ ಮೂಲ ಧರ್ಮವನ್ನು ಬಿಟ್ಟು ಬೇರೆ ಆಯಿತು. ಬುದ್ಧಗುರು ಹೊಸ ಧರ್ಮ ಒಂದನ್ನು ಸ್ಥಾಪಿಸಲು ಯೋಚಿಸಲಿಲ್ಲ, ಅವನ ಜೀವನವನ್ನೂ ಉಪದೇಶವನ್ನೂ ಗಮನಿಸಿದ ಹೊರಗಿನ ಜನ ಗುರುವನ್ನು ಹಿಂದೂ ಧರ್ಮದಲ್ಲಿ ಹುಟ್ಟಿದ

ಅತ್ಯಂತ ಶ್ರೇಷ್ಠ ಜೀವಿ ಎಂದು ಹೊಗಳಿದ್ದಾರೆ ಹೀಗಿದ್ದೂ ಇಂದಿನ ಬೌದ್ಧರು ತಮ್ಮ ಮತ ಬೇರೆ ಧರ್ಮ ಎಂದು ಹೇಳಿಕೊಳ್ಳುತ್ತಿದ್ದಾರೆ ಹರಿಜನ ಹಿಂದೂಗಳ ತಾವು ಹಿಂದೂ ಮತವನ್ನು ಬಿಟ್ಟು ಬೌದ್ಧ ಮತವನ್ನು ಸೇರುತ್ತೇವೆ ಎಂದು ಹೇಳುತ್ತಿದ್ದಾರೆ ಬೌದ್ಧಮತದ ಇಂದಿನ ನಾಯಕರು ಇವರನ್ನು ಹಿಂದೂಮತದಿಂದ ಬಿಡಿಸಿ ತಮ್ಮ ಮತಕ್ಕೆ ಸೇರಿಸಿಕೊಳ್ಳಲು ಒಪ್ಪುತ್ತಿದ್ದಾರೆ ಗುರುನಾನಕ್ ತಾನು ಒಂದು ಹೊಸ ಧರ್ಮವನ್ನು ಸ್ಥಾಪಿಸುತ್ತೇನೆ ಎಂದು ಹೇಳಲಿಲ್ಲ ಆಮೇಲೆ ಬಂದ ಗುರುಗಳ ಪಂಕ್ತಿಯಲ್ಲಿ ಒಬ್ಬರು ಈ ಮತವನ್ನು ಒಪ್ಪಿದ ಜನರಿಗೆ ದೀಕ್ಷೆ ಕೊಡುವ ಕ್ರಮವೊಂದನ್ನು ಕಲ್ಪಿಸಿದರು. ಇಷ್ಟರಿಂದ ಈಗ ಸಿಖ್ ಜನರು ಬಹುಜನ ತಾವು ಹಿಂದುಗಳಲ್ಲ ಬೇರ ಧರ್ಮದ ಜನ ಎಂದು ಹೇಳಿಕೊಳ್ಳುತ್ತಿದ್ದಾರೆಂದು ತೋರುತ್ತದ ಈಚೆಗಂತೂ ಇವರಲ್ಲಿ ಉಗ್ರಪಕ್ಷವೊಂದು ಏರ್ಪಟ್ಟು, ಅದರ ಅನುಯಾಯಿಗಳು ಮುಸ್ಲಿಮರಿಗೆ ಪಾಕಿಸ್ತಾನ ಆದಂತೆ ತಮಗಾಗಿ ಒಂದು ಸಿಖ್‌ಸ್ತಾನ ಆಗಬೇಕು ಎಂದು ಯೋಚಿಸಿರುವಂತೆ ಕಾಣುತ್ತದೆ

ವೀರಶೈವರು ಹಿಂದೂ ಸಮಾಜದ ಒಂದು ಭಾಗವಾಗಿ ಬಾಳುತ್ತಿರುವರಾದರೂ ಕೆಲವರು ವೀರಶೈವ ಎನ್ನುವುದು ಬೇರೆ ಒಂದು ಧರ್ಮ ಎಂಬಂತೆ ಮಾತನಾಡುವುದೂ ಉಂಟು ಇವರಲ್ಲಿ ಕೆಲವರು ಒಮ್ಮೆ ಸೆನ್ಸಸ್ ಗಣನೆಯಲ್ಲಿ ವೀರಶೈವರನ್ನು ಬೇರೆಯಾಗಿ ಗಣಿಸಬೇಕು ಎಂದು ಸೂಚಿಸಿದರಂತೆ ಈಚಿನ ಸುಧಾರಣೆಗಳಲ್ಲಿ ಬ್ರಹ್ಮಸಮಾಜ ಆರ್ಯಸಮಾಜಗಳು ಹಿಂದೂ ಧರ್ಮದ ಭಾಗಗಳಾಗಿ ಬಾಳುತ್ತಿವೆ, ಆದರೆ ತಾವು ಬೇರೆಯ ಗುಂಪುಗಳೆಂದು ಭಾವಿಸಿಕೊಳ್ಳುತ್ತಿವೆ. ಹಿಂದೂ ಸಮಾಜದ ಇಂದಿನ ಹಿರಿಯರು ಹೀಗೆ ಬೆಳೆದು ಬಂದಿರುವ ಭೇದಭಾವನೆಗಳು ಶುಭಕರ ಅಲ್ಲ ಎಂದು ನಿಶ್ಚಯಿಸಿ ಈ ಎಲ್ಲ ಸಮುದಾಯದ ಹಿರಿಯರನ್ನೂ ಅಕ್ಕರೆಯಿಂದ ಕರದು ಒಂದುಕಡೆ ಸೇರಿ ಇವೆಲ್ಲವೂ ಒಂದೇ ಒಂದಾದ ಹಿಂದೂ ಸಮಾಜದ ಭಾಗಗಳು, ಜೈನ, ಬೌದ್ಧ, ಸಿಕ್ಖ, ಈ ಮತಗಳೂ ಈಚಿನ ಸುಧಾರಕ ಪಂಥಗಳೂ ಎಲ್ಲವೂ ಆಧುನಿಕ ಹಿಂದೂ ಸಮಾಜ ಎಂಬ ನಿರ್ಣಯಕ್ಕೆ ಅವರ ಸಮ್ಮತಿಯನ್ನು ಪಡೆಯಬೇಕು.

ಇದು ಮೊದಲ ಹೆಜ್ಜೆ. ಇದಾದ ಮೇಲೆ ಧರ್ಮದಲ್ಲಿ ಮುಖ್ಯವಾಗಿ ಈ ಮುಂದೆ ಹೇಳುವ ಪರಿಷ್ಕರಣವನ್ನು ನಡೆಸಬೇಕು.

ಈಗ ನಮ್ಮ ಧರ್ಮದಲ್ಲಿ ಅದ್ವೈತ ಸಿದ್ಧಾಂತ ಸ್ಥಾಪಿಸಿದ ನಿರ್ಗುಣ ಬ್ರಹ್ಮದಿಂದ ದೇವಾಲಯದಲ್ಲಿ ಪೂಜೆ ಪಡೆಯುತ್ತಿರುವ ಶಿವ, ವಿಷ್ಣು, ಗಣಪತಿ, ಲಕ್ಷ್ಮಿ, ಕಾಳಿ, ಇತ್ಯಾದಿ ದೈವಗಳು, ಗ್ರಾಮದಲ್ಲಿ ಮಂಟಪಗಳಲ್ಲಿ ಬಯಲಿನಲ್ಲಿ ನಿಂತು ಪೂಜೆ ಪಡೆಯುವ ಮಾರ್‍ಯಮ್ಮ ಗಂಗಮ್ಮ ಬೀರೇದೇವರು, ಮುಂತಾದ ಎಲ್ಲ ದೈವಕ್ಕೂ ಸ್ಥಾನ ಇದೆ ಬಹುರೀತಿಯ ಜನರು ಜೊತೆಯಾಗಿ ಮೈತ್ರಿಯಿಂದ ಬಾಳುವುದನ್ನು ಸಾಧ್ಯಮಾಡುವುದಕ್ಕೆ ಇದೇ ಅನುಕೂಲವಾದ ದಾರಿ ಎಂಬ ಅರ್ಥದಲ್ಲಿ ಈ ಸ್ಥಿತಿ ಒಳ್ಳೆಯದು ಇರುತ್ತ ದೇವರನ್ನು ಕುರಿತ ಈ ಭಾವನೆಗಳೆಲ್ಲ ಸಮಾನವೆಂದು ಗ್ರಹಿಸುವುದು ತಪ್ಪಾಗುತ್ತದೆ. ನಮ್ಮ ಹಿರಿಯರು ಇದನ್ನು ತಿಳಿದಿದ್ದರು. ಈ ಕಾರಣದಿಂದಲೇ ಶಿವನ ವಿಷ್ಣುವಿನ ಆಲಯಗಳಿಗೆ ಎಲ್ಲರೂ ಬಂದರಾದರೂ ಮಾರ್‍ಯಮ್ಮ ಬೀರೇದೇವರ ಗುಡಿಗಳಿಗೆ ಮೇಲಿನವರು ಎಂಬ ಸಮುದಾಯದ ಜನ ಹೋಗುತ್ತಿರಲಿಲ್ಲ ದೇವರನ್ನು ಕುರಿತ ಈ ಭಾವಗಳು ಅರಿವಿನ ಎಳೆಯ ಸ್ಥಿತಿಯಲ್ಲಿ ರೂಪುಗೊಂಡವು. ಉನ್ನತ ಭಾವಗಳು ಬೆಳೆದ ಅರಿವಿನ ಕಲ್ಪನೆಗಳು ಒಂದು ಮಗು ಒಂದು ಹುಲಿಯ ಚಿತ್ರವನ್ನು ಬರೆಯಬಹುದು. ನಿಪುಣನಾದ ಚಿತ್ರಕಾರ ಒಂದು ಚಿತ್ರವನ್ನು ಬರೆಯಬಹುದು ಮಗುವಿನ ಚಿತ್ರ ಚಿತ್ರಕಾರನ ಚಿತ್ರಕ್ಕೆ ಸಮಾನವಾಗುವುದಿಲ್ಲ. ಅದು ಚಿತ್ರ ಅಲ್ಲ ಎಂದು ಎನ್ನುವುದರ ಮಗುವಿನ ಮನಸ್ಸಿಗೆ ಕಷ್ಟ ಆಗುತ್ತದೆ ಆದ್ದರಿಂದ ಅದನ್ನೂ ಇಟ್ಟುಕೊಳ್ಳುವುದೇ ಸರಿ. ಜೊತೆಗೆ ಮಗುವಿಗೆ, ಚಿತ್ರಕಾರನ ಚಿತ್ರ ಇನ್ನಷ್ಟು ಚೆನ್ನ ಆದ ಚಿತ್ರ ಎಂದು ತಿಳುವಳಿಕೆಯನ್ನು ಕೊಡಬೇಕು ಎಲ್ಲ ಮಟ್ಟದ ಭಾವನೆಗಳಿಗೂ ಎಡೆಕೊಡುವ ಔದಾರ್ಯದಲ್ಲಿ ನಮ್ಮ ಧರ್ಮ ದೈವವನ್ನು ಕುರಿತ ಉನ್ನತ ಭಾವನೆಗಳಲ್ಲಿ ಪ್ರಚಾರಕೊಡುವ ಅವಶ್ಯಕತೆಯನ್ನು ಮರೆತಿತು, ಕೈಬಿಟ್ಟೇಬಿಟ್ಟಿತು ಸುಧಾರಕ ಪಂಥಗಳು ಇದು ತಪ್ಪು ಎಂದವು. ವೀರಶೈವ ಮತ ಇದಕ್ಕೆ ಒಂದು ಉದಾಹರಣೆ. ಕಾಳಯ್ಯ, ಮಾದಯ್ಯ, ಬೀರಯ್ಯ, ಎಂದು ಮುಂತಾದ ನೂರು ದೇವರಿಗೆ ಶಿವಾಚಾರದಲ್ಲಿ ಎಡೆ ಇಲ್ಲ. ಹರಿದಾಸ ಪಂಥದ ಕನಕಣ್ಣನವರು ಸಹ ಈ ರೀತಿಯ ಕೀಳುಭಾವನೆಗಳನ್ನು ಬಿಡಬೇಕೆಂದೇ ಉಪದೇಶ ಮಾಡಿದರು. ಹೊಸ ಕಾಲಕ್ಕೆ ನಾವು ಇದನ್ನು ಒಂದು ಮುಖ್ಯ ಗುರಿಯಾಗಿ ಇಟ್ಟುಕೊಳ್ಳಬೇಕು.

ದೈವವನ್ನು ಕುರಿತು ಭಾವಗಳನ್ನು ಮನಸ್ಸಿಗೆ ತಿಳಿಯುವಂತೆ ಮಾಡುವ

ಯತ್ನದಲ್ಲಿ ನಮ್ಮ ಪುರಾಣಗಳು ದೇವರನ್ನು ಕುರಿತ ಕತೆಗಳಲ್ಲಿ ಅನೇಕ ಅದ್ಭುತ ಗಳನ್ನು ಅಸಾಧ್ಯ ಸಂಗತಿಗಳನ್ನು ನಡೆದ ಸಂಗತಿಗಳು ಎಂಬಂತೆ ವರ್ಣಿಸಿದ್ದನ್ನು, ಇನ್ನು ಕೆಲವು ಭಾವನೆಗಳನ್ನು ಸಂಕೇತದ ಕತೆಗಳಲ್ಲಿ ರೂಪಿಸಿದ್ದನ್ನು, ಹೇಳಿ ದ್ದಾಗಿದೆ. ಸಂಕೇತದ ಕತೆಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಅವು ಹೇಳುವ ಸಂಗತಿಗಳು ನಿಜವಾಗಿ ನಡೆದವು ಎಂದು ತಿಳಿಯಬಾರದು ಎಂದೂ ಈ ಮುನ್ನ ಹೇಳಿದೆ. ಸಂಕೇತ ಕತೆಗಳು ಎನ್ನಬಹುದಾದ ಇಂಥ ಕತೆಗಳನ್ನು ಈ ಅರ್ಥದಲ್ಲಿ ಉಳಿಸಿಕೊಂಡು ಬರಿಯ ಅದ್ಭುತವನ್ನು ಹೇಳುವ ಕತೆಗಳಿಗೆ ಧಾರ್ಮಿಕ ಸಾಹಿತ್ಯದಲ್ಲಿ ಎಡೆ ಇಲ್ಲ ಎನ್ನಬೇಕು.

ಹೀಗೆಯೇ ಶಿವ ವಿಷ್ಣು ಬೇರೆ, ಗೌರಿ ಲಕ್ಷ್ಮಿ ಬೇರೆ, ಮಾರ್ರ್ಯಮ್ಮ ಗಂಗಮ್ಮ ಬೇರೆ, ಎಂದು ಹೇಳುವ ಕತೆಗಳನ್ನೂ ಒಬ್ಬರಿಗಿಂತ ಒಬ್ಬರು ಹೆಚ್ಚು ಕಡಿಮೆ ಎಂದು ಹೇಳುವ ಕತೆಗಳನ್ನೂ ದೈವವನ್ನು ಕುರಿತ ಸರಿಯಾದ ಜ್ಞಾನ ಇಲ್ಲದ ಜನ ರಚಿಸಿದ ಅಬದ್ಧ ಕಥನಗಳೆಂದು ತೊರೆಯಬೇಕು. ಹೀಗೆಯೇ ರಾಮನೋ ಕೃಷ್ಣನೋ ಶಿವನೋ ಗಣಪತಿಯೋ ತಪ್ಪಿನಡೆದರು, ಕೇಡಕು ಮಾಡಿದರು, ಕಷ್ಟಕೊಟ್ಟರು, ಅನ್ಯಾಯವಾಗಿ ಬಾಳಿದರು, ಎಂದು ಹೇಳುವ ತೆರನ ಕಥೆ ಗಳನ್ನೂ ತೊರೆಯಬೇಕು

ದೈವ ಜೀವಬಲಿಯನ್ನು ಬೇಡುತ್ತದೆ, ಹರಕೆ ಮಾಡಿಕೊಂಡು 'ಅದನ್ನು ನಡೆಸು, ನಾನು ನಿನಗೆ ಒಳ್ಳೆಯದನ್ನು ಮಾಡುತ್ತೇನೆ ನಡೆಸಲಿಲ್ಲ, ಕೇಡಕು ಮಾಡುತ್ತೇನೆ ಎನ್ನುತ್ತದೆ,' ಎಂಬ ರೀತಿಯ ಅದನ್ನು ಕುರಿತ ಅಲ್ಪಭಾವನೆಗಳ ಎಲ್ಲ ಕಥೆಗಳನ್ನೂ ನಿರಾಕರಿಸಬೇಕು ದೈವ ಎಲ್ಲ ಜೀವರಾಶಿಯ ತಂದೆ ತಾಯಿ, ಏಕೈಕ ಬಂಧು. ಅದು ಕರುಣಾಳು ತತ್ವ, ಧರ್ಮವನ್ನು ಮಾಡಿದೆ, ಧರ್ಮದಲ್ಲಿ ನಡೆ ಎಂದು ಹೇಳುತ್ತಿದೆ, ಎಲ್ಲ ಲೋಕವನ್ನು ಕಾಪಾಡುತ್ತಿದೆ, ನಾವು ಅದಕ್ಕೆ ಸೇವೆಮಾಡಿದರೆ ಮಾತ್ರ ಅದು ನಮ್ಮನ್ನು ಕಾಪಾಡುತ್ತದೆ ಎನ್ನುವುದು ತಪ್ಪು, ತಂದೆ ತಾಯಿ ತಮ್ಮ ಎಳೆಯ ಮಗುವನ್ನು ಕಾಯುವಂತೆ ಅದು ಎಲ್ಲ ಜೀವವನ್ನೂ ತನ್ನಿಚ್ಛೆಯಿಂದ ತಾನಾಗಿ ಕಾಯುತ್ತದೆ ಇದನ್ನು ಎಲ್ಲ ಜನತೆಯ ನಿತ್ಯದ ನಂಬಿಕೆಯಾಗಿ ಮಾಡಬೇಕು. ಈ ನಂಬಿಕೆಯಲ್ಲಿ ಮನುಷ್ಯ ಸತ್ಯವಂತನಾಗಿ, ಶುಚಿಯಾಗಿ, ಬಾಳಬೇಕು ಹೀಗೆ ಬಾಳಿ ದೈವಕ್ಕೆ ಸಂತೋಷವನ್ನುಂಟುಮಾಡಬೇಕು. ಒಂದು ಜೀವ ಇನ್ನೊಂದು ಜೀವದೊಂದಿಗೆ

ಚೆನ್ನಾಗಿ ನಡೆದುಕೊಂಡರೆ ತಮ್ಮ ಮಕ್ಕಳು ಸ್ನೇಹದಿಂದ ಬಾಳುತ್ತಿರುವುದನ್ನು ನೋಡಿ ತಂದೆ ತಾಯಿ ಸಂತೋಷಪಡುವಂತೆ ದೇವರು ಸಂತೋಷಪಡುತ್ತಾನೆ. ಹೀಗೆ ಬಾಳದಿದ್ದರೆ ದೈವಕ್ಕೆ ಸಂತೋಷ ಇಲ್ಲವಾಗುತ್ತದೆ ಸಂತೋಷ ಆಗುವಂತೆ ನಡೆಯುವುದೇ ಸರಿ, ಸಂತೋಷ ಆಗದಂತೆ ನಡೆಯುವುದು ತಪ್ಪು, ಇದೇ ಧರ್ಮದ ತಿರುಳು ಹೀಗೆ ದೈವವನ್ನು ಕುರಿತ ಶುದ್ಧ ಸಾತ್ವಿಕ ಭಾವನೆಗಳನ್ನು ಜನರಲ್ಲಿ ಪ್ರಚಾರಕ್ಕೆ ತರಬೇಕು

ದೈವವನ್ನು ಕುರಿತ ಅಲ್ಪಭಾವನೆಗಳನ್ನು ಕ್ಷುದ್ರ ದೈವ ಎಂದು ಕರೆಯುವುದು ನಮ್ಮಲ್ಲಿ ಒಂದು ವಾಡಿಕೆ ಆಗಿದೆ ದೈವ ಆಹುದಾದದ್ದು ಯಾವುದೂ ಕ್ಷುದ್ರ ಅಲ್ಲ. ದೈವ ಅಪರಂಜಿ, ಅದರಲ್ಲಿ ಮೇಲು ಕೀಳು ಇಲ್ಲ

ಆಚಾರ್ಯರಾದವರು ಮಾಡಿದ ಅದ್ವೈತ ಮುಂತಾದ ಸಿದ್ಧಾಂತಗಳ ವಿವರಗಳನ್ನು ಬೆಳೆದ ಬುದ್ಧಿಯ ಜನ ತಿಳಿಯಲಿ ಉಳಿದವರು ಅವುಗಳ ಸಾರವನ್ನು ತಿಳಿದು ಬಾಳಬೇಕು "ಲೋಕವೆಲ್ಲ ದೈವ, ಅದರೆದುರು ನಾನು ಏನೂ ಅಲ್ಲ ನಾನು ಜೊತೆಯ ಜೀವಕ್ಕೆ ಕೇಡಕು ಮಾಡಬಾರದು, ಒಳ್ಳೆಯ ದನ್ನೇ ಮಾಡಬೇಕು," ಇದು ಅದ್ವೈತ "ಲೋಕವೆಲ್ಲ ದೇವರು, ದೈವ; ನಾನು ನನ್ನ ಜೊತೆಯಜನ ಜೀವಜಾತ ಲೋಕ, ಎಲ್ಲ ಅದರ ಭಾಗಗಳು, ಒಂದು ಮೈಯ ಅಂಗಗಳು ಒಂದನ್ನೊಂದು ಕುರಿತು ಅಕ್ಕರೆಯಿಂದ ನಡೆಯುವಂತೆ ಜೀವಗಳು ಒಂದನ್ನೊಂದು ಕುರಿತು ಅಕ್ಕರೆಯಿಂದ ನಡೆಯಬೇಕು," ಇದು ವಿಶಿಷ್ಟಾದ್ವೈತ. "ಲೋಕದಲ್ಲಿ ಇರುವುದು ಎರಡೇ ತತ್ವ, ನಾನು ನನ್ನ ದೇವರು. ಇದನ್ನು ತಿಳಿದು ಒಬ್ಬೊಬ್ಬ ಮನುಷ್ಯನೂ ತನ್ನ ಎದುರಾಳಿಯನ್ನು, ಎದುರ ಜೀವವನ್ನು, ದೇವರು ಎಂದು ಕಾಣಬೇಕು ಹರಿ ಎಲ್ಲ ಜೀವದಲ್ಲಿ ಇದ್ದಾನೆ ಎನ್ನುವುದನ್ನು ತಿಳಿಯಬೇಕು ಪ್ರಾಜ್ಞನಾದವನು ಎಲ್ಲ ಜೀವವನ್ನು ಕುರಿತು ನಿಶ್ಚಲ ಭಕ್ತಿಯಿಂದ ನಡೆದುಕೊಳ್ಳಬೇಕು," ಇದು ದ್ವೈತ

ದೈವವನ್ನು ಕುರಿತ ಈ ಭಾವಗಳನ್ನು ನಿತ್ಯಸತ್ಯ ತತ್ವಗಳೆಂದು ಜನದ ಮನಸ್ಸಿನಲ್ಲಿ ನೆಡಬೇಕು.

ಧರ್ಮದ ಭಾವಗಳು ಹೀಗಿರುತ್ತ ಆಚಾರದಲ್ಲಿ ಹಿಂದಿನಿಂದ ಬೆಳೆದು ಬಂದಿರುವ ದೋಷಗಳನ್ನು ಒಡನೆಯೇ ತೊರೆಯಬೇಕು ಇವುಗಳಲ್ಲಿ ಮೊದಲನೆಯದು ನಮ್ಮ ಜಾತಿವ್ಯವಸ್ಥೆ

ವರ್ಣವ್ಯವಸ್ಥೆ ಮೂಲತಃ ದುಷ್ಟವಲ್ಲ ಮನುಷ್ಯರಲ್ಲಿ ನಾಲ್ಕು ಮನೋಧರ್ಮದ ಜನ ಇರುತ್ತಾರೆ ಒಂದು ಮನೋಧರ್ಮದವರು ಮುಖ್ಯವಾಗಿ ಬುದ್ಧಿಯನ್ನು ಬಳಸುತ್ತಾರ ಎರಡನೆಯ ಮನೋಧರ್ಮದವರು ಬಲಿಷ್ಠರಾಗಿರುತ್ತಾರೆ, ಜೊತೆಯ ಜನರನ್ನು ಕಾಪಾಡಬಲ್ಲವರು, ನೋಡಿಕೊಳ್ಳಬಲ್ಲವರು, ಆಗಿರುತ್ತಾರೆ ಮೂರನೆಯ ವಂಗಡದವರು ವ್ಯವಹಾರದಲ್ಲಿ ಚತುರರು. ಕೊಡುವುದು ತೆಗೆಯುವುದು, ಮಾರುವುದು ಕೊಳ್ಳುವುದು, ಜೀವನಕ್ಕೆ ಅವಶ್ಯಕವಾದ ಎಲ್ಲ ಕೆಲಸವನ್ನು ರುಚಿಯಿಂದ ಮಾಡುವುದು, ಇವರ ಸ್ವಭಾವ. ನಾಲ್ಕನೆಯ ಮನೋಧರ್ಮದವರು ಹಸುಮಕ್ಕಳಂತೆ ಸರಳ ಮನಸ್ಸಿನ ಜನ ದುಡಿಯ ಬಲ್ಲರು, ಆದರೆ ಅವರನ್ನು ಯಾರಾದರೂ ನಡೆಸಬೇಕು. ಹೇಳಿದ್ದನ್ನು ಮಾಡಿ ತೃಪ್ತಿ ಕಾಣುವ ಈ ಜನ ದುಡಿಮೆಗಾರ ಸಮುದಾಯ ಈ ಸಮುದಾಯಗಳನ್ನು ವೇದ, ಬ್ರಾಹ್ಮಣ ಪರತತ್ವದ ಮುಖ ಕ್ಷತ್ರಿಯ ಅದರ ಬಾಹು, ವೈಶ್ಯ ಅದರ ಊರು, ಶೂದ್ರ ಅದರ ಪಾದ, ಎಂಬ ಅಲಂಕಾರದ ಉಕ್ತಿಯಲ್ಲಿ ವರ್ಣಿಸಿತು ಆಗದ ಜನ ಹೊರಗಿನಿಂದ ಬಂದವರು ಇದನ್ನು ಹಿಂದೂ ಧರ್ಮದ 'ಫೂಟ್ ಅಂಡ್ ಮೌತ್ ಡಿಸೀಸ್,' ಎಂದರೆ, ಒಂದು ವ್ಯಾಧಿ ಎಂದು ಹೇಳಿದರು ಇದು ಅಸೂಯೆಯ ಮಾತು ಎನ್ನುವುದು ಸ್ಪಷ್ಟ. ಒಂದು ದೇಹದಲ್ಲಿ ತಲೆ, ತೋಳು, ತೊಡೆ, ಪಾದ, ಎಲ್ಲವೂ ಇರಬೇಕು ಇವುಗಳ ಕೆಲಸ ಬೇರೆಬೇರೆ ಇರುವುದು ಸ್ಪಷ್ಟ ಈ ಭೇದ ವ್ಯಾಧಿ ಅಲ್ಲ. ಆದರೆ ಇವುಗಳಲ್ಲಿ ಒಂದಕ್ಕಿಂತ ಒಂದು ಹೆಚ್ಚು ಅಥವಾ ಕಡಮೆ ಎಂಬ ಭಾವನೆ ತಪ್ಪು. ವರ್ಣವ್ಯವಸ್ಥೆ ಇಲ್ಲದ ಇತರ ದೇಶಗಳಲ್ಲಿಯೂ ನಾಲ್ಕು ವರ್ಣದ ಜನರು ಇದ್ದಾರೆ, ಅವರವರ ಪ್ರವೃತ್ತಿಯಂತೆ ಜೀವನಕ್ರಮವನ್ನು ಹಿಡಿಯುತ್ತಾರೆ, ಬಾಳುತ್ತಾರೆ. ನಾಲ್ಕು ವರ್ಣ ಎಂದು ಹೇಳಿಕೊಳ್ಳದೆಯೇ ಆ ಸಮಾಜಗಳಲ್ಲಿ ನಾಲ್ಕು ವರ್ಣವೂ ಉಂಟು, ಇಷ್ಟೇ ವ್ಯತ್ಯಾಸ. ಬುದ್ಧಿಜೀವಿಗಳ ಸಮುದಾಯದಲ್ಲಿ ಹುಟ್ಟಿದವನು ಅದರ ಮಾರ್ಗಕ್ಕೆ ಹೊಂದದಾಗ ಬೇರೆಯ ವರ್ಣದ ವೃತ್ತಿಯನ್ನು ಹಿಡಿಯುತ್ತಾನೆ. ಇತರ ವರ್ಣಗಳ ಮಾತೂ ಹಾಗೆಯೇ ಅವುಗಳಲ್ಲಿ ಹುಟ್ಟಿದವರು ಅವುಗಳ ವೃತ್ತಿಗಳಿಗೆ ಹೊಂದದೆ ಹೋದರೆ ಬೇರೆ ವೃತ್ತಿಯನ್ನು ಹಿಡಿಯುತ್ತಾರೆ ಭರತವರ್ಷದಲ್ಲಿ ವರ್ಣವ್ಯವಸ್ಥೆ ಏರ್ಪಟ್ಟಾಗ ಆಯಾ ವೃತ್ತಿಗಳಲ್ಲಿದ್ದ ಬಹುಪಾಲು ಜನ ಅವು

ಗಳಲ್ಲಿಯೇ ಮುಂದುವರಿದರು. ಹೆಚ್ಚು ಕಡಿಮೆಯ ಭಾವ ಆರಂಭದಲ್ಲಿ ಇದ್ದಿರಲಾರದು. ಮಹಾಭಾರತದ ವಿಸ್ತಾರವಾದ ವಿಚಾರಭೂಮಿಕೆಯಲ್ಲಿ ಮೊದಲನೆಯ ರೂಪದಲ್ಲಿ ಬ್ರಾಹ್ಮಣ್ಯವನ್ನು ಕುರಿತು ಶುಭಕರವಾದ ಕಲ್ಪನೆ ಕಂಡುಬರುತ್ತದೆ. ಅನುಶಾಸನಿಕಪರ್ವ ಮುಂತಾದ ಆಮೇಲಿನ ರಚನೆಯಲ್ಲಿ ಬ್ರಾಹ್ಮಣ ಜಾತಿಯ ಪ್ರಾಶಸ್ತ್ಯ ಅತಿಯನ್ನು ಮುಟ್ಟಿದ ಧರ್ಮವ್ಯಾಧ ತನ್ನ ವ್ಯಾಧವೃತ್ತಿಯನ್ನು ನಡೆಸುತ್ತಲೇ ತಕ್ಕಷ್ಟು ತಪಸ್ವಿಯಾದ ಒಬ್ಬ ಬ್ರಾಹ್ಮಣನಿಗೆ ಧರ್ಮವನ್ನು ತಿಳಿಸುವ ಯೋಗ್ಯತೆಯನ್ನು ಪಡೆದಿದ್ದನು.

ಬರೀಹುಟ್ಟಿನಿಂದ ಬ್ರಾಹ್ಮಣ್ಯ ಸಿದ್ಧಿಸುವುದಿಲ್ಲ 'ನ ವಿಶೇಷೋಽಸ್ತಿ ವರ್ಣಾನಾಂ ಸರ್ವಂ ಬ್ರಾಹ್ಮಮಿದಂ ಜಗತ್'. ವರ್ಣಗಳಲ್ಲಿ ಮೇಲು ಕೀಳು ಇಲ್ಲ. ಸೃಷ್ಟಿಯೆಲ್ಲ ಬ್ರಹ್ಮವೇ ಶೂದ್ರನಾಗಿ ಹುಟ್ಟಿದವನು ಸದ್ಗುಣದಿಂದ ಬ್ರಾಹ್ಮಣನಾಗುತ್ತಾನೆ ಬ್ರಾಹ್ಮಣನಾಗಿ ಹುಟ್ಟಿದವನು ಆಚಾರವನ್ನು ತೊರೆದು ಶೂದ್ರನಂತೆ ಆಗುತ್ತಾನೆ ವರ್ಣದ ವ್ಯವಸ್ಥೆ ಸಮಾಜವನ್ನು ಭಾಗಗಳಾಗಿ ಮಾಡಿತ್ತಾದರೂ ಒಂದೊಂದು ವರ್ಣಕ್ಕೂ ಅದಕ್ಕೆ ತಕ್ಕ ಆಚಾರಕ್ರಮವನ್ನು ನಿಯಮಿಸಿ, ಸಮಾಜಜೀವನದಲ್ಲಿ ಶುಚಿಯನ್ನು ಸಾಧಿಸಿತು ನೂರು ವರ್ಷದ ಹಿಂದೆ ಬ್ರಾಹ್ಮಣ ಜಾತಿಯ ಒಬ್ಬ ಮನುಷ್ಯ ಮಾಂಸ ತಿನ್ನುತ್ತಿರಲಿಲ್ಲ, ಮದ್ಯ ಕುಡಿಯುತ್ತಿರಲಿಲ್ಲ. ಆಚಾರವನ್ನು ಮುರಿದರೆ ಅವನ ಸಮುದಾಯ ಅವನನ್ನು ಹೊರಕ್ಕೆ ಹಾಕುತ್ತಿತ್ತು ಹೀಗೆಯೇ ಅರಸು ಮಕ್ಕಳು, ವೈಶ್ಯರು, ಮೇಲಿನ ವೆಂಬ ಹಲವು ಇತರ ಜಾತಿಗಳ ಜನ, ಒಂದು ಕಟ್ಟುನಿಟ್ಟಿನ ಬಾಳನ್ನು ಬಾಳಿದರು. ಒಕ್ಕಲಮಗ ಮಾಂಸವನ್ನು ಉಣ್ಣುತ್ತಿದ್ದನು , ಮದ್ಯವನ್ನು ಮುಟ್ಟುತ್ತಿರಲಿಲ್ಲ. ಉಳಿದ ಹಲವು ಜಾತಿಗಳೂ ಇದೇ ನಿಯಮವನ್ನು ಪಾಲಿಸುತ್ತಿದ್ದವು. ಹೆಂಡ ಅಥವಾ ಸಾರಾಯಿಯನ್ನು ಕುಡಿಯುವುದು ಅತ್ಯಂತ ದೇಹಶ್ರಮದ ವೃತ್ತಿಗಳಲ್ಲಿ ದಣಿಯುತ್ತಿದ್ದ ಒಡ್ಡ ಹರಿಜನರಂಥವರು ಮಾತ್ರ ಈ ವ್ಯವಸ್ಥೆ ಈಗ ಕೆಟ್ಟಿದೆ. ಇದು ಒಳ್ಳೆಯ ಮಾರ್ಪಾಡು ಎಂದು ಯಾರೂ ಹೇಳುವಂತಿಲ್ಲ. ಜಾತಿಭೇದದಿಂದ ಮೂಡಿರುವ ವೈಷಮ್ಯಗಳನ್ನು ಬಿಡಬೇಕು ಅವನ್ನು ಬಿಡುತ್ತ ಜಾತಿಗೆ ಬಂದ ಆಚಾರವನ್ನು ಜನ ಬಿಡಬಾರದು

ಈಗ ನಮ್ಮ ಜಾತಿಗಳ ಮಧ್ಯೆ ಬೆಳೆದಿರುವ ವೈಷಮ್ಯವನ್ನು ಬಿಡುವುದಕ್ಕೆ ಒಂದೇ ದಾರಿ . ಹಿಂದೂ ಸಮಾಜದಲ್ಲಿ ವೃತ್ತಿಯ ಕಾರಣದಿಂದ ರೂಪು

ೂಂಡಿರುವ ಜಾತಿಗಳ ಆಚಾರವನ್ನು ಬಿಡದೆ ಹೆಚ್ಚು ಕಡಿಮೆಯ ಕಲ್ಪನೆಯನ್ನು ೂರೆಯುವುದು ಇದನ್ನು ಕಂಡ ಸುಧಾರಕ ಪಂಥಗಳು ಈ ಮುನ್ನ ಈ ಾರಿಯನ್ನು ಹಿಡಿದವು. ಸಿಖ್ ಸಮಾಜ, ವೀರಶೈವ ಸಮಾಜ, ಬ್ರಾಹ್ಮ ಸಮಾಜ, ಆರ್ಯಸಮಾಜ, ಜಾತಿಭೇದವನ್ನು ತೊರೆದವು ಸುಧಾರಕ ಪಂಥ ಗಳಲ್ಲಿಯೇ ಪರಮಹಂಸರ ಪಂಥ ಜಾತಿಯನ್ನು ಕುರಿತ ಉದಾರವಾದ ಒಂದು ಕಲ್ಪನೆಯನ್ನು ಬಾಡಿಕೆಗೆ ತಂದಿದೆ.

ಎಲ್ಲ ಸುಧಾರಕ ಮಹನೀಯರ ಮನಸ್ಸನ್ನು ಪ್ರತಿನಿಧಿಸಿ ಸ್ವಾಮಿ ವಿವೇಕಾನಂದರು ಈ ವಿಷಯದಲ್ಲಿ ವಿವರ ವಿವರವಾಗಿ ಮಾರ್ಗದರ್ಶನ ಮಾಡಿ ದ್ದಾರ ಅವರ ಉಪದೇಶದ ಈ ವಾಕ್ಯಗಳು ಮನನೀಯವಾಗಿದೆ.

ವರ್ಣವ್ಯವಸ್ಥೆ ದೈವ ಮಾನವನಿಗೆ ಅನುಗ್ರಹಿಸಿದ ಒಂದು ಅತ್ಯುನ್ನತ ಸಮಾಜವ್ಯವಸ್ಥೆ ಎನ್ನುವುದು ನಮ್ಮ ನಂಬಿಕೆ

ಒಬ್ಬ ಮನುಷ್ಯ ಹುಟ್ಟುತ್ತ ಇನ್ನೊಬ್ಬ ಮನುಷ್ಯನಿಗಿಂತ ಶ್ರೇಷ್ಠ ಎನ್ನುವ ಮಾತಿಗೆ ವೇದಾಂತದಲ್ಲಿ ಎಡೆ ಇಲ್ಲ

ಬ್ರಾಹ್ಮಣತ್ವ ಭರತವರ್ಷದ ಮಾನವ ಆದರ್ಶ ಸೃಷ್ಟಿ ಬ್ರಾಹ್ಮಣ ಆಗಬೇಕು, ಇದು ಧ್ಯೇಯ

ಕೃಷ್ಣನ ಉನ್ನತ ಉದ್ದೇಶ ಬ್ರಾಹ್ಮಣ್ಯವನ್ನು ಉಳಿಸುವುದು ಈ ಬ್ರಾಹ್ಮಣ ದೈವೀಮಾನವ ಬ್ರಹ್ಮವನ್ನು ತಿಳಿದಿರುವವನು, ಆದರ್ಶ ಮಾನವ, ನಿರ್ದಿಷ್ಟ ಮಾನವ.

ಬ್ರಾಹ್ಮಣ್ಯ ಶುದ್ಧಿಯಂತೆ ಶುದ್ಧವಾಗಿರಬೇಕು , ದೇವರಂತೆ ಒಳಿತಾಗಿರ ಬೇಕು

ತಾನು ಬ್ರಾಹ್ಮಣ ಎಂದುಕೊಳ್ಳುವ ಒಬ್ಬೊಬ್ಬನೂ ತನ್ನ ಆಧ್ಯಾತ್ಮಿಕತೆ ಯನ್ನು ಪ್ರಕಟಿಸಿ ತನ್ನ ಆ ಹೆಮ್ಮೆ ಸಂನ್ಯಾಸದ್ದು ಎಂದು ಸಿದ್ಧಾಂತ ಮಾಡ ಬೇಕು. ಜೊತೆಗೆ ಇತರರನ್ನು ಅದೇ ಸ್ಥಿತಿಗೆ ಎತ್ತಬೇಕು

ಈಗಿನ ಬ್ರಾಹ್ಮಣರು ಇದನ್ನು ಮಾಡುತ್ತಿಲ್ಲ ಆದ್ದರಿಂದ ಅವರ ಹೆಮ್ಮೆ ಬರಿಯ ಒಣಹೆಮ್ಮೆ ಎಂದು ಹೇಳಬೇಕಾಗಿದೆ.

ಬ್ರಾಹ್ಮಣ ಮಹನೀಯರೇ, ಈ ಸ್ಥಿತಿ ಸಾವಿನ ಲಕ್ಷಣ. ಎದ್ದೇಳಿ ,

ನೀವು ಮಾನವರೆಂಬುದನ್ನು ತೋರಿಸಿ , ನಿಮ್ಮ ಬ್ರಾಹ್ಮಣ್ಯವನ್ನು ಪ್ರಕಟಿಸಿ. ಬ್ರಾಹ್ಮಣೇತರರನ್ನು ಬ್ರಾಹ್ಮಣ್ಯಕ್ಕೆ ಎತ್ತಿ ಗುರುಗಳಾಗಿ ಅಲ್ಲ, ಅಹಂಕಾರದಿಂದ ಅಲ್ಲ. ಪೂರ್ವ ಪಶ್ಚಿಮ ದೇಶಗಳ ಆಟಬೂಟ ಮೂಢನಂಬಿಕೆಗಳಿಂದ ಅಲ್ಲ. ಜನತೆಯ ಸೇವಕ ಎಂಬ ಭಾವದಿಂದ ಇದನ್ನು ಸಾಧಿಸಿರಿ

ಬ್ರಾಹ್ಮಣೇತರರೂ ಅಷ್ಟೇ. ಜಾತಿಜಾತಿಯ ಮಧ್ಯೆ ದ್ವೇಷವನ್ನು ಎಬ್ಬಿಸುವುದರಲ್ಲಿ ಇವರ ಶಕ್ತಿಯೆಲ್ಲ ವ್ಯಯವಾಗುತ್ತಿದ. ಹಿಂದೂ ಜಾತಿಗಳು ಹೀಗೆ ಸಾಗಲು ತೊಡಗಿರುವಲ್ಲಿ ಹಿಂದೂ ಅಲ್ಲದವರಲ್ಲ ಈ ಕಿಚ್ಚನ್ನು ಬೆಳೆಸಲು ಇನ್ನಷ್ಟು ಕಟ್ಟಿಗೆಯನ್ನು ಒದಗಿಸಿ ಸಂತೋಷ ಕಾಣುತ್ತಾರೆ.

ನಮ್ಮ ಜಾತಿ ವ್ಯವಸ್ಥೆಯನ್ನು ಸರಿಪಡಿಸುವ ಯತ್ನ ಮೇಲಿನ ಜಾತಿಗಳ ಜನರನ್ನು ಕೆಳಕ್ಕೆ ಸಳೆಯುವುದಕ್ಕಲ್ಲ , ಬ್ರಾಹ್ಮಣನನ್ನು ತುಳಿದುಹಾಕು ವುದಕ್ಕಲ್ಲ

ಜಾತಿ ಜಾತಿಗಳ ಮಧ್ಯೆ ಜಗಳದಿಂದ ಪ್ರಯೋಜನ ಇಲ್ಲ.

ಜಾತಿಗಳ ಮಧ್ಯದ ವಿರಸಕ್ಕೆ ಚಿಕಿತ್ಸೆ ಮೇಲೆ ಇರುವವರನ್ನು ಕೆಳಕ್ಕೆ ಇಳಿಸುವುದರಲ್ಲಿ ಇಲ್ಲ , ಕೆಳಗಿನವರನ್ನು ಮೇಲಕ್ಕೆ ಎತ್ತುವುದರಲ್ಲಿ ಇದೆ

ಮಾಂಸವನ್ನು ತಿನ್ನುವಲ್ಲಿ ನಾನು ಅದು ಸರಿ ಅಲ್ಲ ಎಂದು ಬಲ್ಲೆ. ಅದನ್ನು ತಿನ್ನದೆ ಇರುವುದು ಆದರ್ಶ. ಅದು ಧ್ಯೇಯವಾದ, ವ್ಯವಹಾರದಲ್ಲಿ ಸಾಧ್ಯವಲ್ಲ, ಎನ್ನುತ್ತೇವೆ. ನನಗೆ ಅನುಕೂಲ ಅಲ್ಲವೆಂಬ ಕಾರಣದಿಂದ ಆದರ್ಶವನ್ನು ಹೀಗೆ ತ್ಯಜಿಸುವುದು ಯುಕ್ತವಲ್ಲ.

ಜನಾಂಗದ ಉನ್ನತಮಟ್ಟದ ಹತ್ತು ಸಾವಿರ ಜನ, ದೇಹದ ಶ್ರಮದಿಂದ ಅನ್ನ ಗಳಿಸಬೇಕಾದ ಸ್ಥಿತಿಯಲ್ಲಿಲ್ಲದವರು, ಮಾಂಸ ಭೋಜನವನ್ನು ತೊರೆಯಲಿ ದೇಹಶ್ರಮದಿಂದ ಅನ್ನ ಗಳಿಸಬೇಕಾಗಿರುವವರು ಶಾಕಾಹಾರಿ ಗಳಾಗಿರಬೇಕು ಎಂದು ಬಲವಂತ ಮಾಡುವುದು ತಪ್ಪು.

ಹಿಂದೂಧರ್ಮ ತನಗೆ ಸಹಜವಾದ ಔದಾರ್ಯದಿಂದ ಬಾಳ ಬಯಸು ವುದಾದರೆ ವಿವೇಕಾನಂದರ ಈ ಉಪದೇಶವನ್ನು ಒಡನೆ ಅಂಗೀಕರಿಸಬೇಕು. ವೃತ್ತಿಗಾಗಿ ವರ್ಣಭೇದ ಇರುವುದಾದರೂ ಜೀವನ ಕ್ರಮಕ್ಕೆ ಎಲ್ಲ ಹಿಂದೂಗಳೂ ಪರಸ್ಪರ ಸಮಾನರಾದ ಜನರ ಸಮುದಾಯ ಎಂದು ಸಾರಬೇಕು.

ಹಿಂದೂ ಧರ್ಮದಲ್ಲಿ ಹುಟ್ಟಿದವರೆಲ್ಲ ಸಮಾನರು ಎಂದು ಸಾರಿ ಧರ್ಮ ಈಗ ಆರ್ಯಸಮಾಜದಲ್ಲಿ ನಡೆಯುತ್ತಿರುವಂತೆ ಎಲ್ಲ ಹಿಂದೂ ಬಾಲಕ ಬಾಲಕಿಯರಿಗೆ ಎಂಟನೆಯ ವರ್ಷದಲ್ಲಿ ಯಜ್ಞೋಪವೀತವನ್ನು ಹಾಕಿ ಗಾಯತ್ರೀ ಉಪದೇಶವನ್ನು ಮಾಡಬೇಕು ಹಿಂದೂ ಆಗಿ ಹುಟ್ಟಿದವರಿಗೆ ಮಾತ್ರವಲ್ಲ, ಹೊರಗಿನ ಯಾರು ಈ ಸಮಾಜವನ್ನು ಸೇರಲು ಬಯಸಿದರೂ ಅವರಿಗೂ ಹಿಂದೂ ದೀಕ್ಷೆಕೊಟ್ಟು ಯಜ್ಞೋಪವೀತ ಬ್ರಹ್ಮೋಪದೇಶವನ್ನು ಕೊಡಬೇಕು.

ಹೀಗೆ ದೀಕ್ಷೆ ಪಡೆದ ಜನವೆಲ್ಲ ಹಿಂದೂ ಸಮಾಜದಲ್ಲಿ ಸೇರಿರುವ ಎಲ್ಲ ಜನ ಎಲ್ಲ ರೀತಿಯಲ್ಲಿಯೂ ತಮಗೆ ಸಮ ಎಂದು ತಿಳಿಯತಕ್ಕದ್ದು.

ಬ್ರಹ್ಮೋಪದೇಶ ಪಡೆದವರೆಲ್ಲರೂ ಸದಾಚಾರವಂತರಾಗಿರಬೇಕು. ಅಹಿಂಸೆ ಸತ್ಯ ಅಸ್ತೇಯ, ಅಪರಿಗ್ರಹ, ಬ್ರಹ್ಮಚರ್ಯ, ಶುದ್ಧ ಹಿಂದೂತ್ವದ ಲಕ್ಷಣಗಳು.

ಅಹಿಂಸೆಯ ಮುಖ್ಯ ಲಕ್ಷಣ ಮಾಂಸಾಹಾರವನ್ನು ಬಿಡುವುದು. ಹಿಂದುಗಳಿಗೆ ಇದು ಧ್ಯೇಯ ಆಗಬೇಕು. ನಿಷ್ಠುರವಾಗಿ ಈ ನಿಯಮವನ್ನು ಪಾಲಿಸಲು ಆಗುವುದಿಲ್ಲ ಎಂದರೆ ಮಾಂಸಾಹಾರವನ್ನು ತೆಗೆದುಕೊಳ್ಳಬಹದು. ಇರುತ್ತ ಅದನ್ನು ಕಡಿಮೆ ಮಾಡಿದರೆ ಅಷ್ಟು ಒಳ್ಳೆಯದು ಮಾಂಸವನ್ನು ದೇವರಿಗೆ ಒಪ್ಪಿಸಬಾರದು. ಮನೆಯಲ್ಲಿ ಅಡಿಗೆ ಮಾಡಬಾರದು.

ಸತ್ಯವನ್ನು ಸದಾ ಅನುಷ್ಠಾನ ಮಾಡಬೇಕು

ಗಳಿಕೆಯಲ್ಲಿ ಅವಶ್ಯಕ ಆದಷ್ಟನ್ನು ಉಳಿಸಿಕೊಂಡು, ಉಳಿದದ್ದನ್ನು ದೇವರಿಗೆ ಒಪ್ಪಿಸಬೇಕು. ಇದು ಅಸ್ತೇಯ. ದೇವರಿಗೆ ಎಂದರೆ ಸಮಾಜಕ್ಕೆ, ಹತ್ತು ಜನರ ಉಪಯೋಗಕ್ಕೆ ಇದು ಸಹ ಅಹಿಂಸೆಯಂತೆ ನಿಷ್ಠುರವಾಗಿ ಪಾಲಿಸಲು ಕಷ್ಟವಾದ ನಿಯಮ ಎಂದರೆ ಇದನ್ನು ಸಂಪೂರ್ಣವಾಗಿ ಅಲ್ಲದಿದ್ದರೂ ತಕ್ಕಷ್ಟು ಹಾಳತದಲ್ಲಿ ಮಾಡಲೇಬೇಕು. ಆಸ್ತಿ ಹೆಚ್ಚಿದಷ್ಟು ದಾನ ಹೆಚ್ಚಬೇಕು. ಇದು ನಮ್ಮಲ್ಲಿ ಹಿಂದಿನಿಂದ ನಡೆದುಬಂದಿರುವ ಕ್ರಮ. ಇದನ್ನು ನಾವು ಸ್ವಲ್ಪ ಹಣವೊಂದಿಗರಾದರೂ ಕೂಡ ಪುನಃ ಒಂದು ನಿಯಮವಾಗಿ ಮಾಡಬೇಕು.

ತಕ್ಕಷ್ಟು ಉಳ್ಳವನು ಇರುವುದನ್ನೇ ಕೊಡಬೇಕು ಎಂದಮೇಲೆ ಹೆಚ್ಚಿನ ವರಮಾನಕ್ಕೆ ಕೈಚಾಚಬಾರದು. ಇದು ಅಪರಿಗ್ರಹ. ಇದು ನಮ್ಮಲ್ಲಿ ಈ

ಮುನ್ನ ಮಾಡಿಕೆಯಲ್ಲಿದ್ದ ನಿಯಮ. ತಿರುಪತಿ ಯಾತ್ರೆಗೆ ಹೋದ ಜನ ಛತ್ರದಲ್ಲಿ ಯಾತ್ರಿಕರಿಗೆಂದು ಅನ್ನ ಹಾಕುವ ಏರ್ಪಾಡು ಇದ್ದರೂ ತಾವು ಅಡಿಗೆ ಮಾಡಿಕೊಂಡು ಊಟಮಾಡುತ್ತಿದ್ದರು. ಛತ್ರದ ಅನ್ನವನ್ನು ತಿಂದರೆ ಯಾತ್ರೆಯ ಫಲ ಕಡಿಮೆಯಾಗುತ್ತದ ಎಂದು ಒಂದು ಕಲ್ಪನೆ ಇದನ್ನು ಜೀವನನಿಯಮ ಎಂದು ಎಲ್ಲರೂ ಒಪ್ಪಬಹುದು ಒಪ್ಪುವುದು ಕಷ್ಟವಲ್ಲ.

ಬ್ರಹ್ಮಚರ್ಯ ಪ್ರಾಯ ಬಂದು ಮದುವೆ ಆಗುವವರೆಗೆ ತರುಣ ತನ್ನ ದೇಹವನ್ನು ನಿಷ್ಠೆಯಿಂದ ಶುಚಿಯಾಗಿ ಇರಿಸಿಕೊಳ್ಳಬೇಕು. ಮದುವೆ ಆದ ಮೇಲೆ ಸಂಸಾರಿ ತನ್ನ ಹೆಂಡತಿ ಹೊರತು ಬೇರೆ ಹೆಣ್ಣಿನ ಸಹವಾಸವನ್ನು ಮಾಡುವುದು ಕೂಡದು. ಯಾವನೂ ತನ್ನ ಹೆಂಡತಿಯ ಕೂಡ ಸಹ ಇಂದ್ರಿಯ ಸುಖ ಒಂದು ಲಾಲನೆ ಎಂಬಂತೆ ಸಂಭೋಗವನ್ನು ಅತಿಮಾಡಬಾರದು. ಸಂಪ್ರದಾಯದಲ್ಲಿ ಇಂಥ ತಿಥಿಗಳಲ್ಲಿ ಇಂಥ ವಾರಗಳಲ್ಲಿ ಸಂಭೋಗ ಬೇಡ ಎಂದು ಒಂದು ನಿಷೇಧ ಇತ್ತು ಎಲ್ಲರೂ ಎಲ್ಲ ಹೊತ್ತೂ ಈ ನಿರ್ಬಂಧಗಳನ್ನು ಒಪ್ಪಿ ನಡೆದರು ಎನ್ನುವಂತಿಲ್ಲ ಆದರೂ ಒಳ್ಳೆಯದಲ್ಲ ಎನ್ನುವ ದಿನಗಳಲ್ಲಿ ಸಾಮಾನ್ಯ ವಾಗಿ ಸಹವಾಸ ಮಾಡುತ್ತಿರಲಿಲ್ಲ. ಇದರಿಂದ ದೇಹಕ್ಕೆ ಶಕ್ತಿ ತಕ್ಕಷ್ಟು ಉಳಿದು ಸಂತಾನವೂ ತಕ್ಕಷ್ಟು ಮಿತ ಆಗುತ್ತಿತ್ತು ಸ್ತ್ರೀ ಪುರುಷರಿಬ್ಬರ ಆರೋಗ್ಯವೂ ತಕ್ಕಷ್ಟು ಚೆನ್ನಾಗಿರುತ್ತಿತ್ತು ಸಾಮಾನ್ಯವಾಗಿ ದಂಪತಿಗಳು ತಕ್ಕಷ್ಟು ಕಾಲ ಜೊತೆಯಾಗಿ ಬಾಳುತ್ತಿದ್ದರು ಆಯುರ್ವೇದದಲ್ಲಿ, ಗಂಡಾದವನಿಗೆ ಹಸಿವನ್ನು ಉಳಿಸಿಕೊಳ್ಳುವುದು ಶಕ್ತಿಗೆ ಮೂಲ. ಶುಕ್ರವನ್ನು ಉಳಿಸಿಕೊಳ್ಳುವುದು ಆಯುಸ್ಸಿಗೆ ಮೂಲ, ಎಂದು ಹೇಳಿದೆ ದೇಹದ ಬಲ ಬಹುಕಾಲ ಉಳಿಯಲಿ ಎನ್ನುವನೂ, ಆಯುಸ್ಸು ದೀರ್ಘವಾಗಿರಲಿ ಎನ್ನುವವನೂ ಇಂದ್ರಿಯ ನಿಗ್ರಹ ವನ್ನು ಉಪಾಸನೆ ಮಾಡಬೇಕು

ಇದು ಸದಾಚಾರ ಹಿಂದೂ ದೀಕ್ಷೆಯನ್ನು ಪಡೆದ ಮಕ್ಕಳಿಗೆಲ್ಲ ಇದು ಜೀವನನಿಯಮ ಆಗಬೇಕು.

ಜಾತಿಭೇದ ಬೇಡವೆಂದಮೇಲೆ ಸಹಪಂಕ್ತಿ ಭೋಜನ, ಕೊಡುಕೊಳೆ, ಇವುಗಳಲ್ಲಿ ಯಾವ ಆತಂಕವೂ ಇಲ್ಲ ಸಾರ್ವಜನಿಕ ಭೋಜನದಲ್ಲಿ ವರ್ಣ ಭೇದದ ಕಲ್ಪನೆ ಇಲ್ಲದೆ ಎಲ್ಲರೂ ಜೊತೆಯಾಗಿ ಕುಳಿತು ಊಟ ಮಾಡಬಹುದು.

ಇಷ್ಟೇ. ಸಾರ್ವಜನಿಕ ಭೋಜನದಲ್ಲಿ ಎಲ್ಲರಿಗೂ ಸರಿಯೆನಿಸುವ ಆಹಾರ ಕ್ರ ಇರಬೇಕು, ಎಂದರೆ ಮಾಂಸಾಹಾರ ಬೇಡ.

ಹೆಣ್ಣು ಗಂಡು ಪರಸ್ಪರ ಒಲಿದವರು ಜಾತಿಯ ಅಡ್ಡಿ ಇಲ್ಲದೆ ಮದುವೆ ಹುದು

ಇನ್ನು ಮುಂದೆ ತಂದೆ ತಾಯಿ ಬಂಧುಗಳು ಏರ್ಪಡಿಸುವ ಮದುವೆಗಳಿಗೆ ಇಲ್ಲ. ಆದ್ದರಿಂದ ಬೇರೆ ಜನ ಒಂದು ಹುಡುಗಿಯನ್ನು ತಂದು ಒಬ್ಬ ಗನಿಗೆ ಕೊಟ್ಟು ಮದುವೆ ಮಾಡುವ ಕ್ರಮ ಇರುವುದಿಲ್ಲ.

ದೇವಾಲಯಗಳಲ್ಲಿ ಬ್ರಾಹ್ಮಣರು ಮಾತ್ರ ಅರ್ಚಕರಾಗಿರಬಹುದು ವ ಈಗಿನ ನಿಯಮ ತಪ್ಪು ಎಂದು ಹಿಂದೂಗಳಲ್ಲಿ ಒಂದು ಅಭಿಪ್ರಾಯ ನಿಯಮವನ್ನು ಕುರಿತ ಈ ಕಲ್ಪನೆ ಸರಿ ಅಲ್ಲ ಅರ್ಚಕರು ಕೆಲವುವೇಳೆ ಜಾತಿಯವರಾಗಿ ಇರುವುದುಂಟು. ಜೊತೆಗೆ ಅರ್ಚಕರ ಜಾತಿ ಮೇಲಿನ ಎನ್ನುವ ಕಲ್ಪನೆ ತಪ್ಪು. ಉತ್ತರ ದೇಶದಲ್ಲಿಯ ಕ್ರಮದ ವಿಷಯ ತಿಳಿಯದು ದಕ್ಷಿಣ ದೇಶದಲ್ಲಿ ದೇವಾಲಯಗಳ ಅರ್ಚಕರು ಒಂದಲ್ಲ ಮ ಆಗಮದಂತೆ ನೇಮನಪಡೆದಿರುವವರು ಇವರು ಬೇರೆ ಬೇರೆ ಯದಾಯಗಳು, ದಿಟ. ಇರುತ್ತ, ಇವರನ್ನು ಬ್ರಾಹ್ಮಣ ಸಮಾಜ ಕಡಮೆ ಟ್ಟಿದ ಜನ ಎಂದು ಭಾವಿಸುತ್ತದೆ ಇದು ಹೇಗೇ ಆದರೂ ಅರ್ಚನೆ ಪೂಜೆ ಂತಾದ ಕೆಲಸವನ್ನು ಮಾಡಬೇಕೆಂದರೆ ಅರ್ಚಕ ಅವುಗಳ ಕ್ರಮವನ್ನು ತಿರಬೇಕು. ಕ್ರಮವನ್ನು ಕಲಿತವನು ನಡತೆಯಲ್ಲಿ ಯೋಗ್ಯನಾಗಿರಬೇಕು. ಮ್ಮ ಜಾತಿಯವನಾದರ ಸರಿ, ಆಚಾರ ಗೀಚಾರ ಬೇಕಿಲ್ಲ, ಎನ್ನುವಂತಿಲ್ಲ. ವನೋ ಒಬ್ಬ ಹೇಗೋ ದೇವರಪೂಜೆಮಾಡಿ ಎಂಥದೋ ನೀರನ್ನು ದೇವರ ರ್ಥ ಎಂದು ಕೊಟ್ಟರೆ ಅದು ಪೂಜೆ ಆಗುತ್ತದೆಯೆ, ತೀರ್ಥ ಆಗುತ್ತದೆಯೆ ? ವಿಷಯದಲ್ಲಿ ಈಗ ವಾಡಿಕೆಯಲ್ಲಿರುವ ನಿಯಮವನ್ನು ಪಾಲಿಸದೆ ಬಿಡು ತಿಲ್ಲ. ಬಿಟ್ಟರೆ ದೇವಾಲಯ ದೇವಾಲಯ ಆಗಿ ಉಳಿಯುವುದಿಲ್ಲ, ಪೂಜೆ ಜೆ ಆಗುವುದಿಲ್ಲ; ತೀರ್ಥ ತೀರ್ಥ ಆಗುವುದಿಲ್ಲ.

ಅರ್ಚಕ ಬ್ರಾಹ್ಮಣನಾಗಿರಲಿ, ಇಲ್ಲವೇ ಪೂರ್ವದ ವಾಡಿಕೆಯಸಮುದಾಯ ನಾಗಿರಲಿ, ಎನ್ನುವುದು ಅರ್ಚಕನ ದೊಡ್ಡಸ್ತಿಕೆಗಾಗಿ ಮಾಡಿರುವ ನಿಯಮ . ದೇವರಪೂಜ ಶಾಸ್ತ್ರೋಕ್ತವಾಗಿ ನಡೆಯಲೆನ್ನುವುದೇ ಉದ್ದೇಶ.

ಈ ಮುಖ್ಯ ತತ್ತ್ವಗಳನ್ನು ಅಂಗೀಕರಿಸಿದರೆ ನಮ್ಮ ಸಮಾಜಜೀವನ ಬಹುಮಟ್ಟಿಗೆ ಚೆನ್ನವಾಗುತ್ತದೆ ಸಾರ್ವಜನಿಕ ಭೋಜನದಲ್ಲಿ ಎಲ್ಲರೂ ಸಮ ಎಂದು ಸೇರಿ ಕುಳಿತುಕೊಳ್ಳುವ ರೀತಿಯಲ್ಲಿ, ಜೊತೆಯ ಮನುಷ್ಯರು ಅತಿಥಿ ಗಳಾಗಿ ಮನೆಗೆ ಬಂದಾಗ ಅವರನ್ನು ಕಡಮೆ ಜಾತಿಯವರು ಎಂದು ಬೇರೆಯಾಗಿ ಕಾಣದೆ ಜೊತೆ ಎಂದುಕೊಂಡರೆ ಯಾವ ಅಸಮಾಧಾನಕ್ಕೂ ಕಾರಣ ಉಳಿಯು ವುದಿಲ್ಲ. ಇಷ್ಟು ಒಡನೆಯೇ ಸಿದ್ಧಿಸಬಹುದಾದ ಏರ್ಪಾಡು. ಇಷ್ಟನ್ನು ಸಮಾಜ ಒಡನೆಯೇ ಅನುಷ್ಠಾನಕ್ಕೆ ತಂದರೆ ಕಾಲಕ್ರಮದಲ್ಲಿ ನಮ್ಮ ಸಮಾಜ ವೇದ ಬಯಸಿದ 'ಸಂಗಚ್ಛಧ್ವಂ ಸಮಾನೀವ ಆಕೂತಿಃ' ಎಂಬ ಆದರ್ಶ ಮನೋಧರ್ಮದ ಸಮಾಜ ಆಗುತ್ತದೆ.

ಇಷ್ಟನ್ನು ಅನುಷ್ಠಾನ ಮಾಡುವುದು ಕಷ್ಟವಲ್ಲ. ಈಗಾಗಲೇ ಆಧುನಿಕ ಮನೋಧರ್ಮದ ನಮ್ಮ ಮನೆಗಳಲ್ಲಿ ಗೆಳೆಯರಾದವರು ಜಾತಿಗಳ ಯೋಚನೆ ಇಲ್ಲದೆ ಜೊತೆಯಲ್ಲಿ ಕುಳಿತು ಊಟ ಮಾಡುತ್ತಿದ್ದಾರೆ.

ನೂರು ವರ್ಷಗಳ ಹಿಂದೆ ಇಂಗ್ಲೆಂಡಿಗೆ ಹೋಗಿಬಂದ ಜನ ಪ್ರಾಯಶ್ಚಿತ್ತ ಮಾಡಿಸಿಕೊಳ್ಳದ ಸಮಾಜದಲ್ಲಿ ಸೇರುವಂತಿರಲಿಲ್ಲ. ಹದಿನಾರು ವರುಷದ ಹುಡುಗಿ ಮದುವೆ ಆಗದೆ ಇರುತ್ತಿರಲಿಲ್ಲ ವಿಧವಾ ವಿವಾಹ ಪಾಪ ಎಂಬ ತಿಳುವಳಿಕೆ ಇತ್ತು ವಿಧವೆ ಮುಂಡನ ಮಾಡಿಸಿಕೊಳ್ಳದಿರುವುದು ಅಕ್ಷಮ್ಯ ಅಪರಾಧ ಆಗಿತ್ತು ಈಗ ಇದೆಲ್ಲ ಮಾರ್ಪಟ್ಟಿದೆ ಇತರ ವಿಷಯಗಳಲ್ಲಿ ಕಠಿಣವಾಗಿ ಆಚಾರ ನಡೆಸುವ ವೈದಿಕ ಮನೆತನಗಳಲ್ಲಿ ಕೂಡ ಈಗ ಹೆಣ್ಮಕ್ಕಳು ಮದುವೆಯ ಕಾಲಕ್ಕೆ ಇಪ್ಪತ್ತು ವರ್ಷದ ಪ್ರೌಢ ಬಾಲೆಯರಾಗಿರುತ್ತಾರೆ ದುರ್ದೈವದಿಂದ ವಿಧವೆಯಾದ ಮನೆಯ ಮಗಳು ಹರಳನ್ನು ಇಳಿಸದೆ ಎಲ್ಲರಂತೆ ನಡೆಯುತ್ತಾಳೆ ಇದಿಷ್ಟೂ ಯಾವ ಪ್ರಚಾರವೂ ಇಲ್ಲದೆ ತಾನಾಗಿ ಬಂದಿರುವ ಮಾರ್ಪಾಡು, ಐವತ್ತು ವರುಷಗಳ ಹಿಂದೆ ಬಲ್ಲವರೆಂಬ ಪೂರ್ವಿಕರೆಲ್ಲ ಅನಾಚಾರ ಎಂದೇ ಖಂಡಿಸಿದ ಅಬ್ರಾಹ್ಮಣ್ಯ ವರ್ತನೆ ಪರಿಸ್ಥಿತಿ ಬೇರೆಯಾಗಿ ಬೇರೆ ದಾರಿಕಾಣದೆ ಅಂಥ ಜನ ಈಗ ಇದನ್ನೆಲ್ಲಾ ಒಪ್ಪಿಕೊಂಡಿದ್ದಾರೆ. ಮಾರ್ಪಾಡು ಎಂದಮೇಲೆ ಮೊದಲಲ್ಲಿ ಬೇಡ ಎನ್ನಿಸುವುದೇ ದಿಟ. ದಿನಕಳೆದಂತೆ ಮಾರ್ಪಾಡೇ ವಾಡಿಕೆ ಆಗುತ್ತದೆ, ಸಮಾಜ ಸುಧಾರಣೆಯನ್ನು ಅಂಗೀಕರಿಸುತ್ತದೆ

## ಸಾಮಾನ್ಯ ಭಾವನೆಗಳ ಶೋಧನ

ಬಹು ಉಚ್ಚವಾದ ಈ ಪರಿಷ್ಕರಣಗಳೊಂದಿಗೆ ನಮ್ಮ ಜನರಲ್ಲಿ ಸಾಮಾನ್ಯ ಗ್ರಹಿಕೆಯಲ್ಲಿರುವ ಅನೇಕ ತಪ್ಪು ತಿಳುವಳಿಕೆಗಳನ್ನು ತಿದ್ದುವುದು ನಮ್ಮ ಧರ್ಮದಲ್ಲಿ ಈಗ ನಡೆಯಬೇಕಾಗಿರುವ ಬಹು ಮುಖ್ಯವಾದ ಒಂದು ಕಾರ್ಯ

ದೇವರನ್ನು ಕುರಿತ ಹಲವು ತಪ್ಪು ತಿಳುವಳಿಕೆಗಳನ್ನು ಸರಿಪಡಿಸಬೇಕು ಎಂದು ಈ ಮುನ್ನ ಹೇಳಿದ್ದಾಗಿದೆ. ಆ ಸಂದರ್ಭದಲ್ಲಿಯೇ ನಾವು ತಿದ್ದಿಕೊಳ್ಳ ಬೇಕಾಗಿರುವ ಒಂದು ಮನೋಭಾವ ನಮ್ಮ ದೇವತೆಗಳ ಸ್ವರೂಪವನ್ನು ಕುರಿತದ್ದು ದೇವರು ಭಕ್ತರನ್ನು ಸಲಹುವ ಸಲುವಾಗಿ ಪಾಪ ಕರ್ಮವನ್ನೂ ಸಹ ಮಾಡುತ್ತಾನೆ ಎಂದು ಹೇಳುವ ಕಥೆಗಳನ್ನು ತೊರೆಯಬೇಕೆಂದು ಹೇಳಿ ದ್ದಾಗಿದೆ. ಇಷ್ಟೇ ದಿಟನಾಗಿ ನಾವು ತೊರೆಯಬೇಕಾಗಿರುವ ಕಥೆಗಳು, ವಿಷ್ಣು ತನ್ನ ತಂಗಿ ಕಾಳಿಕಾದೇವಿಯನ್ನು ಕುರೂಪಿ ಎಂದ ತನ್ನ ಪತ್ನಿ ಲಕ್ಷ್ಮಿಯನ್ನು ಶಪಿಸಿ ಪಿಶಾಚಿಯನ್ನಾಗಿ ಮಾಡಿದನು ಎನ್ನುವ ಕಥೆ, ಶಿವ ಪಾರ್ವತಿಯ ಸ್ನಾನಮಂದಿರಕ್ಕೆ ಹೋಗುವುದನ್ನು ತಡೆದ ಗಣಪತಿಯ ತಲೆಯನ್ನು ಕಡಿದನು ಎನ್ನುವ ಕಥೆ, ತಮ್ಮಿಬ್ಬರಲ್ಲಿ ತಾನೆ ಚೆಲುವೆ ಎಂದು ಹೇಳಿದ ಪತ್ನಿ ಗೌರಿ ಯನ್ನು ಶಿವ ಚೂರುಚೂರಾಗಿ ಕಡಿದು ಚೂರುಗಳನ್ನು ಹತ್ತು ದಿಕ್ಕಿಗೆ ಎಸೆದ ಎನ್ನುವ ಕಥೆ; ಇಂಥ ಕಥೆಗಳನ್ನು ಕ್ಷೇತ್ರಸೃಷ್ಟಿಗಳೆಂದು ಸಂಪೂರ್ಣವಾಗಿ ನಿರಾಕರಿಸಬೇಕು. ದೈವ ಎನ್ನುವ ಭಾವವನ್ನು ತೀರಾ ಅರಿಯದ ಶುದ್ಧ ಅವಿವೇಕ ಮಾತ್ರ ಇಂಥ ಅನಿಷ್ಟ ಭಾವನೆಗಳಿಗೆ ರೂಪುಕೊಡಲು ಒಪ್ಪೀತು. ಸಮಸ್ತ ಸದ್ಗುಣಗಳ ಮೂಲಸ್ಥಾನವಾದ ದೈವವನ್ನು ಹೀಗೆ ಕಲ್ಪಿಸುವುದು ಆಸುರೀ ಬುದ್ಧಿ. ಈ ವಿಷಯದಲ್ಲಿ ಸಂದೇಹವಿಲ್ಲ

ಇಷ್ಟು ಆಸುರಿಯಲ್ಲ, ಇದ್ದೂ ಇಷ್ಟೇ ತಪ್ಪು ಬುದ್ಧಿ, ಸೃಷ್ಟಿಯಲ್ಲಿ ದೆವ್ವ ಇದೆ ಎನ್ನುವುದು ನನ್ನ ಅನುಭವದಲ್ಲೇ ದೆವ್ವ ಎಂಬ ಭಾವ ತಪ್ಪು ಎನ್ನುವುದು ಹಲವು ಬಾರಿ ಸ್ಪಷ್ಟವಾದದ್ದನ್ನು ನನ್ನ 'ಭಾವ' ಪುಸ್ತಕದಲ್ಲಿ ಹೇಳಿದ್ದೇನೆ ದೆವ್ವ ಎನ್ನುವುದು ಕೆಲವರಿಗೆ ಕಾಣುವ ದುಷ್ಟರೂಪಗಳ ಹೆಸರು, ಮನಸ್ಸಿಗೆ ಕಾಣುವುದರಿಂದ ಇವು ಕಣ್ಣಿಗೆ ಕಾಣುತ್ತವೆ, ಇವು ದಿಟವಲ್ಲ, ಮನಸ್ಸಿನ ಕಲ್ಪನೆಗಳು. ಸಾಮಾನ್ಯವಾಗಿ ದೆವ್ವವನ್ನು ಕಂಡೆವು

ಎಂದು ಜನ ತಿಳಿದ ಸಂದರ್ಭದಲ್ಲೆಲ್ಲಾ ಕಂಡೆನೆಂದ ವ್ಯವಹಾರದ ತತ್ತ್ವ ಬಿಡಿಸಿದರೆ ಒಂದು ಸಾಮಾನ್ಯ ವ್ಯವಹಾರವಾಗಿ ಇರುವುದು ಕಾಣುತ್ತದೆ. ಬಿಡಿಸದೆ ಹಾಗೆಯೇ ಬಿಟ್ಟರೆ, ವಿವರಿಸಲು ಬಾರದ ತೊಡಕಾಗಿ ಉಳಿಯುತ್ತದೆ, ದೆವ್ವ ಎಂದು ಹೆಸರನ್ನು ಪಡೆಯುತ್ತದೆ.

ನಾವೆಲ್ಲ ಈ ಮಾತನ್ನು ಮನಸ್ಸಿಗ ನಿಶ್ಚಯ ಮಾಡಿಕೊಳ್ಳಬೇಕು "ನಾವು ಕಾಣುವುದೆಲ್ಲ ದೇವರೇ ದೆವ್ವ ಎನ್ನುವುದು ಇಲ್ಲ, ನಮ್ಮ ಕಲ್ಪನೆಯ ತಪ್ಪಿನಿಂದ ದೆವ್ವ ಎನ್ನುವ ವಿಕಾರ ರೂಪ ಕಂಡಂತೆ ಆಗುತ್ತದ ಅದು ದಿಟದ ತತ್ತ್ವ ಅಲ್ಲ"

ಬೆಳೆದ ಬುದ್ಧಿಯ ಎಲ್ಲರೂ ಇದನ್ನು ನಿಶ್ಚಯ ಮಾಡಿಕೊಂಡು ತಾವು ಧೈರ್ಯದಿಂದ ನಡೆಯಬೇಕು ಎಳೆತನದಿಂದ ಮಕ್ಕಳಿಗೆ ಇದನ್ನು ಹೇಳಿಕೊಡಬೇಕು

ಚಿಕ್ಕಂದು ನಮಗೆ ಹಿರಿಯರು ಹೇಳಿದ್ದುಂಟು. "ನಿನ್ನ ಜನಿವಾರದ ಬ್ರಹ್ಮಗಂಟನ್ನು ಭದ್ರವಾಗಿ ಹಿಡಿದು ದಿಟ್ಟಿಸಿನೋಡು, ದೆವ್ವ ನಿನ್ನ ತಂಟೆಗೆ ಬರುವುದಿಲ್ಲ, ಓಟ ಕೀಳುತ್ತದೆ" ಉಪನಯನವಾದ ಬಳಿಕ ನನಗೆ ಈ ಮಾತು ತಿಳಿಯಿತು. ಇದನ್ನು ಯಾರು ಹೇಳಿದರು, ನನಗೆ ಜ್ಞಾಪಕವಿಲ್ಲ. ಇದನ್ನು ಆಷ್ಟಾಗಿ ನಂಬದೆಯೇ ನಾನು ದೆವ್ವ ಇಲ್ಲ ಎಂಬ ಅರ್ಥದಲ್ಲಿ ಹಲವಾರು ಸಲ ನಡೆದುಕೊಂಡಿದೇನೆ, ದೆವ್ವ ಇಲ್ಲ ಎನ್ನುವುದು ದಿಟ ಎಂದು ಕಂಡಿದ್ದೇನೆ. ನನ್ನ ಗೆಳೆಯರು ಹಲವರ ಅನುಭವವೂ ಹೀಗೆಯೇ ಇದೆ.

ಇಂಥ ತಿಳುವಳಿಕೆಯನ್ನು ಪಡೆಯದೆ ಚಿಕ್ಕಂದು ಭಯದಿಂದ ಬೆಳೆದ ಮಕ್ಕಳು ಎಷ್ಟು ವಯಸ್ಸಾದರೂ ದೆವ್ವದ ಭಯದಿಂದ ಬಿಡಿಸಿಕೊಳ್ಳಲಾರದೆ ತುಂಬ ಕಷ್ಟಪಡುತ್ತಾರೆ ಗೌರವನೀಯ ಶ್ರೀನಿವಾಸಶಾಸ್ತ್ರಿ ಮಹನೀಯರು ತಮ್ಮ ಜೀವನದ ವಿಷಯವನ್ನು ಬರೆಯುತ್ತ ಚಿಕ್ಕಂದು ಅಭ್ಯಾಸವಾದ ಕತ್ತಲ ಭಯ ಮುಪ್ಪಿನ ದಿನದಲ್ಲೂ ನನ್ನನ್ನು ತೀರ ಬಿಟ್ಟಿಲ್ಲ ಎಂದು ಬರೆದಿದ್ದಾರೆ. ಭಯಕ್ಕೆ ಕಾರಣ ಇಲ್ಲ ಎಂದು ತಿಳಿದರೂ ಭಯದ ಪರಿಣಾಮ ಉಳಿದು ಬಿಡುತ್ತದೆ. ಇದು ಜೀವನವನ್ನು ಕೆಡಿಸುತ್ತದೆ ಹೀಗಾಗದ ಇರಲು ಒಂದೇ ಕ್ರಮ, ದೆವ್ವ ಎನ್ನುವುದು ಸುಳ್ಳು ಎಂದು ಎಳೆಯ ವಯಸ್ಸಿನಿಂದ ಅಭ್ಯಾಸ ಮಾಡುವುದು.

ಹೀಗಾದಮೇಲೂ ಪಾಡಿಕೆಯಿಂದ ಜೀವ ಅಳುಕುತ್ತದೆ 'ಮಲೆನಾಡಿನ ಪಿಶಾಚ' ಎಂದು ನಾನು ಒಂದು ಕಥೆಯನ್ನು ಬರೆದಿದ್ದೇನೆ ಅದು ಒಟ್ಟಿನಲ್ಲಿ ನನ್ನ ಹಿರಿಯ ಮಿತ್ರರಾದ ಶ್ರೀ ನವರತ್ನರಾಮರಾಯರು ನನಗೆ ಒಂದು ರಾತ್ರಿ ಹೇಳಿದ ಕಥೆ ದೆವ್ವ ಇಲ್ಲ ಎಂದು ಬಲ್ಲವನಾದರೂ ನನಗೆ ಆ ರಾತ್ರಿ ನಿದ್ದೆ ಕೆಟ್ಟಿತು. ಈ ಕಥೆಯನ್ನು ನಾನು ಮಡಿಕೇರಿ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ನಮ್ಮ ಬಿಡಾರದಲ್ಲಿ ಮಲಗಿದ್ದ ಜನರಿಗೆ ಹೇಳಿದೆನು ಎಲ್ಲರು, "ಕಥೆ ಚೆನ್ನಾಗಿದೆ , ಆದರೆ ಇದನ್ನು ನೀವು ರಾತ್ರಿ ಹೇಳಬಾರದಾಗಿತ್ತು," ಎಂದರು ಶ್ರೀ ಎ. ಎನ್ ಮೂರ್ತಿರಾಯರು ಇದೇ ಕಥೆಯನ್ನು ಎಲ್ವಾಲದ ಬಂಗಲೆಯಲ್ಲಿ ನೆರೆದಿದ್ದ ಮಿತ್ರರಿಗೆ ಒಂದು ರಾತ್ರಿ ಹೇಳಿದರಂತೆ ಪರಿಣಾಮ ಆ ರಾತ್ರಿ ಕಥೆ ಕೇಳಿದ ಯಾರೂ ಬೆಳಗಾಗುವವರೆಗೆ ಕೋಣೆಯಿಂದ ಹೊರಕ್ಕೆ ಹೋಗಲಿಲ್ಲ

ದೆವ್ವನಷ್ಟೇ ಸುಳ್ಳು ಪ್ರಾರಬ್ಧವನ್ನು ಕುರಿತ ಕಥೆಗಳು ಪ್ರಾರಬ್ಧ ಎನ್ನುವುದು ಹಿಂದಿನ ಜನ್ಮದಿಂದ ಅನುಸರಿಸಿ ಬಂದಿರುವ ಕೆಟ್ಟ ನೆನಪು. ನಮ್ಮ ಧರ್ಮದಲ್ಲಿ ಜೀವ ಹಲವು ಜನ್ಮಗಳನ್ನು ಎತ್ತುತ್ತದೆ ಎಂಬ ನಂಬಿಕೆ ಇದ. ಇದು ಸರಿಯಾದ ನಂಬಿಕೆ ಎಂದು ಖಂಡಿತವಾಗಿ ಹೇಳುವಂತಿಲ್ಲ. ಇರುತ್ತ, ಸಾಧ್ಯ ಸಂಭವನೀಯ ಎಂದು ಹೇಳಲು ಸಾಧಕ ಆಗುವ ಸಂಗತಿಗಳೂ ಇವೆ. ಹೀಗಿದ್ದೂ ಪ್ರಾರಬ್ಧದಿಂದ ಕಷ್ಟಪಡುವ ಜನ ತಿಳಿದಿರುವಷ್ಟು ಖಚಿತವಾಗಿ ನೆನಪು ಉಳಿದಿದೆ ಎನ್ನುವುದು ಸರಿ ಎಂದು ಕಾಣುವುದಿಲ್ಲ ಸ್ವಲ್ಪವೇನೋ ನೆನಪು ಇದೆ. ಅದು ಮಸಕಾಗಿ ಮಾರ್ಪಟ್ಟಿರುತ್ತದೆ. ಇದಕ್ಕೆ ನಮ್ಮ ಜನ ಮಾಡಿಸುತ್ತಿದ್ದ ಮಂತ್ರ ತಂತ್ರ ಕ್ರಮ ಸರಿಯಾದದ್ದೆಂದು ಹೇಳಲಾಗುವುದಿಲ್ಲ. ಬನ್ನೇರುಘಟ್ಟದ ಚಂಪಕಧಾಮಸ್ವಾಮಿ ಕ್ಷೇತ್ರದ ಪುಷ್ಕರಣಿಯಲ್ಲಿ ಸ್ನಾನಮಾಡಿ ದೇವರ ಸನ್ನಿಧಿಯಲ್ಲಿ ಪೂಜೆ ನಡೆಸಿದರೆ ದೆವ್ವ, ಪ್ರಾರಬ್ಧ, ಬಿಡುತ್ತದೆ ಎಂದು ಹಿಂದೆ ನಮ್ಮಲ್ಲಿ ನಂಬಿಕೆ ಇತ್ತು ಈಗ ಅಷ್ಟಾಗಿ ಈ ಮಾತು ಕೇಳುತ್ತಿಲ್ಲ. ಶ್ರೀರಂಗದ ಬಳಿಯ ಗುಣಶೇಖರ ಎಂಬ ಕ್ಷೇತ್ರದಲ್ಲಿ ಸ್ವಾಮಿ ಸನ್ನಿಧಿಯಲ್ಲಿ ಹೀಗೆ ಬುದ್ಧಿಕೆಟ್ಟ ಜನರು ಗುಣ ಹೊಂದುತ್ತಾರೆ ಎಂದು ಪ್ರತೀತಿ ಇದು ಸಾಧ್ಯ , ದೇವರು ನಮ್ಮನ್ನು ಕಾಪಾಡುತ್ತಾನೆ ಎಂದು ನಂಬಿ ಸಾನ್ನಿಧ್ಯಕ್ಕೆ ಹೋದರೆ ಗುಣ ಆದೀತು ಅದರ ಮುಖ್ಯ ಕಾರಣ ನಂಬಿಕೆ ಕ್ಷೇತ್ರದ ಮಹಿಮೆ ಈ ನಂಬಿಕೆಯನ್ನು ಮೂಡಿಸುವುದರಲ್ಲಿ ಇದೆ. ಕ್ರಿಸ್ತ ಗುರು ಒಮ್ಮೆ ತನ್ನನ್ನು

ಮುಟ್ಟಿ ಒಂದು ರೋಗದಿಂದ ಗುಣಹೊಂದಿದ ಹೆಣ್ಮಗಳಿಗೆ Thy faith has made thee whole ಎಂದು ಹೇಳಿದ ಸಂಗತಿಯನ್ನು ಈ ಮುನ್ನ ಗುರುತಿಸಿದೆ. ನಂಬಿಕೆ ಮುಖ್ಯ ಪಾಸ್ತಿಯ ನಮ್ಮ ಮನೆಯ ಪಕ್ಕದ ನಮ್ಮ ಬಂಧು ಹೆಣ್ಮಗಳ ಮನೋವಿಕಾರದ ಸ್ಥಿತಿಯಲ್ಲಿ ವಂಶದ ಗುರು ನರಸಿಂಹಾಚಾರ್ಯರು ಎದುರಿಗೆ ಬಂದರೆ ಆಕೆಯ ಮನಸ್ಸು ಸಮಾಧಾನಕ್ಕೆ ಬರುತ್ತಿತ್ತು ಇದು ನಾನೇ ಕಂಡ ಸಂಗತಿ. ಎಂದರೆ ಮನಸ್ಸಿನ ವಿಕಾರದಿಂದ ತೊಳಲುವ ಜೀವಕ್ಕೆ ದಕ್ಷ ಸತ್ವ ಬಂದು ಎದುರಿಗೆ ನಿಂತರೆ ವಿಕಾರ ಕೊನೆಯಾಗುತ್ತದೆ ಬಾಲ್ಯದಿಂದಲೂ, ದೈವ ಸದಾ ನನ್ನ ಜೊತೆಗಿದೆ, ನನ್ನನ್ನು ಕಾಪಾಡುತ್ತಿದೆ, ಎಂದು ಮಕ್ಕಳಿಗೆ ಪಾರ ಹೇಳಿ ದೃಢವಾದ ನಂಬಿಕೆಯನ್ನು ಬೆಳೆಸಿದರ ಇಂಥ ಮನೋವಿಕಾರಗಳು ಮೂಡುವ ಅಪಾಯ ಕಡಿಮೆ ಆಗುತ್ತದೆ

ಹಿಂದೂ ಧರ್ಮದಲ್ಲಿ ಮೂರು ಸಿದ್ಧಾಂತ ಇವೆ ಎಂದು ಹೇಳಿ ಆ ಮೂರರ ಅರ್ಥ ಜನಸಾಮಾನ್ಯಕ್ಕೆ ತಿಳಿಯಬೇಕಾದದ್ದು ಯಾವುದು ಎಂದು ವಿವರಿಸಿದೆ. ಅವುಗಳಲ್ಲಿ ದ್ವೈತಸಿದ್ಧಾಂತ ಜೀವನದಲ್ಲಿ ಎಲ್ಲ ಹೊತ್ತಿನಲ್ಲೂ ನಮ್ಮನ್ನು ಕಾಪಾಡಬಲ್ಲ ಸಿದ್ಧಾಂತ ಲೋಕದಲ್ಲಿ ಇರುವುದು ಎರಡೇ ತತ್ವ, ನಾನು, ನನ್ನ ದೇವರು. ಮನುಷ್ಯ ಇದನ್ನು ಜೀವನದ ಮುಖ್ಯ ಸೂತ್ರವಾಗಿ ಇಟ್ಟುಕೊಂಡರೆ ಸಾಧಿಸುವ ಸಮಾಧಾನ ಸಂತೋಷ ಶಕ್ತಿ ಎಂಥವು ಎನ್ನುವುದನ್ನು ಗ್ರಹಿಸುವುದು ಸಾಧ್ಯವಲ್ಲ ಎದುರಿಗೆ ಇರುವುದೆಲ್ಲಾ ದೇವರು ಎಂದವನು ಜೀವನದಲ್ಲಿ ಎದುರಿಗ ನಿಲ್ಲುವ ಒಂದೊಂದು ಪ್ರಾಣಿಯೂ ದೇವರೇ ಧರಿಸಿದ ಒಂದು ರೂಪ ಎಂದು ಗ್ರಹಿಸುತ್ತಾನೆ. ಅವನು ಯಾವ ಪ್ರಾಣಿಗೂ ಕೆಡಕನ್ನು ಮಾಡಲಾರ ಏತರದನ್ನೂ ದುಷ್ಟವಸ್ತು ಎಂದು ತಿಳಿಯಲಾರ. ಹುಲಿಯನ್ನೂ ಹಾವನ್ನೂ ಕಂಡರೆ, ಮನುಷ್ಯನಿಗೆ ಒಗ್ಗದ ರೂಪದ ದೈವಗಳು ಎಂದು ಕಾಣುತ್ತಾನೆ, ದೂರ ನಿಲ್ಲುತ್ತಾನೆ, ಹೊರತು ಇವು ತನ್ನ ಹಗೆಗಳು ಎಂದು ಕಾಣುವುದಿಲ್ಲ

ಕಷ್ಟ ಬಂದಾಗ ದೈವ ಎಂಬ ತತ್ವವನ್ನೇ ಮರೆಹೋಗುವುದು ಮನುಷ್ಯ ಸ್ವಭಾವಕ್ಕೆ ಸಹಜ ನಮ್ಮಲ್ಲಿ ಇದು ತುಂಬ ವಾಡಿಕೆ ನಮ್ಮ ತಾತ ಒಂದು ಸಂದರ್ಭದಲ್ಲಿ ತಿರುಪತಿದೇವಾಲಯದಲ್ಲಿ ಗರುಡೋತ್ಸವದ ಸೇವೆಯನ್ನು ನಡೆಸುತ್ತೇನೆಂದು ಮಾಡಿಕೊಂಡ ಹರಕೆಯನ್ನು ಅವರ ಮೊಮ್ಮಗ ನಾನು ಎಷ್ಟೋ

ವರ್ಷದ ಮೇಲೆ ಸಲ್ಲಿಸಿದೆ ಎಂಬುದನ್ನು ಹೇಳಿದ್ದೇನೆ. ನನ್ನ ವಿಷಯಕ್ಕೆ ನನ್ನ ತಾಯಿ ಹರಕೆ ಮಾಡಿಕೊಂಡು ನನ್ನನ್ನು ಬಾಲ್ಯದಲ್ಲಿ ಯಾಯಿವಾರಕ್ಕೆ ಸೇರಿಸಿದ್ದು, ತಾವು ಕೊನೆಯುವರೆಗೂ ತಮಿಳ ಶ್ರಾವಣ ಶನಿವಾರಗಳನ್ನು ಉಪವಾಸದ ದಿನಗಳಾಗಿ ಆಚರಿಸಿದ್ದು, ನಾನು ಅದೇ ಕಾಲದಿಂದ ಶನಿವಾರ ವನ್ನೆಲ್ಲ ಒಪ್ಪೊತ್ತಿನ ದಿನ ಎಂದು ನಡೆಸಿದ್ದನ್ನೆಲ್ಲ 'ಭಾವ' ಪುಸ್ತಕದಲ್ಲಿ ತಿಳಿಸಿದ್ದೇನೆ. ಹೀಗೆ ಹರಕೆ ಮಾಡಿಕೊಳ್ಳುವುದು ತಪ್ಪಲ್ಲ; ಏಕೆ, ಒಳ್ಳೆಯದೇ. "ನನ್ನ ದೇವರು ನನ್ನ ಒಡೆಯ, ನನ್ನನ್ನು ಕಾಯುತ್ತಿದ್ದಾನೆ ನಾನು ಅವನ ಕರುಣೆಯನ್ನು ನೆನೆಯಬೇಕು," ಎಂಬ ಮನಸ್ಸನ್ನು ಬೆಳೆಸುವ ಕಾರಣದಿಂದ ಕ್ರಮ ತುಂಬ ಸರಿಯಾದದ್ದು ಇಷ್ಟೇ ಹರಕೆಯನ್ನು ನಡೆಸದಿದ್ದರೆ ಪಾತಕ ಆಗುತ್ತದೆ, ದೇವರು ಕೋಪ ಮಾಡಿಕೊಳ್ಳುತ್ತಾರೆ, ಕೆಡಕು ಮಾಡುತ್ತಾರೆ, ಎಂಬ ಭಾವ ಇದರ ಜೊತೆಯಾಗಿ ಬೆಳೆಯುತ್ತದೆ, ಇದು ತಪ್ಪು ನಿನ್ನ ಮನಸ್ಸಿನ ಕ್ಷೇಮಕ್ಕಾಗಿ ನೀನು ವ್ರತವನ್ನು ಹಿಡಿ, ವ್ರತ ಎಂಬ ಕಾರಣದಿಂದ ತಪ್ಪದೆ ಅದನ್ನು ನಡೆಸು. ಇರುತ್ತ, ನಡೆಸದಿದ್ದರೆ ದೇವರು ಕೆಡಕು ಮಾಡು ತ್ತಾನೆ ಎಂದು ಯೋಚಿಸಿ ದೇವರನ್ನು ಎತ್ತರದಿಂದ ಕೆಳಕ್ಕೆ ಇಳಿಸಬೇಡ. ವ್ರತ ಎಂದು ಹಿಡಿದು ಬಿಡುವುದು ತಪ್ಪು. ವ್ರತ ಕೆಟ್ಟಿತು ಎನ್ನುವುದೇ ಶಿಕ್ಷೆ ವ್ರತವನ್ನು ಹಿಡಿ ಎಂದು ದೇವರು ನಿನ್ನನ್ನು ಕೇಳುತ್ತಿಲ್ಲ ಹಿಡಿದ ವ್ರತವನ್ನು ಬಿಟ್ಟೆ, ಬಿಟ್ಟೆ ಎಂದು ಕೋಪಿಸುವುದಿಲ್ಲ ಸರಿಯಾಗಿ ನಡೆದುಕೊಳ್ಳಬೇಕು ಎಂಬಷ್ಟೇ ಕಾರಣದಿಂದ ಮನುಷ್ಯ ಅದನ್ನು ನಡೆಸಬೇಕು.

ಅಸಾಧು ಆದ ಒಂದು ಹರಕೆಯನ್ನು ಮಾಡಿಕೊಂಡು ಮಗುವನ್ನು ಪಡೆದ ಅದನ್ನು ದೇವರ ತೇರು ಹರಿಯುವ ವೇಳೆ ತೇರಿನ ಗಾಲಿಯ ಅಡಿ ಯಲ್ಲಿಟ್ಟು ಮಗುವನ್ನು ಜೀವಂತವಾಗಿ ಮತ್ತೆ ಪಡೆದಳು ಎಂಬ ಭಾಗಾನಗರದ ತಾಯ ಕಥೆಯಂಥ ಕಥೆಯನ್ನು ಅಕ್ಷರಶಃ ದಿಟವೆಂದು ನಂಬುವುದು ಸರಿಯಲ್ಲ. ಇಂಥ ಹರಕೆಯನ್ನು ಯಾರೂ ಮಾಡಬಾರದು. ಕ್ಷುದ್ರ ಎಂದು ಹೆಸರು ಪಡೆದ ದೈವಗಳ ಕಲ್ಪನೆಗಳು ಜೀವಬಲಿಯನ್ನು ಬಯಸುತ್ತವೆ ಎನ್ನುವುದು ಇಂಥದೇ ತಪ್ಪು. ದೇವರು ಕರುಣೆಯ ಮಡು ತಾನು ಜೀವಬಲಿಯನ್ನು ಬಯಸು ವುದಿಲ್ಲ. ಕೋಳಿಯನ್ನು ಕುರಿಯನ್ನು ಒಪ್ಪಿಸುತ್ತೇನೆಂದು ಹರಸಿಕೊಳ್ಳುವುದು, ಹರಸಿಕೊಂಡೆ ಎಂಬ ಕಾರಣದಿಂದ ದೇವರ ಸನ್ನಿಧಿಯಲ್ಲಿ ಕೊಲ್ಲುವುದು

ದೇವರನ್ನು ಅಪಾರ ಎತ್ತರದ ಸ್ಥಾನದಿಂದ ತಗ್ಗಿಗೆ ಎಳೆಯುವ ವ್ಯಾಪಾರ ಇಂಥ ಹರಕೆಗಳನ್ನು ಮಾಡಕೂಡದು

ದೇವರ ಕೃಪೆಯನ್ನು ಒಪ್ಪಿಕೊಳ್ಳುವುದರ ಸಂಕೇತವಾಗಿ ಕಾಣಿಕೆಯನ್ನು ಸಲ್ಲಿಸುತ್ತೇನೆ ಎಂದು ಹರಕೆ ಮಾಡಿಕೊಳ್ಳುವುದು ತಪ್ಪಲ್ಲ. ದೇವರು ಎನ್ನುವ ಭಾವ ಇಂಥ ಕ್ರಿಯೆಯಿಂದ ಮನಸ್ಸಿಗೆ ಹತ್ತಿರವಾಗುತ್ತದೆ. ನಂಬಿಕೆ ಭದ್ರವಾಗುತ್ತದೆ. ಮಾಡಿಕೊಂಡ ಹರಕೆಯನ್ನು ನಡೆಸಿದರೆ ಮನಸ್ಸಿಗೆ ಸಮಾಧಾನ. ಜೊತೆಗೆ ನಮ್ಮ ತಂದೆ ತಾಯಿ ನಮ್ಮನ್ನು ಕಾಪಾಡುತ್ತಾರೆ ಎಂಬ ನಿಶ್ಚಯ. ಇದಿಷ್ಟೂ ಬದುಕನ್ನು ಚೆನ್ನ ಮಾಡುತ್ತದೆ. ಹೀಗೆ ಸಲ್ಲಿಸಿದ ಕಾಣಿಕೆ ಆಲಯದಲ್ಲಿ ಆಗಬೇಕಾಗುವ ಸೇವೆಗಳಿಗೆ ಬೇಕಾದ ವೆಚ್ಚವನ್ನು ಒದಗಿಸುತ್ತದೆ. ನೂರು ಜನಕ್ಕೆ ಜೀವನದ ಕೇಂದ್ರವಾದ ಆಲಯ, ಆ ನೂರು ಜನ ಸಲ್ಲಿಸುವ ಕಾಣಿಕೆಯಿಂದ ನಡೆಯುವುದು ಯುಕ್ತ. ಹೀಗೆ ಆಲಯ ಜನರ ಭಕ್ತಿಯ ಕೇಂದ್ರವಾಗಿ ಒಂದು ರಕ್ಷಕ ಸಂಸ್ಥೆ ಆಗುತ್ತದೆ. ಇದಿಷ್ಟೂ ಈ ಸಂದರ್ಭದ ಒಳ್ಳೆಯ ಮಾತು. ಒಳ್ಳೆಯದಾದ ಈ ಭಾವ ಹದಗೆಡುವುದು, ತಪ್ಪು ಮಾಡಿ ಅದನ್ನು ಮನ್ನಿಸು ಎಂದು ಕೇಳಿಕೊಳ್ಳುವುದಕ್ಕೆ ದೇವರಿಗೆ ತಪ್ಪು ಕಾಣಿಕೆ ಒಪ್ಪಿಸುವಲ್ಲಿ, ತಪ್ಪಾಯಿತು ಎಂದು ಮನಮುಟ್ಟುವುದು ಒಳ್ಳೆಯದು. ಮನ್ನಣೆ ಬೇಡಿ ಸ್ವಲ್ಪ ಹಣವನ್ನು ಪ್ರಾಯಶ್ಚಿತ್ತ ರೂಪವಾಗಿ ಸಲ್ಲಿಸುವುದೂ ಒಳ್ಳೆಯದೇ. ಇರುತ್ತ, ಈ ತಪ್ಪು ಅಜಾಗರೂಕತೆಯಿಂದ ನಡೆದಿರಬೇಕು, ಉದ್ದೇಶಪೂರ್ವಕ ನಡೆದಿರಬಾರದು. ಯಾವುದೋ ಪ್ರಯೋಜನಕ್ಕಾಗಿ ತಪ್ಪುಮಾಡಿ ಹಾಗೆ ಪಡೆದ ಪ್ರಯೋಜನದ ಒಂದು ಭಾಗವನ್ನು ದೇವರಿಗೆ ಒಪ್ಪಿಸುತ್ತೇನೆ ಎನ್ನುವುದು ಕ್ಷಮೆಗೆ ಅರ್ಹವಾದ ನಡತೆ ಅಲ್ಲ. ತಪ್ಪು ನಡತೆಯಿಂದ ಗಳಿಸಿದ ಹಣದ ಒಂದು ಭಾಗವನ್ನು ದೇವರಿಗೆ ಒಪ್ಪಿಸುತ್ತೇನೆ ಎನ್ನುವುದು ದೇವರನ್ನು ನಮ್ಮ ಪಾಪದಲ್ಲಿ ಪಾಲುಗಾರ ಆಗು ಎಂದು ಎಳೆಯುವ ನಡತೆ ಆಗುತ್ತದೆ. ಗೋವನ್ನು ಕೊಂದು ಅದರ ತೊಗಲಿನಿಂದ ಮಾಡಿದ ಕೆರವನ್ನು ದಾನಮಾಡಿದ ಎನ್ನುವುದು ನಮ್ಮಲ್ಲಿ ಒಂದು ಗಾದೆ. ಗೋವನ್ನು ಕೊಂದ ಪಾತಕ ಕೆರದ ದಾನದಿಂದ ಕಡಮೆ ಆಗುವುದಿಲ್ಲ. ತಪ್ಪುಗಳಿಕೆಯ ಒಂದು ಭಾಗವನ್ನು ನಾವು ಹುಂಡಿಗೆ ಹಾಕಿದರೆ ಅದು ಹುಂಡಿಯನ್ನು ಮುಟ್ಟುತ್ತದೆ, ದೇವರನ್ನು ಮುಟ್ಟುವುದಿಲ್ಲ. ಇಂಥ

ಕಾಣಿಕೆ ಕೊಳತ ತೆಂಗಿನಕಾಯಿ , ಸನ್ನಿಧಿಯಲ್ಲಿ ಒಡೆದಾಗ ಕಾಯಿ ಕೊಳತಿರುವುದು ಸ್ಪಷ್ಟವಾಗುತ್ತದೆ, ಅರ್ಚಕ ಅದನ್ನು ಹಿಂದಕ್ಕೆ ಕೊಡುತ್ತಾನೆ.

ಈಗ ತಿರುಪತಿಯಂಥ ಕ್ಷೇತ್ರದಲ್ಲಿ ಹುಂಡಿಯಲ್ಲಿ ಬೀಳುವ ಹಣ ಅದೆಷ್ಟೋ ಬಾರಿ ಇಂಥ ಕಾಣಿಕೆ ಆಗಿರಬೇಕು. ಕೆಲವುವೇಳೆ ಇದು ಲಕ್ಷಲಕ್ಷದಷ್ಟು ಇರುತ್ತದೆ ಎಂದು ವರದಿ ಆಗುತ್ತದೆ ಈ ಹಣವನ್ನು ಹಾಕಿದವರು ಇನ್ನೆಂಥ ದುಷ್ಟ ವ್ಯಾಪಾರದಿಂದ ಇದಕ್ಕೂ ಹೆಚ್ಚಿನ ಹಣವನ್ನು ಗಳಿಸಿ, ಗಳಿಕೆಯ ಜೊತೆಗೆ ಬಂದ ಪಾಪವನ್ನು ತೀರಿಸಿಕೊಳ್ಳುವುದಕ್ಕೆ ಇಷ್ಟು ನಷ್ಟವನ್ನು ಸ್ವೀಕರಿಸುತ್ತಾರೋ! ಈ ಜನರ ಅಜ್ಞಾನ ಇವರ ವ್ಯಾಪಾರದ ಅನ್ಯಾಯಕ್ಕೆ ಸಮನಾದದ್ದು.

ತಿಳಿದಂತೆ ಪಾಪಮಾಡಿ, ಅದರಿಂದ ಬಂದ ಲಾಭದ ಹಣವನ್ನು ಆಲಯದ ಹುಂಡಿ ಒಳಕ್ಕೆ ಹಾಕಬೇಡಿ ಎಂದು ಆಲಯವನ್ನು ನಡೆಸುವ ದೇವಸೇವಕರು ಭಕ್ತರಲ್ಲಿ ಪ್ರಾರ್ಥನೆ ಮಾಡಿದರ ದುಷ್ಕರ ಈ ಅವಿವೇಕ ವರ್ತನೆ ಕಡಮೆ ಆಗಬಹುದು ಇದರಿಂದ ಆಲಯದ ವರಮಾನ ಕಡಮೆ ಆಗ ವುದು ದಿಟ ಆದರೆ ಹೀಗಾಗುವುದು ಒಳ್ಳೆಯದೇ. ಬಂದ ಸ್ವಲ್ಪ ಹಣ ಧರ್ಮದಿಂದ ಗಳಿಸಿದ ಹಣ ಇದು ದೈವಕ್ಕೆ ತೃಪ್ತಿ ಪ್ರೀತಿ ತರುತ್ತದೆ ಜನರಲ್ಲಿ ನೀತಿ ಬೆಳೆಯುವುದಕ್ಕೆ ಇಂಥ ಕಟ್ಟಳೆ ಒಂದು ಸಾಧನ ಆಗುತ್ತದೆ

ಕ್ಷೇತ್ರಗಳಿಗೆ ಬರುವ ಭಕ್ತರು ಸಲ್ಲಿಸುವ ಹರಕೆ ಹಣದಿಂದ ಆಲಯದ ಅಧಿಕಾರಿಗಳು ಭಕ್ತರಿಗೆ ಉಪಯೋಗವಾದ ಹತ್ತು ರೀತಿಯ ಸೇವೆಯನ್ನು ನಡೆಸುವುದು ಒಂದು ಕ್ರಮ ಆಗಬೇಕು. ಈಗ ತಿರುಪತಿಯಲ್ಲಿ ಸೇರುವ ಹಣದಿಂದ ಒಂದು ವಿಶ್ವವಿದ್ಯಾನಿಲಯ ನಡೆಯುತ್ತಿದ ದೇವರಿಗೆ ರತ್ನಕೆತ್ತಿದ ಆಭರಣಗಳು ನಿರ್ಮಾಣವಾಗುತ್ತಿವೆ. ಸನ್ನಿಧಿ ಎಂದಮೇಲೆ ವೈಭವ ಇರಬೇಕು ತಾನೆ! ದೇವರು ಎಂಬ ಕಲ್ಪನೆಯ ವೈಭವಕ್ಕೆ ಮಿತಿ ಒಂದು ಉಂಟೆ ? ಎಷ್ಟು ವೈಭವ ಹೆಚ್ಚಿದರೆ ಅಷ್ಟೂ ಒಳ್ಳೆಯದು. ಆದರೆ ಈ ವೈಭವ ಸರಿಯಾದ ರೂಪದ್ದಾಗಿರಬೇಕು. ದೇವರ ಮೂರ್ತಿಗೆ ಕೋಟಿ ಕೋಟಿ ವೆಚ್ಚದ ಕಿರೀಟವನ್ನು ತೊಡಿಸಿದ್ದರಿಂದ ಆದದ್ದೇನು ? ದೇವರು ನಮ್ಮಂತೆ ಒಬ್ಬ ವ್ಯಕ್ತಿ ಅಲ್ಲವಲ್ಲ. ವೈಭವ ಬೇಕಾಗುವುದು ದೇವರಿಗಲ್ಲ ; ದೇವರನ್ನು ನೋಡಲು ಹೋಗುವ ಭಕ್ತರಿಗೆ. ಇದರ ತೃಪ್ತಿ ಕೋಟಿಕೋಟಿ ವೆಚ್ಚದ ಕಿರೀಟದಿಂದ ಹೆಚ್ಚುತ್ತದೆ ಎಂದು ನಾವು ತಿಳಿಯಬಾರದು. ಆಸೆಯಿಂದ ನೋಡುವ ಕಣ್ಣಿಗೆ

ಭೂಷಣದ ಸೂಚನೆ ನಾಕು ಕಿರೀಟಕ್ಕೆಂದು ವೆಚ್ಚಮಾಡುವ ಹಣವನ್ನು ಬರುವ ಭಕ್ತರ ಸೌಕರ್ಯಕ್ಕೆಂದು ಬಳಸಿದರೆ ವೆಚ್ಚ ಸಾರ್ಥಕ ಆಗುತ್ತದೆ. ಹೀಗಾಗುವುದು ದೈವಕ್ಕೆ ಪ್ರೀತಿ ಎಂದು ನಾವು ನಂಬಬಹುದು ತಿರುಪತಿಯ ವಿಷಯವಾಗಿ, ಪದಾರ್ಥಗಳ ಬೆಲೆ ಹೆಚ್ಚಿದೆ ಎಂಬ ಕಾರಣದಿಂದ ಪ್ರಸಾದದ ವಸ್ತುಗಳ ಬೆಲೆಯನ್ನು ಹೆಚ್ಚಿಸಿದೆ ಎಂದು, ಲಡ್ಡು ವಡೆ ಮುಂತಾದ ಭಕ್ಷ್ಯಗಳ ಗಾತ್ರವನ್ನು ಕಡಮೆ ಮಾಡಿದೆ ಎಂದು, ವರದಿ ಆಗುವುದು ಉಂಟು. ತಿರುಪತಿಯ ಆಲಯಕ್ಕೆ ಬರುವ ಲಕ್ಷಲಕ್ಷದ ಹಣದಲ್ಲಿ ಸ್ವಲ್ಪವನ್ನು ಉಪಯೋಗಿಸಿ ದರ ವೇಪೆಗಳ ಬೆಲೆಗಳ ಏರಿಕೆಯಿಂದ ಪ್ರಸಾದದ ವಸ್ತುಗಳ ಯೋಗ್ಯತೆಯನ್ನು ತಗ್ಗಿಸುವುದು ಅನಾವಶ್ಯಕ ಆಗುತ್ತದೆ ತಿರುಪತಿಯ ಆಲಯಗಳನ್ನು ನಡೆಸುವ ಅಧಿಕಾರಿ ಸಂಸ್ಥೆಗಳು ಈ ವಿಷಯವನ್ನು ಮನಸ್ಸಿಗೆ ತಂದುಕೊಂಡು ಭಕ್ತರು ಕೊಡುವ ಹಣದಿಂದ ಭಕ್ತರಿಗೆ ಸೌಕರ್ಯವನ್ನು ಒದಗಿಸಲು ಯತ್ನ ಮಾಡ ಬೇಕು

ತಿರುಪತಿಯಲ್ಲಿ ತೋಮಾಲೆ ಸೇವೆಯಲ್ಲಿ ಹಿಂದೆ ಆಲಯದ ಹೂವಿನ ತೋಟದಲ್ಲಿ ಬೆಳೆಸಿದ ಹೂಗಳ ಮಾಲೆಯನ್ನು ರಚಿಸಿ ಮೂರ್ತಿಯ ಮೇಲೆ ತೊಡಿಸುತ್ತಿದ್ದರು ಈಗ ಹೂಗಳು ದೊರೆಯುವುದಿಲ್ಲ ಎಂದು ಸಾಲಿಗ್ರಾಮದ ಮಾಲೆ ಒಂದನ್ನು ತೊಡಿಸುತ್ತಿದ್ದಾರೆ ಎಂದು ಈ ಮುನ್ನ ಹೇಳಿದ್ದಾಗಿದೆ. ತಿರುಪತಿಯ ಬೆಟ್ಟದಮೇಲೆ ಹೂವಿನ ತೋಟಕ್ಕೆ ಬೇಕಾದಷ್ಟು ನೆಲ ಇದೆ. ಅದರಲ್ಲಿ ಬೇಕಾದಷ್ಟು ಹೂವನ್ನು ಬೆಳೆಯಬಹುದು. ಇದಕ್ಕೆ ಮನಸ್ಸು ಬೇಕು. ಶ್ರದ್ಧೆ ಬೇಕು ಈ ಮನಸ್ಸು ಶ್ರದ್ಧೆ ಬರಬೇಕಾದರೆ ಆಲಯದಲ್ಲಿ ಇರುವುದು ಬರಿಯ ವಿಗ್ರಹ ಅಲ್ಲ, ಪ್ರತ್ಯಕ್ಷ ದೈವ ಎಂಬ ಪ್ರಜ್ಞೆ ಬೇಕು ಹಿಂದೆ ಬಣ್ಣ ಬಣ್ಣದ ಹೂವಿನ ಆ ಮಾಲೆಯನ್ನು ನೋಡಿ ಎಷ್ಟು ಸಾವಿರ ಕಣ್ಣು ಎಷ್ಟು ಆನಂದಪಟ್ಟವೋ, ಇಂದಿನ ಜನರಿಗೆ ಆ ಆನಂದ ಬೇಡವೇ ? ಅದನ್ನು ಒದಗಿಸುವುದು ಅಸಾಧ್ಯವೆ ? ಆಲಯವನ್ನು ನಡೆಸುವ ಸಂಸ್ಥೆಗಳು ಭಕ್ತರಾದ ಜನರ ಸಂಸ್ಥೆಗಳಾಗಬೇಕು. ಶ್ರೀನಿವಾಸನ ವಿಗ್ರಹ ಒಂದು ಕಲ್ಲು ಎಂದು ತಿಳಿಯುವ ಅವಿಶ್ವಾಸಿ ಅಧಿಕಾರಿ ಪೂಜೆಯ ವಿವರಗಳಲ್ಲಿ ಆಸಕ್ತಿಯನ್ನು ಅನುಭವಿಸಿಯಾನು ಎಂದು ನಿರೀಕ್ಷಿಸಬಾರದು. ದೇವರೇ ಇಲ್ಲ ಎನ್ನುವುದಾದರೂ ಎಷ್ಟೋ ಜನರಲ್ಲಿ ಒಬ್ಬ ತನ್ನ ಕರ್ತವ್ಯ ಎಂಬ ದೃಷ್ಟಿಯಿಂದ ಪೂಜೆಯ ವಿವರದಲ್ಲಿ ಶ್ರದ್ಧೆಯಿಂದ

ನಡೆಯುವುದು ಸಾಧ್ಯ ಎಂದರೂ ಇಂಥ ಜನ ಅಪರೂಪ. ದೇವರನ್ನು ಮೆಚ್ಚಿಸೋಣ ಎಂಬ ಪ್ರೀತಿಯಿಂದ, ತಪ್ಪಿಯೇನು ಎಂಬ ಭಯದಿಂದ, ನಡೆಯುವ ಜನರಿಂದ ಮಾತ್ರ ನಾವು ಸಹಜವಾದ ಶ್ರದ್ಧೆಯನ್ನು ನಿರೀಕ್ಷಿಸ ಬಹುದು.

ಕ್ಷೇತ್ರಯಾತ್ರೆಗಳು ಅವಶ್ಯಕವೇ ಎಂಬ ವಿಷಯದಲ್ಲಿ ಎರಡು ಅಭಿಪ್ರಾಯ ಎಲ್ಲ ಕಾಲದಿಂದಲೂ ಇದ್ದಿವೆ ದೇವರು ಸರ್ವವ್ಯಾಪಿ, ಅವನು ಇಲ್ಲದ ಎಡೆ ಇಲ್ಲ ಇದು ಹೊಸಕಾಲದ ಜಾಣರ ಮಾತೇನೂ ಅಲ್ಲ ಉಪನಿಷತ್ತುಗಳ ಕಾಲದಿಂದ ನಮ್ಮ ಜನತೆ ನಂಬಿಕೊಂಡು ಬಂದಿರುವ ಸತ್ಯ ಹೀಗಿದ್ದೂ ಆಲಯಗಳ ನಿರ್ಮಾಣ ಆದ ಕಾಲದಿಂದಲೂ ಯಾತ್ರೆ ಎಂಬ ಒಂದು ಕ್ರಮ ನಮ್ಮ ಜೀವನದಲ್ಲಿ ವಾಡಿಕೆ ಆಗಿ ಬೆಳೆದಿದೆ. ಯೋಚಿಸಿ ನೋಡಿದರೆ, ಕ್ಷೇತ್ರಗಳು ಇರಬೇಕು, ಕ್ಷೇತ್ರಯಾತ್ರೆ ಒಂದು ಮಿತದಲ್ಲಿ ಅವಶ್ಯ, ಎನ್ನುವುದು ಸರಿ ಎಂದು ಕಾಣುತ್ತದೆ. ನಾನು ನನ್ನ ದೇವರು ಎಂದು ಒಬ್ಬೊಬ್ಬನೂ ತನ್ನ ದೈವ ದೊಂದಿಗೆ ಸಂಬಂಧವನ್ನು ಬೆಳೆಸುವಂತೆ ನಾವು ನಮ್ಮ ದೇವರು ಎಂದು ಸಮುದಾಯ ತನ್ನ ದೈವ ತಮ್ಮ ದೈವ ಒಂದೇ ಎಂದು ಸಂಬಂಧವನ್ನು ಬೆಳೆಸಿ ಕೊಳ್ಳುವುದೂ ಅವಶ್ಯಕ ಇದಕ್ಕಾಗಿ ಗ್ರಾಮಗಳಲ್ಲಿ ದೇವಾಲಯಗಳಿರಬೇಕು, ಪ್ರದೇಶ ಪ್ರದೇಶದಲ್ಲೂ ಯಾತ್ರಾಸ್ಥಾನ ಇರಬೇಕು ಇಂಥ ಸ್ಥಾನಗಳಲ್ಲಿ ಭಕ್ತರು ಗುಂಪಾಗಿ ಸೇರಿದು ನಾವೆಲ್ಲ ದೇವರ ಮಕ್ಕಳು ಎನ್ನುವ ಭಾವವನ್ನು ಅನುಭವಿಸುವ, ಸಂತೋಷ ಸಂದರ್ಭವನ್ನು ಒದಗಿಸುವ ಉತ್ಸವಗಳಿರಬೇಕು.

ಅಲ್ಲದೆ ಕ್ಷೇತ್ರಯಾತ್ರೆಗಳು ನಾವು ಒಬ್ಬ ದೇವರ ಮಕ್ಕಳು ಎಂಬ ಭಾವವನ್ನು ಬೆಳೆಸುವಂತೆ ಒಂದು ದೇಶದ ಮಕ್ಕಳು ಎಂಬ ಭಾವವನ್ನೂ ಬೆಳೆಸುತ್ತವೆ. ಹಿಮಗಿರಿಯಿಂದ ರಾಮಸೇತುವಿನವರೆಗಿನ, ಕಾಮರೂಪದಿಂದ ಗಾಂಧಾರದವರೆಗಿನ, ನೆಲ ಒಂದು ನೆಲ. ಇದು ಭಾರತ ಭೂಮಿ. ಉತ್ತರದಿಂದ ದಕ್ಷಿಣಕ್ಕೆ, ದಕ್ಷಿಣದಿಂದ ಉತ್ತರಕ್ಕೆ ಪೂರ್ವದಿಂದ ಪಶ್ಚಿಮ, ಪಶ್ಚಿಮದಿಂದ ಪೂರ್ವಕ್ಕೆ ಪುಣ್ಯಕ್ಷೇತ್ರಗಳನ್ನು ನೋಡಹೋಗಿ ನಮ್ಮ ಜನತೆ ತಾನು ಭಾರತೀಯ ಎನ್ನುವ ಭಾವವನ್ನು ಬೆಳೆಸಿಕೊಂಡಿತು. ಬೆಳ್ಳನೆಯ ವಸ್ತ್ರದಂತೆ ಮಂಜನ್ನು ಹೊದೆದು, ಎಡ ಬಲಕ್ಕೆ ಕಣ್ಣು ಹರಿಯುವಷ್ಟು ದೂರವೂ ಹರಿದು, ನಭವನ್ನು ಮುಟ್ಟುವವರೆಗೆ ಮೇಲಕ್ಕೆ ಏರಿ, ಅನಂತ ಎಂದರೆ ಇದು ಎಂದು

ತೋರಿಸುವ ಎತ್ತರ ಬಿತ್ತರದ ಹಿಮಾಲಯದ ಪರ್ವತಸ್ತೋಮ, ಗಂಗೆ ಸಿಂಧು ನದಿಗಳ ಹರಿವು, ವಿಂಧ್ಯಗಿರಿ ಸಹ್ಯಾದ್ರಿ ಪೂರ್ವಶೈಲ ಇವುಗಳ ನಡುವಣ ಭೂಮಿ, ದಕ್ಷಿಣದ ಗೋದಾವರಿ ಕೃಷ್ಣಾ ಕಾವೇರಿ ನದಿಗಳ ಪ್ರವಾಹ, ಈ ವಿಸ್ತಾರದಲ್ಲಿ ಅಲ್ಲಲ್ಲಿ ಚೆಲ್ಲಿರುವ ಸೌಂದರ್ಯ ಸ್ಥಾನಗಳ ಕ್ಷೇತ್ರಗಳು, ತುಟ್ಟತುದಿಯಲ್ಲಿ ಕನ್ಯಾಕುಮಾರಿ, ರಾಮಸೇತುವೆ, ಪೂರ್ವ ಪಶ್ಚಿಮ ದಕ್ಷಿಣಕ್ಕೆ ನೆಲಕಾಣದಷ್ಟು ದೂರ ಹರಡಿರುವ ಜಲರಾಶಿ, ಇವುಗಳ ವೈಭವವನ್ನು ಹೊರಕಣ್ಣಿನಿಂದಲೇ ನೋಡಿ, ಇವನ್ನು ನೋಡಿದಲ್ಲದೆ ಸಾಧ್ಯವಲ್ಲದ ಒಂದು ಆನಂದವನ್ನು ಅನುಭವಿಸಿತು ಈ ನೆಲ ಬರಿಯ ನೆಲವಲ್ಲ, ತನ್ನ ತಾಯಿ ಆಗಿರುವ ಒಬ್ಬ ದೇವಿ ಎನ್ನುವುದನ್ನು ತಿಳಿಯಿತು ಇದೇನು ಕೊಂಚದ ಭಾಗ್ಯ ಅಲ್ಲ. ಭಾರತಮಾತೆ ಎಂಬ ಶಬ್ದ ಬರಿಯ ಮಾತಲ್ಲ, ಆಳದ ನಂಬಿಕೆಗೆ ಹೆಸರು ಕೊಟ್ಟಿರುವ ಒಂದು ಪದ, ಎಂದು ಕಂಡಿತು

ಕ್ಷೇತ್ರಗಳಿಗೆ ಏಕೆ ಹೋಗಬೇಕು, ನೀನು ಇರುವಲ್ಲೇ ದೇವರು ಇದ್ದಾನೆ ಎಂದು ನಮ್ಮ ಸುಧಾರಕ ಪಂಥಗಳೆಲ್ಲ ಉಪದೇಶ ಮಾಡಿವೆ. ಕ್ಷೇತ್ರಯಾತ್ರೆ ಬೇಡ ಎನ್ನುತ್ತಿರುವಂತೆ ಕಾಣುವ ಈ ಉಪದೇಶದ ಅರ್ಥ ಹೊರಕ್ಕೆ ಕಾಣುವ ಈ ಅರ್ಥ ಅಲ್ಲ ಕ್ಷೇತ್ರಯಾತ್ರೆ ಎಂಬ ಪದ್ಧತಿಯನ್ನು ಅತಿಯಾಗಿ ಬೆಳೆಸಬೇಡಿ ಎಂದು ಎಚ್ಚರಿಕೆ ಹೇಳುವುದು ಅದರ ಉದ್ದೇಶ ತಿರುಪತಿಗೆ ಹೋಗಬೇಕು, ಆದರೆ ಲಕ್ಷಲಕ್ಷದಲ್ಲಿ ಗುಂಪುಗುಂಪು ಹೋಗಿ ಅಲ್ಲಿ ಅನವಶ್ಯಕವಾದ ಕ್ಲೇಶಗಳನ್ನು ಅನುಭವಿಸಿ ಒಬ್ಬರ ಮೇಲೊಬ್ಬರು ಬಿದ್ದು ನೆಜ್ಜುಗುಜ್ಜಾಗಿ ದೇವರ ದರ್ಶನ ಆಯಿತು, ಇಲ್ಲ, ಚೆನ್ನಾಗಿ ಆಗಲಿಲ್ಲ, ಎಂದುಕೊಂಡುಬರುವುದು ಕ್ಷೇತ್ರಯಾತ್ರೆ ಅಲ್ಲ, ಅನವಶ್ಯಕ ವ್ಯಾಪಾರ ಎಂದು ಬುದ್ಧಿ ಹೇಳುವುದು ಲಕ್ಷಲಕ್ಷದಲ್ಲಿ ಪ್ರಯಾಗಕ್ಕೆ ಹರಿದ್ವಾರಕ್ಕೆ ಹೋಗಿ ಗಂಗೆಯ ನೀರಿನಲ್ಲಿ ಮುಳುಗುಹಾಕಿದರೆ ಏನೋ ಪುಣ್ಯ ಬರುತ್ತದೆ, ಎಂಥದೋ ಶುಭ ಆಗುತ್ತದೆ, ಎಂದು ತಿಳಿಯುವುದೂ ತಪ್ಪು. ಮೇಲಾಗಿ ತಿರುಪತಿಯಂಥ ಸ್ಥಳಕ್ಕೆ ಯಾತ್ರೆ ಹೋಗುವುದರಲ್ಲಿ ಭಕ್ತರು ಹಿಂದೆ ಶ್ರಮದಿಂದ ಬಂದು ಬೆಟ್ಟವನ್ನು ಏರಿ ಪ್ರಯಾಸದಿಂದ ದೇವರ ದರ್ಶನವನ್ನು ಪಡೆದು ಕಷ್ಟದಿಂದ ದೇವನನ್ನು ಕಂಡೆವು ಎಂಬ ಭಾವವನ್ನು ಅನುಭವಿಸುತ್ತಿದ್ದರು ಈಗ ಈ ಭಾವ ಸಾಧ್ಯವಾಗದೆ ಹೋಗಿದ. ನಡೆಯುವ ಮಾತು, ಬೆಟ್ಟವನ್ನೇರುವ ಮಾತು, ಹಿಂದಿನ ಕಥೆ. ಈಗ ಎಲ್ಲರೂ ಕಾಸು

ಕೊಟ್ಟು ಬಸ್ಸಿನಲ್ಲಿ ಕುಳಿತು ತಮ್ಮ ಊರಿನ ದೇವಾಲಯಕ್ಕೆ ಹೋಗುವಂತೆ ತಮ್ಮ ಊರಿನಿಂದ ತಿರುಪತಿಗೂ ಅಷ್ಟೇ ಶ್ರಮದಲ್ಲಿ ಹೋಗುತ್ತಾರೆ ಹಿಂದೆ ಯಾತ್ರಿಕರು ಬೆಟ್ಟವನ್ನು ಏರುತ್ತ ಅಂದವಾದ ಒಂದು ಮಲೆಯ ದಾರಿಯಲ್ಲಿ ನಡೆಯುವ ಸುಖವನ್ನು ಅನುಭವಿಸುತ್ತಿದ್ದರು ಮಲೆಯನ್ನು ಏರುವ ಸುಖ ಈಗ ಬಸ್ಸಿನ ಪಾಲಾಗಿದೆ ಆ ಸುಖದಿಂದ ತಣಿಯುತ್ತಿದ್ದ ಭಕ್ತರ ಜೀವಕ್ಕೆ ಈಗ ಆ ಸುಖ ಲಭ್ಯ ಇಲ್ಲ

ರೈಲಿನಲ್ಲಿ ಬಸ್ಸಿನಲ್ಲಿ ಕುಳಿತು ಹರಿದ್ವಾರಕ್ಕೆ ಹೋಗುವುದರಲ್ಲಿ ಕೂಡ ನಮಗೆ ಹಿಂದೆ ನಮ್ಮ ತಾತ ಮುತ್ತಾತಂದಿರಿಗೆ ದೊರೆಕಿದ ದೇಶಪರಿಚಯ ಜನ ಪರಿಚಯದ ಭಾಗ್ಯ ಇಲ್ಲವಾಗಿದೆ.

ಹೀಗಿದ್ದೂ ಕ್ಷೇತ್ರಯಾತ್ರೆಯನ್ನು ತೀರ ಬಿಟ್ಟುಬಿಡಿ ಎಂದು ಹೇಳುವುದು ಯುಕ್ತ ಆಗಲಾರದು. ಆಧುನಿಕರಲ್ಲಿ ಆಧುನಿಕರಾಗಿ ದೈವವನ್ನು ಕುರಿತು ತೀರಾ ಅನಾಸಕ್ತಿಯನ್ನು ಬೆಳಸಿಕೊಂಡಿದ್ದ ನಮ್ಮ ಜನನಾಯಕ ಜವಹರ ಲಾಲ್ ನೆಹರೂರವರು ಕೂಡ ಒಂದು ಸಂದರ್ಭದಲ್ಲಿ ಕ್ಷೇತ್ರಯಾತ್ರೆಯ ಸಂಪ್ರದಾಯದಿಂದ ಒಳ್ಳೆಯದಾಯಿತು ಎಂದು ಹೇಳಿದರು.

ದೈವವನ್ನು ಕುರಿತು ಸ್ಪಷ್ಟವಾದ ಒಂದು ಭಾವಕ್ಕೆ ಎಡೆಕೊಡದ ಬೌದ್ಧ ಮತದಲ್ಲಿಯೂ ಕ್ಷೇತ್ರಗಳ ದರ್ಶನದಿಂದ ಪ್ರಯೋಜನ ಇದೆ ಎಂಬ ಭಾವನೆ ಪೂರ್ವದಿಂದಲೂ ನಡೆದುಬಂದಿದೆ ಬುದ್ಧ ಗುರುವಿನ ಚರಿತೆಗೆ ಸಂಬಂಧಿಸಿದ ಸ್ಥಳಗಳನ್ನು ನೋಡಲು ಚೀನಾ ದೇಶದ ಭಕ್ತ ಮಹನೀಯರು ಎರಡು ಸಾವಿರ ವರ್ಷಗಳ ಹಿಂದೆಯೇ ನಮ್ಮ ದೇಶಕ್ಕೆ ಬಂದದ್ದನ್ನು ನಾವೆಲ್ಲ ಬಲ್ಲವು ಯಾತ್ರೆಗಳು ಅವಶ್ಯಕವಲ್ಲ ಎಂದು ನಾನಕ್ ಗುರು ಉಪದೇಶಿಸಿದ್ದರೂ ನಮ್ಮ ನೋಡದ ಸಿಖ್ ಜನರು ಆ ಪುಣ್ಯಾತ್ಮನ ಚರಿತೆಗೆ ಸಂಬಂಧಿಸಿದ ಸ್ಥಳಗಳನ್ನೂ, ಅವನ ಅನಂತರದ ಗುರುಗಳ ಚರಿತೆಗೆ ಸಂಬಂಧಿಸಿದ ಸ್ಥಳಗಳನ್ನೂ, ಯಾತ್ರಾ ಸ್ಥಾನಗಳಾಗಿ ನಡೆಸಿಕೊಳ್ಳುತ್ತಿದ್ದಾರೆ. ಈ ನಡತೆ ಮನುಷ್ಯನ ಸ್ವಭಾವಕ್ಕೆ ಸಹಜವಾಗಿದ್ದು ಸಂತೋಷ ತರತಕ್ಕದ್ದು ಈ ಅರ್ಥದಲ್ಲಿ ಶುಭಕರ ಇದನ್ನು ತೀರಾ ತೊರೆಯಬಾರದು ; ಅಷ್ಟೇ ದಿಟವಾಗಿ ಅತಿ ಮಾಡಲೂ ಬಾರದು.

ಈ ಕ್ಷೇತ್ರಗಳನ್ನು ಕುರಿತ ಈ ಮಾತುಗಳಲ್ಲಿ ತೀರ್ಥಗಳನ್ನು ಕುರಿತ ಮಾತೂ ಸೇರಿದೆ.

ವೇದದ ಕಾಲದ ಯಜ್ಞಗಳು ನಿಜದಲ್ಲಿ ನಿಂತುಹೋಗಿವೆ ಎಂದೇ ಹೇಳಬಹುದು. ಒಮ್ಮೊಮ್ಮೆ ಅಲ್ಲಲ್ಲಿ ಗುರುಪೀಠಗಳ ಹಿರಿಯರು ಇಂಥ ಅಂಥ ಯಾಗ ನಡೆಸುತ್ತಾರೆ ಎಂದು ಸುದ್ದಿ ಕೇಳುತ್ತದ ದೇವರನ್ನು ಉದ್ದೇಶಿಸಿ ಇಂಥ ಕರ್ಮಗಳನ್ನು ನಡೆಸುವುದು ಶುಭಕರ. ಈ ವಿಷಯದಲ್ಲಿ ಸಂದೇಹವಿಲ್ಲ ಆದರೆ ಇವು ಎಷ್ಟು ಕ್ರಮವಾಗಿ ನಡೆಯುತ್ತವೆ ಎಂಬುದನ್ನು ಮಾತ್ರ ಇದಕ್ಕೆ ಸಂಬಂಧಿಸಿದ ಜನ ಎಚ್ಚರದಿಂದ ನೋಡಿಕೊಳ್ಳಬೇಕು ಬೆಲೆಯ ವಸ್ತುಗಳನ್ನು ಅಗ್ನಿಗೆ ಸಮರ್ಪಿಸುತ್ತೇವೆ, ದೇವರನ್ನು ತೃಪ್ತಿಗೊಳಿಸುತ್ತೇವೆ, ಎಂಬ ತಿಳುವಳಿಕೆಯಲ್ಲಿ ಪಟ್ಟೆ ವಸ್ತ್ರಗಳನ್ನು ಸರ್ಕಾರದ ನೋಟುಗಳನ್ನು ಹೋಮಕುಂಡದಲ್ಲಿ ಹಾಕುವುದು ವಿವೇಕವಲ್ಲ ಎನ್ನುವುದನ್ನು ಪ್ರವರ್ತಕರು ನೆನಪಿನಲ್ಲಿಡಬೇಕು ವಸ್ತ್ರಗಳನ್ನು ಬಟ್ಟೆ ಇಲ್ಲದ ಜನಕ್ಕೆ, ನೋಟುಗಳನ್ನು ಕಾಸಿಲ್ಲದ ಜನಕ್ಕೆ, ದಾನ ಮಾಡಿದರೆ ದೇವರಿಗೆ ಹೆಚ್ಚು ಪ್ರೀತಿ ಆಗುತ್ತದ ಭಕ್ತಿ ಅತಿಯಾದರೆ ಹುಚ್ಚಿನಂತಾಗುತ್ತದೆ ಎಂದು ಪೂರ್ವದಿಂದ ನಮಗೆ ಬಂದಿರುವ ನಂಬಿಕೆ. ಇದರಿಂದಲೇ ಹನುಮಂತ ದೇವರ ಹೆಸರಿನಲ್ಲಿ ಶಾಂತೇಶ ಕಾಂತೇಶರ ಜೊತೆಗೆ ಭ್ರಾಂತೇಶ ಎಂದು ಒಂದು ಹೆಸರಾಗಿರುವುದು ಭಕ್ತ ಹುಚ್ಚನಂತೆ ಆಗಬಹುದು; ಭಕ್ತಿ ಹುಚ್ಚು ಆಗಬಾರದು.

ಜ್ಯೋತಿಃಶಾಸ್ತ್ರದ ಪ್ರಭಾವದಿಂದ ನಮ್ಮಲ್ಲಿ ಬೆಳೆದು ಬಂದಿರುವ ಕೆಲವು ವಾಡಿಕೆಗಳನ್ನು ಸರಿಪಡಿಸಿಕೊಳ್ಳುವುದು ಸದ್ಯದಲ್ಲಿ ತೀರಅವಶ್ಯಕ ಎನ್ನುವುದನ್ನು ನಮ್ಮ ಜನ ತಿಳಿಯಬೇಕಾಗಿದೆ. ಯಾವ ಕೆಲಸಕ್ಕೂ ಒಳ್ಳೆಯ ದಿನ ಕೆಟ್ಟ ದಿನ ಎಂದು ನಮ್ಮ ಜನ ಹಿಂದೆಯೂ ತುಂಬಾ ಕಷ್ಟಪಟ್ಟರು, ಈಗಲೂ ಪಡುತ್ತಿದ್ದಾರೆ ಮನಸ್ಸಿನ ಸಮಾಧಾನಕ್ಕೆ ಸಾಧಕವಾಗಿ ಇಂಥ ಭಾವನೆಗಳಿಗೆ ಜೀವನದಲ್ಲಿ ಸ್ಥಾನ ಇದೆ. ಇದುತ್ತ ಇವು ಅತಿಯಾಗಬಾರದು ನಮ್ಮ ಪಂಚಾಂಗದಲ್ಲಿ ಒಂದೊಂದು ದಿನವೂ ವರ್ಷದ ಒಂದು ತಿಂಗಳ ಒಂದು ಪಕ್ಷದ ಒಂದು ವಾರದ ಏಳು ದಿನಗಳಲ್ಲಿ ಒಂದಾಗಿರುತ್ತದೆ ದಿನಗಳು ತಿಥಿಗಳು ಲಗ್ನಗಳು ಶುಭ ಅಶುಭ ಎನ್ನುವ ಭಾವಕ್ಕೆ ಮೂಲ ಜ್ಯೋತಿಶ್ಶಾಸ್ತ್ರ. ಜ್ಯೋತಿಃಶಾಸ್ತ್ರ ಒಂದು ಶಾಸ್ತ್ರ ಎನ್ನುವ ವಿಷಯದಲ್ಲಿ ಸಂದೇಹವಿಲ್ಲ. ನಮ್ಮ ಪಂಚಾಂಗವನ್ನು ರೂಪಿಸಿದ ಹಿರಿಯರು ಸೂರ್ಯಚಂದ್ರರ ಗ್ರಹಣಗಳನ್ನು ಎಷ್ಟೋ ಮುಂದಾಗಿ ನಿರ್ಧರಿಸುತ್ತಿದ್ದರು ಎನ್ನುವ ಒಂದು ಮಾತು ಸಾಕು ಈ ಶಾಸ್ತ್ರ

ನಿಷ್ಕರ್ಷೆಯು ಶಾಸ್ತ್ರ ಎನ್ನುವುದಕ್ಕೆ ಪ್ರಮಾಣ ಇದರಮೇಲೆ ಯಾವಯಾವವೋ ದಿನಗಳಲ್ಲಿ ತಿಥಿಗಳಲ್ಲಿ ಲಗ್ನಗಳಲ್ಲಿ ಯಾವಯಾವವೋ ಶುಭಗಳು ನಡೆಯು ವಾರದ ಎನ್ನುವುದು ಜೊತೆಯು ವಾಡಿಕೆಯಾಯಿತು ಇಂಥ ದಿವಸಗಳಲ್ಲಿ ಕ್ಷೌರ ಮಾಡಿಸಿಕೊಳ್ಳಕೂಡದು, ಇಂಥ ದಿನಗಳಲ್ಲಿ ಮದುವೆ ಉಪನಯನ ಮಾಡಕೂಡದು ಇಂಥ ದಿವಸಗಳಲ್ಲಿ ಲಗ್ನದಲ್ಲಿ ಹುಟ್ಟಿದ ಮಗುವಿನ ಅದೃಷ್ಟ ಹೀಗಿರುತ್ತದೆ, ಇತ್ಯಾದಿ ಇತ್ಯಾದಿ ಈ ನಿಯಮಗಳಿಗೆ ಒಂದು ಮಿತಿಯೇ ಇಲ್ಲ ಜ್ಯೋತಿಃಶಾಸ್ತ್ರ ದಕ್ಷ ಗಣಕರ ಕೈಯಲ್ಲಿ ಭವಿಷ್ಯವನ್ನು ಗ್ರಹಿಸಬಲ್ಲದು ಎನ್ನುವುದಕ್ಕೆ ತಕ್ಕ ಕಾರಣ ಇದೆ ಇವನ್ನು ನಾನು ಈ ಮುನ್ನ ಹೇಳಿದ್ದೇನೆ. ಜೊತೆಗೆ ಇರುವ ಸತ ಜಾತಕಗಳು ಎಲ್ಲ ಕಡೆಯಲ್ಲೂ ಸರಿಯಾಗಿ ಬರೆದ ವಾಗಿ ಇರುವುದಿಲ್ಲ ಅವನ್ನು ಹಿಡಿದು ಫಲ ಹೇಳುವವರು ಬಹುವೇಳೆ ಶಾಸ್ತ್ರಜ್ಞಾನ ಸಾಲದ್ದರಿಂದಲೋ ಅವಶ್ಯಕವಾದ ಶ್ರಮವನ್ನು ವಹಿಸದ ಕಾರಣ ದಿಂದಲೋ ಫಲಗಳನ್ನು ಗುಣಿಸುವುದರಲ್ಲಿ ತಪ್ಪು ಮಾಡುತ್ತಾರೆ ಅದಕ್ಕೆ ಸಾಕ್ಷಿ, ಶುಭಸಾಧಕವಾದ ಲಕ್ಷಣಗಳಿವೆ ಎಂದು ಜ್ಯೋತಿಷ ಹೇಳಿದ ಎಂಬ ಕಾರಣದಿಂದ ನಡೆದ ಎಷ್ಟೋ ಸಂಬಂಧಗಳು ದುರಂತದಲ್ಲಿ ಕೊನೆಯಾಗಿರು ವುದು ಈ ಕಾರಣದಿಂದ ಜಾತಕಗಳಿಗೆ, ಅವುಗಳ ಪರಿಣಾಮ ಎಂದು ಹೇಳುವ ಫಲಗಳಿಗೆ, ಬೆಲೆ ಕೊಡುವುದು ಸರಿ ಅಲ್ಲ ಎಂದು ಹೇಳಬಹುದಾಗಿದೆ

ಒಳ್ಳೆಯ ಹೊತ್ತು ಗಳಿಗೆ ಎನ್ನುವ ಮಾತಿಗೆ ಸಂಪ್ರದಾಯದಲ್ಲಿಯೇ ತುಂಬ ಯುಕ್ತ ಆದ ಒಂದು ಭಾವ ಬೆಳೆದುಬಂದಿದೆ ಒಳ್ಳೆಯ ದಿನ ನಕ್ಷತ್ರ ವನ್ನು ನೋಡಿ ಅಡ್ಡಿ ಇಲ್ಲ. ಆದರ, ತದೇವಲಗ್ನಂ ಸುದಿನಂ ತಾರಾಬಲಂ ಚಂದ್ರಬಲಂ ತದೇವ ವಿದ್ಯಾಬಲಂ ದೈವಬಲಂ ಯದೇವ ಲಕ್ಷ್ಮೀಪತೇಃ ಅಂಘ್ರಿ ಯುಗಂಸ್ಮರಾಮಿ. ಲಕ್ಷ್ಮೀಪತಿಯ ಪಾದಗಳನ್ನು ನೆನೆಯುವ ವೇಳೆಯೇ ಸರಿ ಯಾದ ವೇಳೆ ಸರಿಯಾದ ದಿನ. ನಕ್ಷತ್ರಗಳ ಬಲ ಚಂದ್ರಬಲ ವಿದ್ಯಾಬಲ ದೈವ ಬಲ ಎಲ್ಲ ಇದರಲ್ಲಿದೆ. ಎಲ್ಲ ಸಂದರ್ಭದಲ್ಲೂ ಹಿರಿಯರು ಈ ಶ್ಲೋಕವನ್ನು ಹೇಳಿ ಗಳಿಗೆಯ ದೋಷ ಏನಿದ್ದರೂ ಅದು ಶಮನವಾಯಿತು ಎನ್ನುತ್ತಿದ್ದರು. ಲಕ್ಷ್ಮೀಪತಿಯನ್ನು ನಂಬಿ ನೆನೆದರೆ ಹೊತ್ತಿನ ಎಲ್ಲ ದೋಷವೂ ನಿವಾರಣೆ ಆಯಿತು. ಲಕ್ಷ್ಮೀಪತಿ ಎಂದಮೇಲೆ ಗೌರೀಪತಿಯನ್ನು ಹೇಳಿದಂತೆಯೇ. ದೇವರ ಅಡಿಯನ್ನು ನೆನೆಯಿರಿ, ಗಳಿಗೆ ಒಳ್ಳೆಯದೆ ಕೆಟ್ಟದೆ ಎಂಬ ಭಯವನ್ನು

ಬಿಡಿರಿ ಇದೇ ಅರ್ಥದಲ್ಲಿ 'ಸಕಲ ಗ್ರಹಬಲ ನೀನೆ ಸರಸಿಜಾಕ್ಷ' ಎಂಬ ದೇವರ ನಾಮ ಕೀರ್ತನೆಯಲ್ಲಿ ದಾಸರ ಉಪದೇಶವೂ ಇದೆ

ಒಟ್ಟಿನಲ್ಲಿ ಶಾಸ್ತ್ರಜ್ಞರಾದ ನಮ್ಮ ಸಮಾಜದ ಹಿರಿಯರು ಜೀವನದಲ್ಲಿ ಜ್ಯೋತಿಷ್ಯವನ್ನು ಬಳಸುವ ವಿಷಯದಲ್ಲಿ ಈ ಮುಂದಿನ ಮಾರ್ಪಾಡುಗಳನ್ನು ನಿಯಮಿಸುವುದು ಯುಕ್ತ ಎಂದು ಕಾಣುತ್ತದೆ ತಿಥಿ ವಾರ ನಕ್ಷತ್ರಗಳನ್ನು ನಿಯಮಿಸುವುದು ಯುಕ್ತ ತಿಥಿ ವಾರ ನಕ್ಷತ್ರಗಳನ್ನು ಕುರಿತ ಭಾವನೆಯಲ್ಲಿ ಶುಭಕಾರ್ಯಗಳಿಗೆ ಒಳ್ಳೆಯದು ಎಂಬ ಭಾವನೆ ಯಾವುವು ನಡೆದುಬಂದಿದೆ ಅದನ್ನು ಉಳಿಸಿಕೊಂಡು ನಡೆಯಬಹುದು. ಅವಶ್ಯಕ ಕಂಡಾಗ ಇವನ್ನು ನಡೆಸದೆ ಬಿಟ್ಟರೂ ತಪ್ಪಿಲ್ಲ

ಇದು ತೀರಾ ಹೊಸ ಮಾರ್ಪಾಡು ಏನೂ ಅಲ್ಲ. ಹಿಂದೂ ಸಾಮಾನ್ಯವಾಗಿ ಮಾಘ ಆದಿ ಐದು ತಿಂಗಳಲ್ಲಿ ನಡೆಯಬಹುದು ಎಂದಿದ್ದ ಮದುವೆಗಳು ಈಗ ವರ್ಷದ ಯಾವ ತಿಂಗಳಲ್ಲಾದರೂ ನಡೆಯುತ್ತಿವೆ ಇದು ಸಮಾಜ ತಾನೇ ಮಾಡಿಕೊಂಡಿರುವ ಮಾರ್ಪಾಡು.

ವಾಡಿಕೆಯಂತೆ ಒಳ್ಳೆಯವು ಎನ್ನುವ ದಿನದಲ್ಲಿ ಮದುವೆ ಉಪನಯನ ಮುಂತಾದ ಶುಭಕಾರ್ಯಗಳು ನಡೆಯುವುದಾದರೂ ಲಗ್ನಗಳನ್ನು ಆರಿಸುವುದರಲ್ಲಿ ನಿಷ್ಕರ್ಷೆಯನ್ನು ಅತಿಮಾಡಬಾರದು.

ಮದುವೆಗೆ ಮೊದಲಲ್ಲಿ ಜಾತಕಗಳನ್ನು ನೋಡಿಸಿ ಅವು ಹೊಂದಿದರೆ ಮಾತ್ರ ಸಂಬಂಧ ನಡೆಯತಕ್ಕದ್ದು ಎಂಬ ಈಗಿನ ಕಟ್ಟಳೆಯನ್ನು ಬಿಡಬೇಕು. ಮನೋಜಯವೇ ನಿರ್ಣಾಯಕ ಸೂತ್ರ ಎಂದು ಮಾಂಡವ್ಯನ ವಾಕ್ಯ, ಎನ್ನುವುದು ಒಂದು ನಾಣ್ಣುಡಿ ವಧೂವರರು ಅಥವಾ ಅವರಿಗಾಗಿ ಅವರ ಹಿರಿಯರು ಒಪ್ಪಿದ ಸಂಬಂಧನ್ನು ಬೆಳೆಸಬಹುದು ಎನ್ನುವುದು ಈಗ ಇಂಥ ಸಂದರ್ಭಗಳಲ್ಲಿ ಮೂಡುವ ಅನೇಕ ಕ್ಲೇಶಗಳಿಗೆ ನಿವಾರಣೆ ಆಗುತ್ತದೆ. ಜಾತಕ ನೋಡಿ ಭವಿಷ್ಯವನ್ನು ತಿಳಿದು ವ್ಯವಹಾರದಲ್ಲಿ ತೊಡಗುವ ಕ್ರಮವನ್ನು ಜನ ಸಂಪೂರ್ಣವಾಗಿ ತೊರೆಯಬೇಕು. ಇದರಲ್ಲೂ ವಿಶೇಷವಾಗಿ ಒಂದು ಒಳ್ಳೆಯ ಅಥವಾ ಅವಶ್ಯಕ ಆದ ಕೆಲಸ ಮಾಡುವುದರಲ್ಲಿ ಜನ ಒಳ್ಳೆಯ ಲಗ್ನಕ್ಕೆಂದು ಕಾಯ್ದು ತಡಮಾಡಕೂಡದು.

ಜಾತಕವನ್ನು ನೋಡಿಸಿ ಯಾರೂ ತಮ್ಮ ಆಯುಸ್ಸು ಎಷ್ಟು ಎಂದು

ತಿಳಿಯುವ ಯೋಚನೆಯನ್ನು ಮಾಡಬಾರದು "ದೈವ ಇದೆ, ನಮ್ಮನ್ನು ನೋಡಿಕೊಳ್ಳುತ್ತದೆ ಅದರ ಇಚ್ಛೆ ಏನು ಮಾಡಿದರ ಅದೇ ಒಳ್ಳೆಯದು," ಎಂಬ ಸಮಾಧಾನದಲ್ಲಿ ಬಾಳಬೇಕು. ಈಗ ಪತ್ರಿಕೆಗಳಲ್ಲಿ ವರ್ಷದ ಭವಿಷ್ಯ, ತಿಂಗಳ ಭವಿಷ್ಯ, ವಾರದ ಭವಿಷ್ಯ, ಎಂದು ಪ್ರಕಟವಾಗುತ್ತಿರುವ ಮಾತೆಲ್ಲ ಒಂದು ಹುಡುಗಾಟ ಆಗಿದೆ ಜ್ಯೋತಿಷದಲ್ಲಿ ನಮ್ಮ ಜನ ನಂಬಿದಂತೆ ಈ ಮುನ್ನ ನಂಬದೆ ಇದ್ದ ವಿದೇಶದ ಜನ ಕೂಡ ಈಗ ಇಂಥ ಭವಿಷ್ಯವನ್ನು ನಂಬುವ ಮನಸ್ಸನ್ನು ಬೆಳೆಸಿಕೊಳ್ಳುತ್ತಿದಾರೆ ಒಳ್ಳೆಯ ಸಂಗತಿ ಅನುಕರಣಕ್ಕೆ ಅರ್ಹವಾದವು ಎಷ್ಟೋ ಇರುವಲ್ಲಿ ಅವನ್ನೆಲ್ಲ ಬಿಟ್ಟು ಇಂಥ ಅವಿವೇಚನೆಯ ಕ್ರಮದಲ್ಲಿ ನಮ್ಮನ್ನು ಪೋಲ್ಸಂಕ್ತಿ ಮಾಡಿಕೊಂಡಿರುವ ಈ ಜನ ಜಾಣರಲ್ಲ. ಇದು ಹೇಗೇ ಆದರೂ, ಇವರೂ ನಂಬಿದ್ದಾರಲ್ಲ, ನಾವು ಏಕೆ ಬಿಡೋಣ, ಎಂದು ನಮ್ಮ ಜನ ಈ ತಪ್ಪು ಭಾವನೆಗಳನ್ನು ಉಳಿಸಿಕೊಳ್ಳಬಾರದು

ಒಂಟಿ ಸೀನು, ಒಂಟಿ ಆದ ಗಂಡು ಅಥಾವಾ ಹೆಣ್ಣು ಎದುರಿಗ ಬರುವುದು, ಬೆಕ್ಕು ದಾರಿಯಲ್ಲಿ ಅಡ್ಡವಾಗಿ ಹಾಯುವುದು ಮುಂತಾದ ಅಪಶಕುನಗಳನ್ನು ಕುರಿತ ನಂಬಿಕೆಯನ್ನು ಬಿಟ್ಟುಬಿಡಬೇಕು. ಏಳು ಹನ್ನೊಂದು ಕೆಟ್ಟ ಸಂಖ್ಯೆಗಳು ಎಂದು ಮುಂತಾದ ನಂಬಿಕೆಗಳನ್ನು ಬಿಡಬೇಕು.

ಎಲ್ಲ ವಿವರದಲ್ಲಿಯೂ ದೈವವನ್ನು ನೆನೆದು ಅದರ ಸನ್ನಿಧಿಯಲ್ಲಿ ಪ್ರಾರ್ಥನೆಯನ್ನು ಮಾಡಿ ಧೈರ್ಯವಾಗಿ ಅಡಿ ಇಡುವುದು ಸಂಪೂರ್ಣ ಕ್ಷೇಮಸಾಧಕ ಕ್ರಮ ಎಂದು ಜನ ಈ ದಿನವೇ ನಿಶ್ಚಯ ಮಾಡಿಕೊಳ್ಳಬೇಕು.

ನಮ್ಮ ಸಮಾಜದಲ್ಲಿ ತುಂಬಾ ಕಷ್ಟಕ್ಕೆ ಕಾರಣವಾಗಿರುವ ಕ್ರಮ ನಾವು ಗೃಹಸ್ಥ ಕರ್ತವ್ಯಗಳಲ್ಲಿ ಬೆಳೆಸಿಕೊಂಡಿರುವ ಕಲಾಪದ ವಿಸ್ತಾರ ಆಗಮಗಳ ಪ್ರಕಾರ ಆಲಯಗಳಲ್ಲಿ ನಡೆಯುವ ಪೂಜೆಯಲ್ಲಿ ಅನೇಕ ವಿವರಗಳಿರುತ್ತವೆ. ಮನೆಯಲ್ಲಿ ಮಾಡುವ ಪೂಜಗಳಲ್ಲಿಯೂ ಈ ಎಲ್ಲ ವಿವರ ಇಷ್ಟೇ ಚೆನ್ನಾಗಿ ನಡೆಯುವುದು ಸುಲಭವಲ್ಲ. ವೈದಿಕ ಮನೆತನಗಳಲ್ಲಿ ಹೀಗೆ ಮಾಡುವುದಕ್ಕೆ ಬಿಡುವು ಇರಬಹುದು. ವ್ಯಾವಹಾರಿಕ ಸಂಸಾರಗಳಲ್ಲಿ ಇದು ಕಷ್ಟವಾಗಿ ಈಗ ನಮ್ಮಲ್ಲಿ ಮನೆಯಲ್ಲಿ ದೇವರಪೂಜೆಯ ಕ್ರಮ ನಿಂತೇ ಹೋಗಿದೆ. ಇದು ಒಳಿತಲ್ಲ. ಪೂಜೆಯ ಕ್ರಮವನ್ನು ಸುಲಭ ಮಾಡಿಕೊಂಡು ಎಲ್ಲ ಮನೆಯಲ್ಲೂ ಅದು ನಡೆಯುವಂತೆ ಮಾಡುವುದು ಶುಭಕರ.

ಕರ್ಮಗಳ ಸುಲಭ ರೂಪವನ್ನು ಜೈನಸಂಪ್ರದಾಯ ಅಣುವ್ರತ ಎಂದು ಕರೆಯುತ್ತದೆ. ಹಿಂದೂ ಮತದ ಎಲ್ಲ ಕರ್ಮಕ್ಕೂ ಇಂಥ ಸುಲಭ ರೂಪವನ್ನು ನಿಯಮಿಸಿ ಅಷ್ಟನ್ನಾದರೂ ವಾಡಿಕೆಯಲ್ಲಿ ಉಳಿಸುವುದು ಒಳ್ಳೆಯದು

ನಮ್ಮಲ್ಲಿ ದಿನದಲ್ಲಿ ಮೂರು ಬಾರಿ ಸಂಧ್ಯಾವಂದನೆ ಮಾಡುವುದು ನಿಯಮ ಕ್ರಮವಾಗಿ ಮಾಡಿದರೆ ಇದು ಎರಡು ಗಳಿಗೆಯಷ್ಟು ಹೊತ್ತು ಹಿಡಿಯುವ ಕ್ರಮ ಹಿಂದಿನ ಕಾಲದ ಗ್ರಾಮಜೀವನದಲ್ಲಿ ದಿನವೂ ಮೂರು ಬಾರಿ ಈ ಕರ್ತವ್ಯವನ್ನು ಮಾಡುತ್ತಿದ್ದಿರಬಹುದು ನಾನು ಕಂಡಂತೆ ನಮ್ಮಲ್ಲಿ ವೈದಿಕರು ಕೂಡ ಹೀಗೆ ಮಾಡುತ್ತಿರಲಿಲ್ಲ. ಬೆಳಗಿನ ವಂದನೆ ಮಧ್ಯಾಹ್ನದ ವಂದನೆಯೊಡನೆ ಸೇರುತ್ತಿತ್ತು ಸಂಜೆಯ ವಂದನೆ ಬೇಗನೆ ಮುಗಿಯುತ್ತಿತ್ತು. ವಂದನೆಯನ್ನು ಸರಳಮಾಡಿ ಒಬ್ಬೊಬ್ಬರೂ ತಪ್ಪದೆ ಮೂರು ಬಾರಿ ಅದನ್ನು ಮಾಡಲು ಏರ್ಪಡಿಸುವುದು ಒಳ್ಳೆಯದು

ದ್ವಿಜನಿಗೆ ಅವಶ್ಯಕವೆಂಬ ಕರ್ಮಗಳಲ್ಲಿ ಹಲವು ಈಗಾಗಲೇ ಹೋಗಿ ಬಿಟ್ಟಿವೆ ಮದುವೆ ಐದು ದಿನಗಳ ಕರ್ಮವಾಗಿದ್ದದ್ದು ಈಗ ಒಹುಮಾಲು ಒಂದು ದಿನದಲ್ಲಿ ಮುಗಿಯುತ್ತಿದೆ. ಇದನ್ನೇ ಕ್ರಮ ಎಂದು ಇಟ್ಟುಕೊಳ್ಳುವುದು ಒಳ್ಳೆಯದು

ವೈದಿಕ ಉತ್ತರಕ್ರಿಯೆ ಈಗ ತುಂಬಾ ವಿಸ್ತಾರ ಆದ ಕಲಾಪ ಆಗಿದೆ. ಇದರ ಮೂಲದ ಭಾವನೆಗಳೂ ಆದಿಕಾಲದ ಹಲವು ಭಾಗಗಳಿಂದು ಉದಿಸಿದವಾಗಿವೆ. ಇವುಗಳಲ್ಲಿ ತೀರ ಅವಶ್ಯಕವೆಂಬ ಕೆಲವು ವಿವರಗಳನ್ನು ಉಳಿಸಿಕೊಂಡು ಉಳಿದವನ್ನು ಬಿಡುವುದು ಒಳ್ಳೆಯದು

ಶ್ರಾದ್ಧದ ಮಾತೂ ಹೀಗೆಯೇ ನಾವು ತಿಥಿ ಮಾಡಿದರೆ ಪಿತೃಗಳಿಗೆ ತೃಪ್ತಿ ಆಗುತ್ತದೆ ಎನ್ನುವ ಕಲ್ಪನೆ ಸುಧಾರಕರ ಅಪಹಾಸ್ಯಕ್ಕೆ ಗುರಿಯಾಗಿದೆ. ಹಿರಿಯರನ್ನು ನೆನೆಯುವುದು ಶುಭಕರ ; ಇದನ್ನು ಮುಖ್ಯವಾಗಿರಿಸಿಕೊಂಡು ಶ್ರಾದ್ಧಕರ್ಮವನ್ನು ಸರಳಮಾಡುವುದು ಒಳ್ಳೆಯದು.

ಜೊತೆಗೆ ನಮ್ಮ ಆಚಾರದ ಹಲವು ವಿವರಗಳನ್ನು ನಮ್ಮ ಜನರಿಗೆ ತಿಳಿಯಹೇಳುವುದು ಅವಶ್ಯಕ. ಸಂಧ್ಯಾವಂದನೆಯನ್ನು ಮಾಡಬೇಕು ಏಕೆ ? ಮಾಡದೇ ಇದ್ದರೆ ಏನು ನಷ್ಟ ?

ದೇಹಕ್ಕೆ ವ್ಯಾಯಾಮ ಇರುವಂತೆ ಮನಸ್ಸಿಗೆ ವ್ಯಾಯಾಮ ಇದೆ. ಪೂಜೆ,

ಜಪ, ವ್ರತ, ಇವು ಮನಸ್ಸಿಗೆ ಶಕ್ತಿಯನ್ನು ತರುತ್ತವೆ ಇವನ್ನು ನಿಯಮಿಸಿದವರು ತುಂಬಾ ಜಾಣ ಜನ. ತಮ್ಮ ಅನುಭವದಿಂದ ಲಾಭ ಪಡೆದು ಅವರು ನಮಗೂ ಆ ಲಾಭ ದೊರೆಯಲೆಂದು ನೇಮಗಳನ್ನು ವಿಧಿಸಿದರು ಈ ನೇಮ ಬೇಡ, ಬೇರೆ ರೀತಿಯಲ್ಲಿ ನಾನು ಅದೇ ಶಕ್ತಿಯನ್ನು ಪಡೆಯುತ್ತೇನೆ, ಎನ್ನುವುದಾದರೆ ಅಡ್ಡಿಯಿಲ್ಲ. ಆದರ ಬೇರೆ ಕ್ರಮವನ್ನು ಹಿಡಿಯದೆ ಈ ನೇಮವನ್ನು ಬಿಡುವುದಷ್ಟೆ ಆದರೆ ಈ ನೇಮದಿಂದ ಬರುವ ಪ್ರಯೋಜನವನ್ನು ಒಲ್ಲೆ ಎಂದಂತಾಗುತ್ತದೆ. ಚೇತನದ ಉನ್ನತಿಯನ್ನು ಬಯಸುವವರು ಆಚಾರವನ್ನು ಹೀಗೆ ನಿರಾಕರಿಸಬಾರದು.

ಸ್ನಾನದ ಬಳಿಕ ಮುಖಕ್ಕೆ ವಿಭೂತಿ ಬಳಿದುಕೊಳ್ಳುವುದು, ನಾಮ ಹಾಕಿಕೊಳ್ಳುವುದು, ಮುದ್ರೆ ಹಾಕಿಕೊಳ್ಳುವುದು ಇದರ ಉದ್ದೇಶ ಏನು? ಈ ಕ್ರಿಯೆಗಳ ಉದ್ದೇಶ ಇನ್ನು ಮರೆತುಹೋಗಿದೆ, ಹೊರಗಿನ ಜನ ಇದನ್ನು ನೋಡಿ ನಕ್ಕಾಗ ನಾವು ನಾಚಿಕೊಳ್ಳುತ್ತೇವೆ. ಸಂಗತಿ ತಿಳಿಯದ ಪಾಶ್ಚಾತ್ಯ ಜನ ಇವನ್ನು 'ಕ್ಯಾಸ್ಟ್ ಮಾರ್ಕ್' ಎನ್ನುತ್ತಾರೆ; ಎಂದರೆ ಜಾತಿಯ ಲಾಂಛನ. ವಿಭೂತಿಯಾಗಲಿ ಮೂರು ನಾಮ ಆಗಲಿ ಒಂದು ಜಾತಿಗೆ ಸೇರಿದ ಗುರುತಲ್ಲ. ಶೈವರೆಲ್ಲ ವಿಭೂತಿಯನ್ನು ಧರಿಸುತ್ತಾರೆ. ಈ ವಿಷಯದಲ್ಲಿ ಬ್ರಾಹ್ಮಣ, ಹರಿಜನ, ಒಕ್ಕಲಿಗ, ಬೇಡ, ಎಂಬ ಭೇದ ಇಲ್ಲ ಮೂರು ನಾಮವೂ ಅಷ್ಟೇ, ಶ್ರೀವೈಷ್ಣವರ ಲಾಂಛನ. ಬ್ರಾಹ್ಮಣ, ಹರಿಜನ, ಒಕ್ಕಲಿಗ, ನಾಯುಡು, ಶ್ರೀವೈಷ್ಣವರೆಲ್ಲ ಈ ಲಾಂಛನವನ್ನು ಧರಿಸುತ್ತಾರೆ. ವಿಭೂತಿ, ಅದನ್ನು ಧರಿಸುವವನು ಕಾಮಾದಿ ಅರಿವರ್ಗವನ್ನು ಸುಟ್ಟು ಅವುಗಳ ಬೂದಿಯನ್ನು ಲಾಂಛನಮಾಡಿಕೊಂಡಿದ್ದಾನೆ ಎಂದು ಹೇಳುತ್ತದ. ನಾನು ಹೀಗೆಂದು ಹೇಳಿದಾಗ ನನ್ನ ಸ್ಮಾರ್ತ ಮಿತ್ರರು ವೀರಶೈವ ಮಿತ್ರರು ಇದು ತಮಗೆ ತಿಳಿದಿರಲಿಲ್ಲ ಎಂದು ಹೇಳಿದ್ದುಂಟು ಶ್ರೀವೈಷ್ಣವರು ಹಲವರು ಬಿಳಿಯನಾಮ ದೇವರ ಪಾದದ ಗುರುತು, ಮಧ್ಯದ ಕೆಂಪುನಾಮ ಶ್ರೀದೇವಿಯ ಗುರುತು, ಎನ್ನುವುದನ್ನು ಕಾಣರು. ಇದಕ್ಕೆ ಸಂಪೂರ್ಣ ಪ್ರಮಾಣ ಇವರು ದೇವರ ವಿಗ್ರಹಕ್ಕೆ ನಾಮವನ್ನು ಹಾಕುವುದು. ನಮ್ಮಲ್ಲಿ ಹಿರಿಯರು ಬಿಳಿಯನಾಮ ಎರಡರ ಮೇಲುಭಾಗವನ್ನೂ ಅಡಿಯ ಕೊನೆಯ ಬೆರಳಿನಂತೆ ಬರೆದುಕೊಳ್ಳುತ್ತಿದ್ದರು. ಈಗ ಈ ವಾಡಿಕೆ ತಪ್ಪಿದಂತೆ ಕಾಣುತ್ತದೆ. ತೆಂಗಲೆ ವಡಗಲೆ

ಪಂಗಡಗಳ ಶ್ರೀವೈಷ್ಣವರು ದೇವರ ಮೂರ್ತಿಯ ಮೇಲೆ ಹಚ್ಚುವ ನಾಮಕ್ಕೆ ಪೀಠ ಇರಬೇಕೇ ಬೇಡವೇ ಎನ್ನುವ ವಿಷಯದಲ್ಲಿ ಜಗಳ ಮಾಡುವುದರ ಕಾರಣ ನಾವು ದೇವರ ಪಾದದ ಲಾಂಛನ ಎನ್ನುವುದನ್ನು ಕಾಣದೆ ಇರುವುದು. ನನ್ನ ಹಣೆಯಮೇಲೆ ದೇವರ ಪಾದವನ್ನು ಬರೆದುಕೊಂಡು ನಾನು ದೇವರ ಸೇವಕ ಎಂದು ತೋರಿಸುತ್ತೇನೆ ಎನ್ನುವುದು ಸರಿಯೇ ಮೂರ್ತಿಯ ಹಣೆಯಮೇಲೆ ಅದರ ಪಾದದ ಗುರುತನ್ನು ಹಾಕಬೇಕೆ? ಮೂರ್ತಿಯ ಹಣೆಯಮೇಲೆ ಹಾಕುವುದು ಒಂದು ತಿಲಕ ಬಿಳಿಯನಾಮ ಅಡಿಯ ಫಲಕ, ಕೆಂಪುನಾಮಕ್ಕೆ ಹಿನ್ನೆಲೆ ಇದನ್ನು ಶ್ರೀವೈಷ್ಣವ ಗುರುಗಳೇ ಕಾಣರು, ಆಲಯಗಳ ಆಗಮಿಕ ಸ್ಥಾನಿಕರು ಕಾಣರು, ಇನ್ನು ಸಾಮಾನ್ಯ ಶ್ರೀವೈಷ್ಣವ ಒಬ್ಬ ತಿಳಿಯಬೇಕು ಹೇಗೆ? ಮಾಧ್ವರು ಹಚ್ಚಿಕೊಳ್ಳುವ ಮುದ್ರೆಗಳು ದೇವರ ಹೆಸರಿನಲ್ಲಿ ಹಾಕಿ ಕೊಳ್ಳುವ ಲಾಂಛನಗಳು ದೇಹ ದೇವರ ರಥ ಅವನ ಹೆಸರಿನ ಲಾಂಛನದಿಂದ ಪಾವನ ಮಾಡುವುದಕ್ಕೆ ಮುದ್ರೆ ಹರಿದಾಸರೊಬ್ಬರು ಒಂದು ರಥೋತ್ಸವದಲ್ಲಿ ರಥದಲ್ಲಿ ಮಂಡಿಸಿದ್ದ ಸ್ವಾಮಿಯನ್ನು ಕುರಿತು, 'ರಥದಿಂದ ರಥಕೆ ಬಾರೋ ಹರಿಯೇ,' ಎಂದು ಬೇಡಿ ಹಾಡಿದ ಕೀರ್ತನೆ ಒಂದಿದೆ ನಮ್ಮ ಜನವೆಲ್ಲ ಈ ಲಾಂಛನಗಳ ಅರ್ಥವನ್ನು ತಿಳಿಯಬೇಕು. ನಮ್ಮ ಹಿರಿಯರು ಅಶೌಚ ದಿನದಲ್ಲಿ ಮಾತ್ರ ಬರಿಮುಖವಾಗಿರುತ್ತಿದ್ದರು. ಉಳಿದಂತೆ ಅವರ ಮುಖದ ಮೇಲೆ ಈ ಲಾಂಛನಗಳು ಇರಲೇಬೇಕು ಇವನ್ನು ಧರಿಸುವುದು ತನ್ನ ಬಾಳಿನಲ್ಲಿ ದೈವಕ್ಕೆ ಎಡೆಕೊಟ್ಟಿದ್ದೇವೆ ಎಂದು ವಚನಕೊಡುವ ಕ್ರಮ. ಅರ್ಥವನ್ನು ತಿಳಿದು ನಡೆದರೆ ಇವು ಜೀವನವನ್ನು ಪಾವನ ಮಾಡಬಲ್ಲವು.

ಇವೆಲ್ಲದರ ಭಾವ ನಮ್ಮ ಹಿರಿಯರು ಮನುಷ್ಯನ ದಿನದಿನದ ಬಾಳುವೆಯ ಎಲ್ಲ ವಿವರದಲ್ಲಿಯೂ ದೇವರ ನೆನಪು ಇರಬೇಕು ಎಂದು ಬಯಸಿದರು ಎನ್ನುವುದು ದಿನದ ಜೀವನವೆಲ್ಲ ದೇವರಸೇವೆ 'ಯದ್ಯತ್ ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ.' 'ಕರ್ಮಣಾ ಮನಸಾ ವಾಚಾ ಯಾ ಚೇಷ್ಟಾ ಮಮ ನಿತ್ಯಶಃ ಕೇಶವಾರಾಧನೇ ಸಾಸ್ಯಾತ್ ಜನ್ಮಜನ್ಮಾಂತರೇಷ್ವಪಿ.' 'ನಾನು ಮಾಡುವ ಎಲ್ಲ ಕರ್ಮವೂ ನಿನ್ನ ಆರಾಧನೆ ನನ್ನ ಮನಸ್ಸು ನುಡಿ ಅವಯವಗಳು ಮಾಡುವ ಚಲನವಲನವೆಲ್ಲ ನಿನ್ನ ಸೇವೆ ಆಗಲಿ,' ಎನ್ನುವ ಈ

ರ್ಗನೆಗಳು ದಿನವೂ ನೆನೆದು ನಡೆಸುವ ವಾಕ್ಯಗಳಾದರೆ ಮನುಷ್ಯ ಉದ್ಧಾರ ತೆಯೇ.

ದೇವರ ವಿಗ್ರಹಗಳನ್ನು ಕುರಿತೂ ಜನರಲ್ಲಿ ತಿಳುವಳಿಕೆ ಹರಡಬೇಕು. ಶಾಸ್ತ್ರದಲ್ಲಿ ಒಂದೊಂದು ವಿವರಕ್ಕೂ ಅರ್ಥ ಇದೆ. ಒಂದುಕಾಲದಲ್ಲಿ ಈ ಗಳು ಜನರಿಗೆ ತಿಳಿದೂ ಇದ್ದಿರಬೇಕು. ದಿನಕಳೆದಂತೆ ರೂಢಿಯಿಂದ ಈ ಮಾರೆ ಆಯಿತು ವೈಷ್ಣವ ಮೂರ್ತಿಯಲ್ಲಿ ಶಂಖ ಚಕ್ರಗಳು ದೇಶ ಗಳ ಸಂಕೇತಗಳು ಗದೆ ದೈವ ಶಾಸಕ ಎನ್ನುವುದರ ಗುರುತು ಪದ್ಮ ಸೌಂದರ್ಯಸ್ವರೂಪ ಎನ್ನುವುದರ ಗುರುತು. ಮೂರ್ತಿಗೆ ಕೆಲವುವೇಳೆ ಟು ತೋಳೇ ಇದ್ದರೂ ಇನ್ನು ಕೆಲವುವೇಳೆ ನಾಲ್ಕು ತೋಳು ಇರುವುದರ -, ರೂಪ ಇಲ್ಲದ ದೈವಕ್ಕೆ ರೂಪುಕೊಡುವವೇಳೆ, ಅದಕ್ಕೆ ನನ್ನ ನಿನ್ನ ನದ ಮಿತಿಯನ್ನು ಅನ್ವಯಿಸಬೇಡ ಎನ್ನುವುದು ದೇವರು ಧರಿಸುವ ರೂಪ ಪ್ರಕೃತ, ದಿವ್ಯ, ಸುಂದರ. ಮಹಿಷಾಸುರಮರ್ದಿನಿಯನ್ನು ಹಲವು ಳಿನಮೂರ್ತಿಯಾಗಿ ಪೂಜಿಸುವುದರ ಅರ್ಥ ದೈವದಬಲ ಆಳತೆಗೆ ಮೀರಿದ್ದು ನು ಹೇಳುವುದು ಶಿವನ ಲಿಂಗವನ್ನು ವ್ಯಕ್ತಿಕಾಲು ಮುಖ ಕಣ್ಣು ದೆ ಒಂದು ಲಿಂಗವಾಗಿ ಮಾಡುವುದು ದೈವರೂಪರಹಿತ, ನಿರಾಕಾರ ನಿರ್ಗುಣ ಕ್ಷ್ಮತತ್ವ ಎನ್ನುವುದಕ್ಕಾಗಿ ಈಶ್ವರ ಲಿಂಗವನ್ನು ಐದು ರೂಪದ ಲಿಂಗ ನ್ನುವುದು ದೈವ ಪಂಚಭೂತಗಳಲ್ಲಿ ರೂಪು ತಳೆದಿದೆ ಎನ್ನುವುದಕ್ಕಾಗಿ ರ್ಮ್ಮಲ್ಲಿ ಚಿದಂಬರದ ದೇವರನ್ನು ಕುರಿತ ರಹಸ್ಯ ಒಂದಿದೆ ಎಂದು ನಮ್ಮಲ್ಲಿ ಬಿಕೆ. ರಹಸ್ಯ ಏನು ? ಉಳಿದ ಕಡೆಗಳಲ್ಲಿ ಮಣ್ಣು ಸುಣ್ಣಕಲ್ಲು ಲೋಹ ವುಗಳಿಂದ ಮಾಡಿದ ಒಂದು ವಸ್ತು ಇರುವಂತೆ ಇಲ್ಲಿ ಒಂದು ಲಿಂಗ ಅಲ್ಲ ನು ಆಕಾಶಲಿಂಗದ ಸ್ಥಾನ. ಲಿಂಗದ ಸ್ಥಾನದಲ್ಲಿ ಕಣ್ಣಿಗೆ ಕಾಣುವ ಲಿಂಗ ಲ್ಲ, ಇದೇ ರಹಸ್ಯ ಮಹಾಬಲೇಶ್ವರದಲ್ಲಿ ಅಪ್‌ಲಿಂಗ. ಅಲ್ಲಿ ಈಶ್ವರ ರಿನ ರೂಪದಲ್ಲಿ ಪ್ರತ್ಯಕ್ಷ. ಕೆಲವರು ಲಿಂಗ ಶಿಶ್ನದ ಲಾಂಛನ ಎಂದು ಬಿದ್ದಂತೆ ಕಾಣುತ್ತದೆ. ದೈವವನ್ನು ಹೀಗೆ ಭಾವಿಸಬಹುದೇ ಎಂದು ಬೇರೆ ವರಿಗೆ ತೋರಿರುವುದು ಸಹಜ ದಿಟದಲ್ಲಿ ಈ ಸಂಕೋಚ ನಮ್ಮ ವ್ಯಕ್ತಿ ವನದ ನಾಚಿಕೆಗಳಿಂದ ಮೂಡಿದ್ದು. ಮೇಲ್ನೋಟಕ್ಕೆ ಸರಿಯಲ್ಲ ಎಂದರೂ ನ್ತವದಲ್ಲಿ ಶಿಶ್ನವನ್ನು ಒಂದು ಹೀನವಸ್ತು ಎಂದು ಭಾವಿಸುವುದು ತಪ್ಪು.

ಮನುಜಕುಲವನ್ನು ಅಮರವಾಡಲು ಪ್ರಕೃತಿ ಬಳಸಿರುವ ಸಾಧನ ಅದು ಈ ಕಾರಣದಿಂದ ಅದರಲ್ಲಿ ದೈವೀಸತ್ಯವನ್ನು ಆರೋಪಿಸುವುದು, ಕಾಣುವುದು, ಪೂಜಿಸುವುದು, ತೀರ ಯುಕ್ತ ಇಷ್ಟೇ ಸರಿ, ಯುಕ್ತ, ಲೋಕಮಾತೆಯು ಯೋನಿಯನ್ನು ಮೂರ್ತಿಯಾಗಿ ರೂಪಿಸಿ ಅದರಲ್ಲಿ ದೈವದ ಲೋಕಮಾತೃತ್ವ ವನ್ನು ಕಲ್ಪಿಸಿ ಪೂಜಿಸುವುದು. ಇಷ್ಟೇ ಪೂಜಿಸುವವೇಳೆ ಎದುರಿಗಿರುವುದು ದೈವ ಎನ್ನುವ ಎಚ್ಚರ ಸಂಪೂರ್ಣವಾಗಿರಬೇಕು ನಮ್ಮ ಜನಕ್ಕೆ ಬಹುಕಾಲದ ವಾಡಿಕೆಯಿಂದ ಈ ಎಚ್ಚರ ಬಹುಪಾಲು ಸಿದ್ಧಿಸಿತ್ತು ಎನ್ನುವುದು, ಅವರು ಈ ಆಲಯಗಳಿಗೆ ಹೋಗಿಬರುವುದರಲ್ಲಿ ಎಷ್ಟು ನಿಸ್ಸಂಕೋಚವಾಗಿ ನಡೆಯು ತ್ತಿದ್ದರು ಎನ್ನುವುದರಲ್ಲಿ ಕಾಣುತ್ತದ

ಶ್ರೀನಿವಾಸಶಾಸ್ತ್ರಿಗಳವರು ಯೋನಿಮಾತ್ರಾ ಕ್ಷೇತ್ರವನ್ನು ಕುರಿತು ಹೇಳಿದ ಕಥೆಯ ಸಂಗತಿಯನ್ನು ಈ ಮುನ್ನ ತಿಳಿಸಿದ್ದಾಗಿದೆ ಸರಿಯಾದ ಅರ್ಥದಲ್ಲಿ ತಿಳಿದವಾದರೆ ಆ ಕಥೆಯಲ್ಲಿ ಶಿವನನ್ನೂ ದೇವಿಯನ್ನೂ ಕುರಿತ ಮಾತಷ್ಟೇ ದುಷ್ಟವಾಗುತ್ತದೆ, ದೈವವನ್ನು ಯೋನಿಮಾತ್ರಾ ಎಂದು ಕಲ್ಪಿಸಿದ್ದು ತಪ್ಪಾಗುವುದಿಲ್ಲ. 'ಮಾತ್ರಾ' ಶಬ್ದದ ಅರ್ಥವೂ ಬೇರೆಯಾಗುತ್ತದೆ. ಆ ಅರ್ಥ 'ಬರಿಯ' ಎಂದಲ್ಲ, 'ರೂಪ' ಎಂದು.

ದೈವದ ಕಲ್ಪನೆಗಳೆಲ್ಲ ಒಂದೇ ಆದ ದೇವರನ್ನು ಕುರಿತ ಅನೇಕ ಸಂಕೇತ ಗಳು ಎನ್ನುವುದು ನಮ್ಮ ಧರ್ಮದ ಹೊಸರೂಪದ ಕೇಂದ್ರಭಾವ ಆಗಬೇಕು ಇದು ಮನಮುಟ್ಟುವಂತೆ ಆಲಯಗಳ ಪೂಜೆಯ ಕ್ರಮದಲ್ಲಿ ಮಾರ್ಪಾಡು ಆಗಬೇಕು. ಆಲಯ ಯಾವ ಒಂದು ದೇವರ ಹೆಸರಿನಲ್ಲೇ ಇದ್ದರೂ ಆಲಯದಲ್ಲಿ ಪೂಜೆ ಪಡೆಯುತ್ತಿರುವ ದೈವ ಹಲವು ಹೆಸರನ್ನು ಹೊತ್ತ ದೈವವೊಂದೇ ಎಂದು ಸ್ಪಷ್ಟವಾಗುವುದಕ್ಕಾಗಿ ಒಂದೊಂದು ದೇವಾಲಯದಲ್ಲೂ ಮೂಲಮೂರ್ತಿಯ ಜೊತೆಗೆ ಬೇರೆ ಹಲವಾರು ಕಲ್ಪನೆಗಳ ಮೂರ್ತಿಗಳೂ ಇರುವಂತೆ ಏರ್ಪಡಿಸ ಬೇಕು ಪೂಜೆಯ ಕ್ರಮದಲ್ಲಿ ಒಂದು ಹೆಸರನ್ನಲ್ಲ, ಹಲವಾರು ಹೆಸರನ್ನು ನೇರಿಸಿ ಹೇಳಬೇಕು.

ಇದು ಹೊಸಮಾತೇನಲ್ಲ. ವೈಷ್ಣವ ದೇವಾಲಯಗಳಲ್ಲಿ ಲೋಕಮಾತೆಯ ಅರ್ಚನೆಯವೇಳೆ ಅಷ್ಟೋತ್ತರ ನಾಮಗಳಲ್ಲಿ ಕೊನೆಯ ನಾಮಗಳು ನವದುರ್ಗಾ ಮಹಾಕಾಳೀ ಬ್ರಹ್ಮವಿಷ್ಣುಶಿವಾತ್ಮಿಕಾ ತ್ರಿಕಾಲ ಜ್ಞಾನಸಂಪನ್ನಾ ಭುವನೇಶ್ವರೀ.

ಚಾರವಂತ ಶ್ರೀವೈಷ್ಣವರು ಶಿವಾಲಯಕ್ಕೆ ಹೋಗುವುದಿಲ್ಲ, ಶಿವನನ್ನು ೂಜಿಸುವುದಿಲ್ಲ. ಇಂಥ ಜನ, ಲಕ್ಷ್ಮೀದೇವಿಯೋ ಕಾಳಿ ಎಂದು, ಲೋಕಮಾತೆ ುಲ್ಲಿ ಬ್ರಹ್ಮ ವಿಷ್ಣು ಶಿವ ಇದ್ದಾರೆ ಎನ್ನುತ್ತ, ದೈವಕ್ಕೆ ಅರ್ಚನೆ ಸಲ್ಲಿಸುತ್ತಾರೆ

ನಮ್ಮ ಜನವೆಲ್ಲ ದೈವದ ಒಂದೊಂದು ರೂಪದಲ್ಲೂ ಇತರ ಎಲ್ಲ ೂಪಗಳೂ ಸೇರಿವೆ ಎಂಬುದನ್ನು ಮನಗಂಡು ಒಂದು ರೂಪಕ್ಕೆ ಸೇವೆ ಲ್ಲಿಸುವಲ್ಲಿ ನಾನು ಎಲ್ಲ ರೂಪಗಳನ್ನೂ ತಳೆದಿರುವ ಏಕೈಕ ದೈವವನ್ನು ಪೂಜಿಸುತ್ತಿದ್ದೇನೆ ಎನ್ನುವುದನ್ನು ಮನಗಾಣಬೇಕು

## ೧೫

## ಸಂರಕ್ಷಣ ಕ್ರಮ

ಹಿಂದೂ ಸಮಾಜದ ಜನ ಬೇರೆ ಮತಕ್ಕೆ ಹೋಗದಂತೆ ನೋಡಿಕೊಳ್ಳು ವುದಕ್ಕಾಗಿ ವಿಶ್ವ ಹಿಂದೂ ಪರಿಷತ್ ಸಂಸ್ಥೆ ರೂಪುಗೊಂಡದ್ದನ್ನು ಈ ಪ್ರಬಂಧದ ಆರಂಭದಲ್ಲಿ ಹೇಳಿದೆ. ಈ ಸಂಸ್ಥೆ ಮಾಡಬೇಕಾದ ಕೆಲಸ ಆದರ ಈ ಕ್ಷಣದ ಗುರಿಯಾದ ಇದು ಒಂದೇ ಅಲ್ಲ, ಎನ್ನುವುದು ಇದುವರೆಗೆ ನಡೆದಿರುವ ಆತ್ಮ ಪರೀಕ್ಷಣದ ವಿನ್ಯಾಸದಿಂದ ಸ್ಪಷ್ಟವಾಗಿರಬೇಕು ಹಿಂದೂ ಧರ್ಮವನ್ನು ಸಂರಕ್ಷಿ ಸಲು ಬಯಸುವವರ ಎದುರಿಗಿರುವ ಕರ್ತವ್ಯವನ್ನು ಹೀಗೆ ಸಂಗ್ರಹಿಸಬಹುದು :

ಹಿಂದುಗಳೆಲ್ಲ ಒಂದು ಜಾತಿ, ಎಲ್ಲರಿಗೂ ವೈದಿಕ ಸಂಸ್ಕಾರಗಳ ಅಧಿಕಾರ ಇದೆ, ಎಂದು ನಿರ್ಣಯ ಆಗಬೇಕು.

ಒಬ್ಬ ದೇವರನ್ನು ಹಲವು ದೇವರಾಗಿ ಮಾಡದೆ, ದೇವರುಗಳಲ್ಲಿ ಶ್ರೇಷ್ಠ ಕನಿಷ್ಠ ಸೌಮ್ಯ ಕ್ಷುದ್ರ ಎಂದು ಮುಂತಾಗಿ ಭೇದಗಳನ್ನು ಕಲ್ಪಿಸಿ ದೇವರನ್ನು ದೈವದ ಉನ್ನತ ಪದವಿಯಿಂದ ಕೆಳಕ್ಕೆ ಇಳಿಸಿರುವ ಕ್ರಮವನ್ನು ಕೊನೆಗಾಣಿಸಿ, ನಮ್ಮ ಧರ್ಮ ದೇವರನ್ನು ರಕ್ಷಿಸಬೇಕು.

ದೇವರು ಎಂದು ಭಾವಿಸಿದ ತತ್ತ್ವಗಳ ವಿಷಯದ ಅಸಾಧು ದುಷ್ಟ ಆದ ಕಥೆಗಳನ್ನು ತೊರೆದು ಈ ದೈವೀ ತತ್ತ್ವಗಳನ್ನು ಮರಳಿ ಉನ್ನತ ಸ್ಥಾನದಲ್ಲಿರಿಸಿ ಸಂರಕ್ಷಿಸಬೇಕು.

ಎಷ್ಟು ಒಳ್ಳೆಯ ಉದ್ದೇಶದಿಂದಲೇ ಆದರೂ ವಾಲ್ಮೀಕಿಯ ರಾಮನನ್ನು

ಉತ್ತರಕಾಂಡದ ಆಭಾಸ ರಾಮನಾಗಿ ಮಾರ್ಪಡಿಸಿದ ಆಭಾಸ ವಾಲ್ಮೀಕಿಯ ಕಾವ್ಯವನ್ನು ಮತಗ್ರಂಥದ ಸ್ಥಾನದಿಂದ ಇಳಿಸಿ ರಾಮಸ್ವಾಮಿನಾಯಕರಂಥ ಜನರ, ಅವರ ಅನುಯಾಯಿಗಳ, ಕೈಯಿಂದ ಕೆರಗಳ ಮಾಲೆಯನ್ನು ಹಾಕಿಸಿ ಕೊಳ್ಳುವ ಪಾಡಿನಿಂದ ಶ್ರೀರಾಮನನ್ನು ರಕ್ಷಿಸಬೇಕು.

ದ್ರಾವಿಡ ಕಳಗಂ ಮುಂತಾದ ಸಂಸ್ಥೆಗಳು ತಮ್ಮದೇ ಆದ ಹಿಂದೂ ಸಮಾಜದ ಬೇರೆ ಸಮುದಾಯದ ಜನವನ್ನು ಹಗೆಗಳಂತೆ ಕಂಡು ಹಿಂಸಿಸುವ ಕ್ರಮ ಆತ್ಮಹನನ ಎಂದು ಪ್ರಚಾರ ನಡೆಸಿ, ಈ ದುಷ್ಟಪ್ರವೃತ್ತಿ ಮತ್ತೆ ತಲೆ ಎತ್ತದಂತೆ ಮಾಡಿ ನಮ್ಮ ಸಮಾಜವನ್ನು ಒಂದಾಗಿ ಉಳಿಸಿ ರಕ್ಷಿಸಬೇಕು.

ಹಿಂದೂ ಸಮಾಜ ಉಚ್ಚ ನೀಚ ಎಂಬ ಭಾವನೆಗಳಿಂದ ಛಿದ್ರವಾಗದ ಒಂದೇ ಆದ ಸಮಾಜ ಎಂಬ ತತ್ತ್ವವನ್ನು ನಮ್ಮ ಸಮಾಜದ ಎಲ್ಲ ಜನರಿಗೂ ಮನದಟ್ಟಾಗುವಂತೆ ಮಾಡಬೇಕು

ಸನಾತನ ಧರ್ಮದ ಮೂಲಸೂತ್ರಗಳನ್ನು ಸಂಗ್ರಹಿಸಿ ಒಂದು ಕೈಪಿಡಿ ಯನ್ನು ಪ್ರಕಟಿಸಿ ನಮ್ಮ ಧರ್ಮದ ಉನ್ನತ ಭಾವಗಳು ಜನಸಾಮಾನ್ಯರಲ್ಲಿ ಎಲ್ಲರಿಗೂ ತಿಳಿಯುವಂತೆ ಮಾಡಬೇಕು ಉದ್ಧಾರಕ್ಕೆ ಸಾಧಕವಾದ ಯಾವ ಸಂಗತಿಯೂ ರಹಸ್ಯವಾಗಿ ಉಳಿಯಬಾರದು ಧರ್ಮದಲ್ಲಿ ಗುಟ್ಟುಗಳು ಬೇಡ, ಎಲ್ಲವೂ ರಟ್ಟಾಗಿರಲಿ

ಕ್ಷೇತ್ರಗಳನ್ನು ತೀರ್ಥಗಳನ್ನು ಕುರಿತು ಅತಿರೇಕದ ನಂಬಿಕೆಯಿಂದ ನಡೆಯುತ್ತಿರುವ ಇಂದಿನ ನಮ್ಮ ಕ್ರಮವನ್ನು ತಿದ್ದಿ, ತಪ್ಪು ತಿಳುವಳಿಕೆ, ಕುರುಡು ನಂಬಿಕೆ, ಮೂಢಭಕ್ತಿ, ಭೀತಿ, ಎಂದು ಮುಂತಾಗಿ ಈ ಮುನ್ನ ವಿವರಿಸಿರುವ ಭಾಗಗಳು ಅಸಾಧು ಎಂದು ಸ್ಪಷ್ಟವಾಗಿ ಸಾರಿ ನಮ್ಮ ಜನವನ್ನು ಈ ತಪ್ಪುಗಳ ಮುಷ್ಟಿಯಿಂದ ಬಿಡಿಸಿ ಸಂರಕ್ಷಿಸಬೇಕು

ಗುರುಪೀಠಗಳಲ್ಲಿ ಬಾಲಸಂನ್ಯಾಸಿಗಳನ್ನು ನಿಯಮಿಸುವುದು ಸಂನ್ಯಾಸ ಸಿದ್ಧಿಸದಂತೆ ಮಾಡಿದೆ ಎನ್ನುವುದನ್ನು ಮನಗಂಡು, ಸಂನ್ಯಾಸ ಗೃಹಸ್ಥಾ ಶ್ರಮದ ಅನಂತರ ವಾನಪ್ರಸ್ಥದಲ್ಲಿ ಕೆಲವುಕಾಲ ನಡೆದಮೇಲೆ ಮಾತ್ರ ಗ್ರಹಿಸ ಬಹುದಾದ ಆಶ್ರಮ ಎಂದು ನಿಯಮಮಾಡಿ ಗುರುಪೀಠಗಳ ಪಾವಿತ್ರ್ಯವನ್ನು ಸಂರಕ್ಷಿಸಬೇಕು.

ಪವಾಡಗಳನ್ನು ಮಾಡಿ ವಿಚಿತ್ರ ಶಕ್ತಿಗಳನ್ನು ಪ್ರಕಟಿಸಿ ಜನರನ್ನು

ಷಿಗಿಸುವ ಚತುರ ಜನರು ಶುದ್ಧ ಧರ್ಮದ ಪ್ರವರ್ತಕರಲ್ಲ. ಈ ಸತ್ಯವನ್ನು ಕಟಿಸಿ ಧರ್ಮದ ಆಚಾರ್ಯ ಸ್ಥಾನಗಳ ಮರ್ಯಾದೆಯನ್ನು ಸಂರಕ್ಷಿಸಬೇಕು.

## ರಕ್ಷಕ ಸಂಸ್ಥೆಗಳು

ವಿಶ್ವ ಹಿಂದೂ ಪರಿಷತ್ತು ಇದನ್ನೆಲ್ಲ ಮಾಡಬೇಕು, ಮಾಡಬಲ್ಲದು. ೋಕಹಿತೈಷಿ ಳಾದ ಬಲ್ಲ ಜನರು ಸಮಿತಿಯೊಂದನ್ನು ರಚಿಸಿ ಮಾಡಬೇಕಾದ ೀರಿ ಕೆಲಸ ಏನಿದೆ ಅದನ್ನು ನಿರ್ಧರಿಸಬೇಕು ಹೀಗೆ ಮಾಡುವಲ್ಲಿ ಮುಖ್ಯವಾಗಿ ಮ್ಮ ಧರ್ಮದ ಸುಧಾರಕ ಪಂಥಗಳೆಲ್ಲವುಗಳ ಪ್ರಮುಖರ ಸಲಹೆಗಳನ್ನು ಡೆಯಬೇಕು

ರಾಷ್ಟ್ರದಾದ್ಯಂತ ಈ ಕಾರ್ಯಕ್ರಮವನ್ನು ಕೈಗೊಳ್ಳಬೇಕಾದರೆ ಸಂಸ್ಥೆ ಾಷ್ಟ್ರದ ಒಂದೊಂದು ರಾಜ್ಯದಲ್ಲೂ ಒಂದು ಶಾಖೆಯನ್ನು ನಿರ್ಮಿಸಿ ಆಯಾ ಾ್ರಂತದಲ್ಲಿ ಕೆಲಸ ನಡೆಯಲು ಏರ್ಪಾಡು ಮಾಡಬೇಕು.

ಈ ಬಗ್ಗೆ ಬೇಕಾಗುವ ಹಣವನ್ನು ಮುಖ್ಯವಾಗಿ ಹಿಂದೂ ಸಮಾಜದಿಂದ ಚಂದಾಹಣ, ಪ್ರದಾನ, ಪೋಷಕ ಧನ, ಮುಂತಾದ ರೂಪಗಳಲ್ಲಿ ಪಡೆದು, ಒಂದು ನಿಧಿಯಾಗಿ ಮಾಡಿ, ಈ ಶಾಖೆಗಳು ಅದರ ಆಯವ್ಯಯದ ವ್ಯವಹಾರ ವನ್ನು ಸತ್ವವಂತ ಸಮರ್ಥ ಆದ ಒಂದು ಸಮಿತಿಗೆ ವಹಿಸಬೇಕು.

ಪ್ರಚಾರ ಕಾರ್ಯದಲ್ಲಿ ಪರಿಷತ್ತು ಶ್ರೀ ರಾಮಕೃಷ್ಣ ವಿವೇಕಾನಂದರ ಪ್ರತಿಷ್ಠಾನದ ಸಹಾಯವನ್ನು ಪಡೆದು ಅದರ ಶಾಖೆಗಳ ಮೂಲಕ ಪ್ರಚಾರ ನಡೆಸಿದರೆ ಕೆಲಸ ಸ್ವಲ್ಪ ಸುಲಭ ಆಗುತ್ತದೆ.

ಈ ಕೆಲಸದಲ್ಲಿ ಸಹಾಯ ಮಾಡುವುದು ಈ ಪ್ರತಿಷ್ಠಾನದ ಕಾರ್ಯಕ್ರಮದ ಒಂದು ಅಂಗವೇ ಆಗುತ್ತದೆ. ಸ್ವಾಮಿ ವಿವೇಕಾನಂದರು ತಮ್ಮ ಗುರು ಪರಮಹಂಸರ ಶಿಷ್ಯರು ಈ ಕೆಲಸವನ್ನು ಮಾಡಬೇಕೆಂದು ಬಯಸಿದರು. ಸಂಸ್ಥೆ ಈಗ ಸ್ವಾಮಿಗಳ ನಿರ್ದೇಶದ ಈ ಭಾಗದಲ್ಲಿ ತಕ್ಕ ರೀತಿಯಲ್ಲಿ ಶ್ರಮಿಸುತ್ತಿಲ್ಲ. ಸದ್ಯದ ನಮ್ಮ ಸ್ಥಿತಿಯಲ್ಲಿ ಇದು ಸಂಸ್ಥೆಯ ಕಾರ್ಯಕ್ರಮದಲ್ಲಿ ಒಂದು ಕೊರತೆಯೇ ಆಗಿದೆ. ಈ ಕೊರತೆಯನ್ನು ನೀಗಿ, ಪ್ರಚಾರ ನಡೆಸುವುದರಿಂದ ಸಂಸ್ಥೆ ಸ್ವಾಮಿಯ ಅಪ್ಪಣೆಯನ್ನು ನಡೆಸಿದಂತಾಗುವುದು.

ಪ್ರಚಾರಕ್ಕೆ ಅವಶ್ಯಕವಾದ ಸಾಹಿತ್ಯವನ್ನು ಬರೆಯಿಸುವುದು, ರಾಜ್ಯ

ಗಳಾದ್ಯಂತ ಐದು ಗ್ರಾಮ ಹತ್ತು ಗ್ರಾಮಕ್ಕೆ ಒಂದು ಎಂಬಂತೆ ಉಪಶಾಖೆಗಳನ್ನು ನಿರ್ಮಿಸುವುದು ಆಯಾ ಗ್ರಾಮ ಸಮುದಾಯದಲ್ಲಿ ಪ್ರಚಾರಕ್ಕೆ ಒಬ್ಬ ಪ್ರಚಾರಕರನ್ನು ನೇಮಿಸುವುದು, ಇವರು ಈ ಕೆಲಸಮಾಡಲು ಇವರಿಗೆ ತಕ್ಕ ಶಿಕ್ಷಣವನ್ನು ಕೊಡುವುದು, ಕಾರ್ಯಕ್ರಮದ ಅವಶ್ಯ ಭಾಗಗಳು. ಪ್ರಚಾರಕರಿಗೆ ಯುಕ್ತವೇತನವನ್ನು ಕೊಟ್ಟರೆ ತಕ್ಕಷ್ಟು ಸಂಖ್ಯೆಯಲ್ಲಿ ಧರ್ಮದ ಸೇವೆಗೆ ಜನ ದೊರಕಿಯಾರು

ಇದಿಷ್ಟು ಕಾರ್ಯವನ್ನೂ ಹಿಂದೂ ಧರ್ಮವನ್ನು ಸಂರಕ್ಷಿಸುವ ದೃಷ್ಟಿಯಿಂದ ಮಾಡುವಲ್ಲಿ ಹಿಂದೂ ಧರ್ಮ ತನ್ನನ್ನು ತಾನು ರಕ್ಷಿಸಿಕೊಳ್ಳುವುದಲ್ಲದೆ, ಸರ್ವ ಪ್ರಪಂಚದಲ್ಲಿ ಪ್ರಭಾವವನ್ನು ಕಳೆದುಕೊಳ್ಳುತ್ತಿರುವ ಇತರ ಧರ್ಮಗಳನ್ನು ರಕ್ಷಿಸುವ ಕಾರ್ಯದ ತಳಹದಿಯನ್ನೂ ಹಾಕುತ್ತದ.

ಹಿಂದೂ ಧರ್ಮ ಬೇರೆ ಮತಗಳನ್ನು ಪ್ರೀತಿಯಿಂದ ನೋಡುವ ಧರ್ಮ. ಸನಾತನ ಧರ್ಮದ ಅನುಯಾಯಿಗೆ ಮನುಜಕುಲವನ್ನು ರಕ್ಷಿಸುವ ಎಲ್ಲ ಮತಗಳೂ ಅಂಗೀಕಾರಾರ್ಹ. ವಸುಧೆಯೆಲ್ಲ ಒಂದು ಕುಟುಂಬ

ವೇದಗಳ ಕಾಲದ ಋಷಿಗಳ ಲೋಕ, ಜಾರತೂಸ್ತ್ರ ಮಹರ್ಷಿಯಲೋಕ, ಯೆಹೂದ್ಯ ಪ್ರವಾದಿಗಳ ಲೋಕ, ಬುದ್ಧ ಕ್ರಿಸ್ತ ಮಹಮ್ಮದ್ ಗುರುಗಳ ಲೋಕ, ಇವೆಲ್ಲ ಲೋಕಗಳು ಅವರವರು ಕಂಡ ಒಂದು ಅಳತೆಯ ಲೋಕಗಳು. ಈಗ ನಾವು ಲೋಕ ಎನ್ನುವುದು ಅಂದಿನ ಅಳತೆಗಳನ್ನು ಮೀರಿದ ವಿಸ್ತಾರವಾದ ಒಂದು ಲೋಕ ವಿಸ್ತಾರದ ಕಾರಣದಿಂದ ಇದು ಬೇರೆ ಲೋಕ ಎಂದೇ ಹೇಳಬಹುದು ಸನಾತನ ಧರ್ಮ ಎಲ್ಲ ಕಾಲ ಎಲ್ಲ ದೇಶಗಳಿಗೆ ಅನ್ವಯಿಸಬಲ್ಲ ಧರ್ಮ ಆಗಬೇಕು ಎಂದು ಬಯಸಿದ ಧರ್ಮ. ಇತರ ಗುರುಗಳೂ ಇದನ್ನೇ ಬಯಸಿದರು ಈಗ ಈ ಗುರಿಯನ್ನು ಸಾಧಿಸಬೇಕಾದರೆ ಈ ಮತಗಳು ಈ ವಿಸ್ತಾರವಾದ ಲೋಕವನ್ನು ಗಣನೆಗೆ ತೆಗೆದುಕೊಳ್ಳಬೇಕು ಈ ದೃಷ್ಟಿಯಿಂದ ಧರ್ಮದ ಮೂಲಪ್ರೇರಣೆಗಳನ್ನು ಕುರಿತ ಇದುವರಗಿನ ತಿಳುವಳಿಕೆಗಳನ್ನು ತಿದ್ದಿಕೊಳ್ಳಬೇಕು

ಇತಿಹಾಸದ ಇಂದಿನ ಘಟ್ಟ ಲೋಕವನ್ನೆಲ್ಲ ಸೇರಿಸಿ ನಡೆಸಬಲ್ಲ ಒಂದು ಧರ್ಮವನ್ನು ಬಯಸುತ್ತಿದೆ ಈ ಒಂದು ಧರ್ಮ ರೂಪುಗೊಳ್ಳುವುದಕ್ಕೆ ಭರತವರ್ಷದಷ್ಟು ಅನುವಾದ ದೇಶ ಇನ್ನೊಂದಿಲ್ಲ ಬೇರೆ ಎಲ್ಲ ಎಡೆಯಲ್ಲಿ

ಸೋ ಎರಡೋ ಧರ್ಮ ಮಾತ್ರ ಪ್ರಚಾರದಲ್ಲಿರುವಲ್ಲಿ ಭಾರತ ಲೋಕದ
ಸ್ತ ಮತಗಳ ಅನುಯಾಯಿಗಳ ಸಂಗ್ರಹವೆಂದಿರವಾಗಿದೆ. ಇದರಿಂದ ಇಲ್ಲಿ
ಎಲ್ಲ ಮತಗಳ ಶ್ರದ್ಧಾವಂತ ಪ್ರತಿನಿಧಿಗಳೂ ದೊರೆಯುತ್ತಾರೆ. ಸ್ವಲ್ಪ
ೀಚನೆ ಮಾಡಿದರೆ ಇವರೆಲ್ಲ ಲೋಕಕ್ಷೇಮಕ್ಕೆ ತಮ್ಮ ಎಲ್ಲಿ ಮತಗಳ
ನ್ವಯನ ಒಂದೇ ದಾರಿ ಎಂದು ಕಾಣುತ್ತಾರೆ ಈ ಬಗ್ಗೆ ತಕ್ಕ ಪ್ರಚಾರ
ಯಬೇಕು ಅಷ್ಟೆ ನಮ್ಮ ದೇಶದ ಇಸ್ಲಾಂ ಕ್ರೈಸ್ತ ಮತಗಳ ಹಿರಿಯರು
ಸಮನ್ವಯನ ಲೋಕಕ್ಕೆ ಕ್ಷೇಮವನ್ನು ತರುವುದಲ್ಲದೆ ತಮ್ಮ ಮತವನ್ನೂ
ರ್ಥಕ ಮಾಡುತ್ತದೆ ಎನ್ನುವುದನ್ನು ಕಾಣಬೇಕು ಈ ನಮ್ಮ ನೋದರ
ರತೀಯರ ಮನಸ್ಸು ಈ ದಿಕ್ಕಿನಲ್ಲಿ ಹರಿಯುವಂತೆ ಮಾಡುವುದು ಹಿಂದೂ
ತದ ನಾಯಕರ ಕರ್ತವ್ಯ ಇದು ಸಾಧ್ಯವೇ ಎಂದು ಸಂದೇಹಪಡುವುದು
ೇಡ. ಆಗಬೇಕಾದ ಕಾರ್ಯ ಸುಲಭ ಅಲ್ಲ, ದಿಟ. ಆದರೆ ಅಷ್ಟರಿಂದ ಇದು
ಧ್ಯ ಅಲ್ಲ ಎಂದು ಕೈಬಿಡುವುದು ಯುಕ್ತವಲ್ಲ. ಹೀಗಲ್ಲದೆ ಲೋಕ ಉಳಿಯು
ಂತಿಲ್ಲ ಆದ್ದರಿಂದ ಇದನ್ನು ಸಾಧಿಸಲೇಬೇಕು

ಆಯಿತು, ಈ ದುಸ್ಸಾಧ್ಯವಾದ ಕಾರ್ಯವನ್ನು ಕೈಕೊಳ್ಳಲು ನಾವು
ಕ್ತರೇ ? ನಮಗೆ ತಕ್ಕ ತಿಳಿವಳಿಕೆ ಇದೆಯೇ ?

ಈ ವಿಷಯದಲ್ಲಿ ಶಂಕೆ ಬೇಡ ಈವರೆಗೆ ಸತ್ಯವಂತ ಚೇತನರಿಗೆ ನಿತ್ಯ
ಲ್ಯಾಣತತ್ವ ತನ್ನ ಇಚ್ಛೆಯನ್ನು ತಿಳಿಸುತ್ತ ಬಂದಿದೆ. ಆ ಇಚ್ಛೆಯನ್ನು
ಳಿದೇ ಎಲ್ಲ ದೇಶಗಳಲ್ಲಿಯೂ ಇಂಥ ಚೇತನಗಳು ಮನುಜಕುಲದ ಕಲ್ಯಾಣ
ಕ್ಕಾಗಿ ತಾವು ಹೀಗೆ ತಿಳಿದ ಸತ್ವವನ್ನು ಪ್ರಕಟಿಸಿದವು. ಸ್ವಾರ್ಥವನ್ನು ತೊರೆದು
ಲೋಕಕಲ್ಯಾಣ ದೃಷ್ಟಿಯಿಂದ ನಮ್ಮ ದಿನಕ್ಕೆ ತಕ್ಕದಾದ ಧರ್ಮವನ್ನು ರೂಪಿಸ
ಬೇಕೆಂದು ಇಂದಿನ ಸತ್ಯವಂತ ಧರ್ಮಿಷ್ಠ ಚೇತನರೆಲ್ಲ ಮನಸ್ಸು ಮಾಡಿದರೆ
ಇವರಿಗೆ ಅಂತರ್ಯಾಮಿ ದೈವ ಮನುಜಕುಲದ ಕ್ಷೇಮಕ್ಕೆ ದಾರಿ ಯಾವುದು
ಎಂಬುದನ್ನು ಸ್ಪಷ್ಟವಾಗಿ ಹೇಳುತ್ತದೆ, ಆ ಹೇಳಿದ ಸಂಗತಿ ಇವರಿಗೆ ಸ್ಪಷ್ಟವಾಗಿ
ಕೇಳುತ್ತದೆ ಇವರು ಅದನ್ನು ಜನಕ್ಕೆ ಸ್ಪಷ್ಟವಾಗಿ ತಿಳಿಸಬಹುದು. ಆಗ
ಜನತೆ ಅದನ್ನು ಸಂತೋಷದಿಂದ ಒಪ್ಪಿಕೊಳ್ಳುತ್ತದೆ ಹೀಗೆ ಶ್ರುತವಾದ ಸಂಗತಿ
ಹಿಂದೆ ಎಲ್ಲ ಧರ್ಮಗಳಲ್ಲೂ ಬರೆದಿಟ್ಟಿರುವ ಸಂಗತಿಗಳಂತೆ ಲೋಕದ ಹೊಸ
ಕಾಲದ ಸ್ಮೃತಿ, ಸೂತ್ರ, ಆಗುತ್ತದೆ.